


# ಲೋಕ ಶಿಕ್ಷಣ ಟ್ರಸ್ಟ್
# ಗ್ರಂಥಮಾಲೆಯ ಪ್ರಕಟಣೆಗಳು
## ಹುಬ್ಬಳ್ಳಿ-ಬೆಂಗಳೂರು

| | | ಬೆಲೆ |
|---|---|---|
| 1. ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಸಪ್ಪ ದಾನಪ್ಪ ಜತ್ತಿ | ರೂ. 12-00 |
| 2. ಅಂತರಾತ್ಮನಿಗೆ | ಶ್ರೀ ರಂಗನಾಥ ದಿವಾಕರ | ರೂ. 5-00 |
| 3. ಗೀತೆಯ ಗುಟ್ಟು | ಶ್ರೀ ರಂಗನಾಥ ದಿವಾಕರ | ರೂ. 15-00 |
| 4. ಪುಟಾಣಿಗೆ ಶರಣರ ಕಥೆಗಳು | ಶ್ರೀಮತಿ ಜೆ.ವಿ.ಜಯಾ ರಾಜಶೇಖರ | ರೂ. 3-50 |
| 5. ಮರಳಿ ಬಂದ ಮಧುರ ಮಾಸ | ಶ್ರೀಮತಿ ಜೆ.ವಿ.ಜಯಾ ರಾಜಶೇಖರ | ರೂ. 12-00 |
| 6. ವಿಚಾರ ಜ್ಯೋತಿ | ಶ್ರೀ ಕೆ.ಟಿ.ಪಾಂಡುರಂಗಿ | ರೂ. 10-00 |
| 7. ವಚನಗಳಲ್ಲಿ ಪ್ರತಿಮೆಗಳು | ಶ್ರೀಮತಿ ಉಷಾಕಿರಣ್ | ರೂ. 25-00 |
| 8. ಶಿಶುನಾಳ ಶರೀಫ ಸಾಹೇಬರು | ಶ್ರೀ ಶಿವಾನಂದ ಗುಬ್ಬಣ್ಣವರ | ರೂ. 15-00 |
| 9. ನನಗೆ ನಾನೇ ಮಾದರಿ (ಆತ್ಮಕಥನ) | ಶ್ರೀ ಬಿ.ಡಿ.ಜತ್ತಿ | ರೂ. 40-00 |
| 10. ಕೋಟ್ಯಧೀಶ್ವರರ ಪ್ರಪಂಚದಲ್ಲಿ 60 ದಿನ | ಶ್ರೀ ಎಸ್.ಪಿ.ಭಟ್ಟ | ರೂ. 20-00 |

ಪುಸ್ತಕ ದೊರೆಯುವ ಸ್ಥಳ:

**ಸಂಯುಕ್ತ ಕರ್ನಾಟಕ ಪ್ರೆಸ್,**
**ಕೊಪ್ಪಿಕರ ರೋಡ್, ಹುಬ್ಬಳ್ಳಿ**

ವಿ.ಸೂ:- ಒಂದೊಂದು ಪುಸ್ತಕದ ಕನಿಷ್ಠ 10 ಪ್ರತಿ, ಅದಕ್ಕಿಂತಲೂ ಹೆಚ್ಚು ಖರೀದಿಸಿದಲ್ಲಿ ಶೇ. 15ರಂತೆ ಕಮೀಶನ್ ಕೊಡಲಾಗುವುದು. ಅಂಚೆ ವೆಚ್ಚ ಪ್ರತ್ಯೇಕ.




# ಕಸ್ತೂರಿ

ಕನ್ನಡ ಡೈಜೆಸ್ಟ್

ವರ್ಷ: 35
ಸಂಚಿಕೆ: 10
ಜೂನ್ 1991

ವ್ಯವಸ್ಥಾಪಕ ಸಂಪಾದಕ
ಕೆ. ಶಾಮರಾವ್

ಸಂಪಾದಕ
ಆರ್.ಎ. ಉಪಾಧ್ಯ

ನಿರ್ವಹಣೆ
ರವಿ ಬೆಳಗೆರೆ

ಮುಖಪುಟ ಚಿತ್ರ:
ಟಿ. ಅಶೋಕಕುಮಾರ



ಕಸ್ತೂರಿ ಕಾರ್ಯಾಲಯ
ಕೊಪ್ಪೀಕರ ರಸ್ತೆ
ಹುಬ್ಬಳ್ಳಿ - 580 020


## ಬೆಳಕಿಂಡಿ

★ ಬುದ್ಧಿ ಹಣದ ಸಂಪಾದನೆಗೆ ಕಾರಣವಾಗುವುದಿಲ್ಲ. ದಡ್ಡತನ ಬಡತನಕ್ಕೆ ಕಾರಣವಾಗದು. ಇದೆಲ್ಲವೂ ಅವನ ಕರ್ಮದ ಫಲದ್ವಾಗಿರುತ್ತದೆ. ಇದನ್ನು ಬುದ್ಧಿಶಾಲಿಯು ಮಾತ್ರ ಅರ್ಥ ಮಾಡಿಕೊಳ್ಳುತ್ತಾನೆ.

- ಸುಭಾಷಿತ ಸುಧಾನಿಧಿ

★ ದೋಷಗಳಿಗೆ ಹೆದರಿ ಕೆಲಸವನ್ನಾರಂಭ ಮಾಡದೇ ಇರುವದು ಹೀನ ಪುರುಷನ ಲಕ್ಷಣ. ಅಜೀರ್ಣವಾಗುವುದೆಂಬ ಭಯದಿಂದ ಊಟ ಮಾಡುವುದನ್ನು ಯಾರೂ ಬಿಡುವುದಿಲ್ಲ.

- ಹಿತೋಪದೇಶ

★ ಸಣ್ಣ ತಪ್ಪುಗಳನ್ನು ಸಹಿಸಬೇಕು. ಸ್ವಲ್ಪ ಏಳಿಗೆಯಾದರೂ ಸಂತೋಷ ಪಡಬೇಕು. ಪ್ರತ್ಯಕ್ಷವಾಗಿ ಹೆಚ್ಚು ಉಪಕಾರ ಮಾಡಿದವರನ್ನು ಆತ್ಮೀಯತೆಯಿಂದ ಗೌರವಿಸಬೇಕು.

- ಕೌಟಿಲ್ಯ


ಚಂದಾ ದರಗಳು

| | | |
|---|---|---|
| ಬಿಡಿ ಸಂಚಿಕೆ | ...... | ರೂ.3-00 |
| 1 ವರ್ಷಕ್ಕೆ | ಅಂಚೆ ಸೇರಿ | ರೂ.34-00 |
| 2 ವರ್ಷಕ್ಕೆ | ಅಂಚೆ ಸೇರಿ | ರೂ.65-00 |
| 3 ವರ್ಷಕ್ಕೆ | ಅಂಚೆ ಸೇರಿ | ರೂ.100-00 |

ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ 1ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ 5ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರ ವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

KASTURI

JUNE 1991

# ಸಾಹಿತ್ಯಚಿಂತನ

## ಭಾರತಕ್ಕೆ ಕ್ರಿಸ್ತನ ಭೇಟಿ

ಕಸ್ತೂರಿಯ ಮೇ ತಿಂಗಳ ಸಂಚಿಕೆಯಲ್ಲಿ ಪ್ರಕಾಶಿತವಾಗಿರುವ ಯೇಸುಕ್ರಿಸ್ತನು ಭಾರತಕ್ಕೆ ಬಂದಿದ್ದನೆ? ಎಂಬ ಲೇಖನಕ್ಕೆ ಪೂರಕವಾಗಿ ಈ ಲೇಖನ. ಕ್ರಿಸ್ತನನ್ನು ಶಿಲುಬೆಗೆ ಹಾಕಿದಾಗ ಅದರ ಮೇಲೆ ಅವನು ಸಾಯಲಿಲ್ಲ ಮತ್ತು ಅವನನ್ನು ಶಿಲುಬೆಯಿಂದ ಇಳಿಸಿದಾಗ ಅವನು ಜೀವಂತವಾಗಿದ್ದಿರಬೇಕು ಎಂಬ ವಾದವನ್ನು ನಾನು ಇಲ್ಲಿ ಪ್ರಸ್ತಾಪಿಸುತ್ತಿಲ್ಲ. ಕಾರಣ, ಆ ವಾದಕ್ಕೆ ಇರುವ ಆಧಾರಗಳನ್ನು ತಮ್ಮ ಪತ್ರಿಕೆಯ ಲೇಖನದಲ್ಲಿಯೇ ಉಲ್ಲೇಖಿಸಲಾಗಿದೆ. ನಾನು ಚರ್ಚಿಸುತ್ತಿರುವುದು ಬೇರೆ ಒಂದು ಪ್ರಮುಖ ಆಧಾರ ಗ್ರಂಥದಲ್ಲಿ ಬರುವ ಸಂಗತಿಗಳು.

ಕ್ರಿಸ್ತನ ಬಗ್ಗೆ ಒಂದು ಪ್ರಸ್ತಾಪವು ಭಾರತದ ಪುರಾಣಗಳಲ್ಲಿ ಒಂದಾದ ಭವಿಷ್ಯ ಪುರಾಣದಲ್ಲಿದೆ ಎಂದರೆ ಅನೇಕರಿಗೆ ವಿಸ್ಮಯವಾಗಬಹುದು. ಭವಿಷ್ಯಪುರಾಣವು ಅಷ್ಟೇನೂ ಪ್ರಸಿದ್ಧವಲ್ಲದ ಪುರಾಣಗಳಲ್ಲಿ ಒಂದು. ಇದು ಅನೇಕ ಭಾಗಗಳನ್ನು ಒಳಗೊಂಡು ಭಾರತದ ಕೆಲವು ಐತಿಹಾಸಿಕ ಸಂಗತಿಗಳನ್ನು ಪ್ರಸ್ತಾಪಿಸಿದೆ. ಇಲ್ಲಿ ನಮಗೆ ಮುಖ್ಯವಾಗಿರುವುದು ಭವಿಷ್ಯ ಪುರಾಣದ ಭಾಗ ಎಂಟು, ಪ್ರತಿಸರ್ಗ ಪರ್ವ - ಖಂಡ ಮೂರು ಮತ್ತು ಅದರ ದ್ವಿತೀಯ ಅಧ್ಯಾಯದ ಇಪ್ಪತ್ತೊಂದನೇಯ ಶ್ಲೋಕದಿಂದ ಪ್ರಾರಂಭವಾಗಿರುವ ಹತ್ತು ಶ್ಲೋಕಗಳು. ಕನ್ನಡ ಅನುವಾದದ ಪ್ರಕಾಶಕರು ಶ್ರೀ ಜಯಚಾಮರಾಜೇಂದ್ರ ಗ್ರಂಥ ಮಾಲೆ, ಮೈಸೂರು.

ಈ ಮೇಲೆ ತಿಳಿಸಿದ ಶ್ಲೋಕಗಳಲ್ಲಿ, ಶಾಲಿವಾಹನನು ಕ್ರಿಸ್ತನನ್ನು ಭೇಟಿ ಮಾಡಿದ್ದನು ಎಂಬ ಅಂಶ ಇರುವ ಹಾಗೆ ತೋರುತ್ತದೆ. ಶಾಲಿವಾಹನನು ನಮ್ಮ ದೇಶದ ಅತ್ಯಂತ ಸಮರ್ಥ ಮತ್ತು ಬಲಶಾಲಿಯಾದ ಸಾಮ್ರಾಟರಲ್ಲಿ ಒಬ್ಬ. ಅವನು ಕ್ರಿಸ್ತನ ಸಮಕಾಲೀನ ಎಂಬುದು ಐತಿಹಾಸಿಕ ಸತ್ಯ. ಅವನು ನಮ್ಮ ದೇಶವನ್ನು ಒಂದುಗೂಡಿಸಿ, ನಮ್ಮ ದೇಶದ ಗಡಿ ಭಾಗಗಳನ್ನು ಆಕ್ರಮಿಸಿಕೊಂಡಿದ್ದ ವಿದೇಶಿ ಶಕ್ತಿಗಳನ್ನು ಸೋಲಿಸಿ ಹೊರ ಹಾಕುತ್ತಾನೆ. ಹಾಗೆ ಮಾಡಿದ ಮೇಲೆ ಸಿಂಧು ನದಿಯನ್ನು ಭಾರತದ ಪಶ್ಚಿಮ ಗಡಿಯೆಂದು ಇತ್ಯರ್ಥಪಡಿಸುತ್ತಾನೆ. ಈ ವಿಚಾರವನ್ನು ತಿಳಿಸಿರುವ ಇಪ್ಪತ್ತೊಂದನೇಯ ಶ್ಲೋಕವು, ಅನಂತರ ಶಾಲಿವಾಹನನು ಹಿಮತುಂಗ ಎಂಬ ಪ್ರದೇಶಕ್ಕೆ ಪ್ರಯಾಣ ಮಾಡಿದನೆಂದು ಹೇಳಿದೆ. ಮುಂದೆ ಬರುವ ಇಪ್ಪತ್ತೆರಡು ಮತ್ತು ಇಪ್ಪತ್ತಮೂರನೇಯ ಶ್ಲೋಕಗಳು ಅತ್ಯಂತ ಮುಖ್ಯವಾದುದರಿಂದ ಅವುಗಳ ಪೂರ್ಣ ಪಾಠವನ್ನು ಮತ್ತು ಅನುವಾದವನ್ನು ಇಲ್ಲಿ ಪ್ರಸ್ತುತಗೊಳಿಸಿದ್ದೇನೆ.

ಹೂಣ ದೇಶಸ್ಯ ಮಧ್ಯೆ ಮೆ ಗಿರಿಸ್ಥಂ
ಪುರುಷಂ ಶುಭಂ
ದದರ್ಶ ಬಲವಾನ್ರಾಜಾ ಗೌರಾಂಗಂ ಶ್ವೇತ ವಸ್ತ್ರಕಂ।

(ಹೂಣ ದೇಶದ ಮಧ್ಯೆ ಇರುವ ಆ ಪರ್ವತದಲ್ಲಿ ಸುಂದರನೂ, ಶುಭ್ರವಾದ ಶ್ವೇತ ವಸ್ತ್ರವನ್ನು ಧರಿಸಿದವನೂ, ಗೌರವವರ್ಣದ ದೇಹವುಳ್ಳವನೂ, ಬಲಶಾಲಿಯೂ ಆದ ಪುರುಷನೊಬ್ಬನನ್ನು ನೋಡಿದನು)

ಕೋ ಭವಾನಿತಿ ತಂ ಪ್ರಾಹ ಸ ಹೋವಾಚ
ಮುದಾನ್ವಿತಃ
ಈಶ ಪುತ್ರಂ ಚ ಮಾಂ ವಿದ್ಧಿ ಕುಮಾರಿ ಗರ್ಭಸಂಭವಂ।

(ಆಗ ಆತನನ್ನು ಕುರಿತು ''ನೀನು ಯಾರು'' ಎಂದು ಪ್ರಶ್ನಿಸಿದನು. ಅದಕ್ಕೆ ಆತನು ''ನಾನು ಈಶ ಪುತ್ರನು, ಕುಮಾರಿ ಗರ್ಭಸಂಭೂತನು'' ಎಂದು ಹೇಳಿದನು)

ಈ ಮೇಲಿನ ವಾಕ್ಯಗಳಲ್ಲಿ, ಸಾಧುವಿನ ವರ್ಣನೆಯು ಕ್ರಿಸ್ತನಿಗೆ ಸರಿಹೊಂದುತ್ತವೆ ಎಂದು

ಊಹಿಸಬಹುದು, ಅಷ್ಟೆ. ಉದಾಹರಣೆಗಾಗಿ, ಶ್ವೇತ ವರ್ಣ, ಎತ್ತರವಾದ ನಿಲುವು, ಸುಂದರ ವಾದ ಮುಖ ಮತ್ತು ಶ್ವೇತವಸ್ತ್ರ. ಈ ಊಹೆ ಯನ್ನು ಸಮರ್ಥಿಸಲು ಮುಂದಿನ ವಾಕ್ಯದಲ್ಲಿ ನಾವು ಕ್ರಿಸ್ತನು ತನ್ನನ್ನು ಈಶ ಪುತ್ರನೆಂತಲೂ ಮತ್ತು ಒಬ್ಬ ಕನ್ಯೆಗೆ ಹುಟ್ಟಿದವನೆಂದು ಹೇಳಿಕೊಂಡಿರುವುದನ್ನು ಓದುತ್ತೇವೆ. ಆದರೆ ಇಲ್ಲಿ ಎರಡು ಸಂಶಯಗಳಿವೆ. ಹೂಣ ದೇಶವೆಂಬುದು ಕಾಶ್ಮೀರವೇ ಎಂಬುದು ಒಂದು ಸಂದೇಹ. ಹಿಮತುಂಗವೆಂದು ಒಂದು ಶಬ್ದ ವಿದೆ ನಿಜ. ಆದರೆ ಈ ಹಿಮ ತುಂಗವಿರುವ ಹೂಣ ದೇಶವೇ ಕಾಶ್ಮೀರ ಎಂದು ಸಿದ್ಧವಾಗುವುದಿಲ್ಲ. ಅದಾಗ್ಯೂ, ಶಾಲಿವಾಹನನು ಈ ಸಾಧುವನ್ನು ಸಂಧಿಸಿದನೆಂದು ಹೇಳಿರುವುದರಿಂದ, ಈ ಭೇಟಿಯು ಭಾರತದಲ್ಲಿಯೇ ಆಗಿರಬೇಕೆಂದು ಊಹಿಸಬಹುದು.

ಇನ್ನು ಈ ಗೌರವರ್ಣದ ಸಾಧುವು ಏಸು ಕ್ರಿಸ್ತನೇ ಎಂಬುದು ಇನ್ನೊಂದು ಪ್ರಶ್ನೆ. ಬೈಬಲ್ಲಿನ ಪ್ರಕಾರ, ಕ್ರಿಸ್ತನು ಅನೇಕ ಕಡೆ ತನ್ನ ಶಿಷ್ಯರೊಡನೆ ಮಾತನಾಡುವಾಗ ತಾನು ದೇವರ ಮಗ (ಇಲ್ಲಿ ಈಶ ಪುತ್ರ, ಎಂದಂತೆ) ಎಂಬುದಾಗಿ ಹೇಳಿಕೊಂಡಿದ್ದಾನೆ. ಕೆಲವು ಕಡೆ ತಾನು ಮಾನವನ ಪುತ್ರನೆಂದೂ ಹೇಳಿರುವದು ಬೇರೆ ವಿಚಾರ. ಭವಿಷ್ಯ ಪುರಾಣದ ಪ್ರಕಾರ ತಾನು ಒಬ್ಬ ಕನ್ಯೆಗೆ ಜನಿಸಿದವನೆಂದೂ ಹೇಳಿದ್ದಾನೆ. ಆದರೆ ಬೈಬಲ್ಲಿನಲ್ಲಿ ಎಲ್ಲಿಯೂ ಕೂಡ ಏಸು ಕ್ರಿಸ್ತನು ತಾನು ಒಬ್ಬ ಕನ್ಯೆ ಅಥವಾ ಕುಮಾರಿಗೆ ಜನಿಸಿದವನೆಂದು ಹೇಳಿಕೊಂಡಿಲ್ಲ. ಹಾಗೆ ನೋಡಿದರೆ ಈತನು ತನ್ನ ಮಾತಾಪಿತರು ಯಾರು ಎಂಬ ಬಗ್ಗೆ ಒಂದು ಮಾತನ್ನೂ ಆಡಿಲ್ಲ. ಬೈಬಲ್ಲಿನಲ್ಲಿ ನಾಲ್ಕು ಸುವಾರ್ತೆಗಳಿವೆ. ಇವು ಕ್ರಿಸ್ತನ ಜೀವನ ಚರಿತ್ರೆಗಳು. ಇವುಗಳಲ್ಲಿ ಎರಡು ಕ್ರಿಸ್ತನ ಜನನದ ಕಥೆಯನ್ನು ಹೇಳಿಯೇ ಇಲ್ಲ. ಸಂತ ಮಾರ್ಕ್ ಮತ್ತು ಸಂತ ಜಾನ್, ಇವರಿಬ್ಬರೂ ಬರೆದ ಸುವಾರ್ತೆಗಳು ಕ್ರಿಸ್ತನ ಜನನದ ಬಗ್ಗೆ ಯಾವ ಪ್ರಸ್ತಾಪವನ್ನೂ ಮಾಡದೆ, ನೇರವಾಗಿ ವಯಸ್ಕ ಏಸುವಿನ ಜೀವನ ಮತ್ತು ಬೋಧನೆಯನ್ನು ಮಾತ್ರ ವಿವರಿಸಿವೆ. ಆತನು ಮೇರಿ ಎಂಬ ಒಬ್ಬ ಕನ್ಯಾಕುಮಾರಿಯ ಮಗನೆಂದು ಉಳಿದ ಎರಡು ಸುವಾರ್ತೆಗಳು ಮಾತ್ರ ತಿಳಿಸಿವೆ. ಹೀಗಿರುವಾಗ ಏಸು ಕ್ರಿಸ್ತನು (ಏಸುಕ್ರಿಸ್ತನಾಗಿರಬಹುದಾತನು) ಶಾಲಿವಾಹನನ ಜತೆ ಮಾತನಾಡುವಾಗ ತಾನು ಒಬ್ಬ ಕುಮಾರಿಗೆ ಜನಿಸಿದವನೆಂದು ಹೇಳಿಕೊಂಡಿರುವುದು ಆಶ್ಚರ್ಯದ ಸಂಗತಿಯೇ ಸರಿ. ಮುಂದಿನ ಕೆಲವು ಶ್ಲೋಕಗಳಲ್ಲಿ ಕ್ರಿಸ್ತನು ತಾನು ಪ್ರತಿಪಾದಿಸಿದ ಧರ್ಮದ ಕೆಲವು ಅಂಶಗಳನ್ನು ವಿವರಿಸುತ್ತಾನೆ. ಇದು ಶಾಲಿವಾಹನನ ಪ್ರಶ್ನೆಗೆ ಉತ್ತರ ರೂಪದಲ್ಲಿದೆ. ಇದರಲ್ಲಿ ಸತ್ಯ, ನ್ಯಾಯ, ಸೂರ್ಯಮಂಡಲದಲ್ಲಿ ಪ್ರತಿಷ್ಠಿತನಾಗಿರುವ ಪರಮಾತ್ಮನ ಧ್ಯಾನ ಇತ್ಯಾದಿ ಮಾತುಗಳಿವೆ. ಈ ವಿಧಾನಗಳು ಹಿಂದೂ ಧರ್ಮದ ಉಪದೇಶಗಳಿಗೆ ಅನುಗುಣವಾಗಿವೆಯೇ ವಿನಾ, ಕ್ರಿಸ್ತನದೆಂದು ಹೇಳಲಾದ ಬೈಬಲ್ಲಿನ ಉಪದೇಶಗಳಿಗಲ್ಲ. ಏಸು ಕ್ರಿಸ್ತನ ಭೋದನೆಗಳಾದರೋ, ಮಾನವನು ತನ್ನ ಪಾಪಗಳಿಗೆ ಪಶ್ಚಾತ್ತಾಪಪಡುವುದು, ದೇವರಲ್ಲಿ ಕ್ಷಮೆ ಕೇಳುವದು, ದೇವರ ಕ್ಷಮಾಶೀಲತೆ, ಮಾನವರಲ್ಲೂ ಇರಬೇಕಾದ ಕ್ಷಮಾಗುಣ, ಪ್ರೀತಿ ಮತ್ತು ಸತ್ತ ನಂತರ ಸ್ವರ್ಗದಲ್ಲಿ ಶ್ರದ್ಧಾಳುಗಳಿಗೆ ಸ್ಥಾನ ಮುಂತಾದ ವಿಚಾರಗಳನ್ನು ಒತ್ತಿ ಹೇಳುತ್ತವೆ. ಇಷ್ಟು ಹೇಳಿದ ಮೇಲೂ ಇಪ್ಪತ್ತೆರಡು ಮತ್ತು ಇಪ್ಪತ್ತಮೂರನೇಯ ಶ್ಲೋಕಗಳು ಕ್ರಿಸ್ತನಿಗೆ ಸರಿ ಹೋಗುವಂತೆ ಕಾಣುತ್ತದೆ. ಶಾಲಿವಾಹನನು ಈ ಸಾಧುವಿಗೆ ಸಮಸ್ತ ಅನುಕೂಲಗಳನ್ನೂ ಗೌರವದಿಂದ ಏರ್ಪಡಿಸಿಕೊಟ್ಟನೆಂದೂ ಮುಂದಿನ ಕೆಲವು ಶ್ಲೋಕಗಳಿಂದ ತಿಳಿದು ಬರುತ್ತದೆ. ಏಸುಕ್ರಿಸ್ತನನ್ನು ನಮ್ಮ ಇತಿಹಾಸ ಪ್ರಸಿದ್ಧ ಶಾಲಿವಾಹನ ಚಕ್ರವರ್ತಿಯು ಭಾರತದಲ್ಲಿಯೇ ಭೇಟಿಯಾಗಿದ್ದನೆಂಬುದು ಮತ್ತು ಭಾರತದಲ್ಲಿ ಈ ಶ್ರೇಷ್ಠ ಪುರುಷ ಅತಿಥಿಯಾಗಿ ಉಳಿದುಕೊಂಡನೆಂಬುದೂ ಐತಿಹಾಸಿಕ ಸಂಗತಿಗಳಾಗಿದ್ದರೆ ಅವು ಭಾರತೀಯರು ಹೆಮ್ಮೆ ಪಡಬೇಕಾದ ವಿಚಾರವೇ ಸರಿ.

ಬೆಂಗಳೂರು — ಕೆ.ದ್ವಾರಕನಾಥ

# ಈ ಸಂಚಿಕೆಯಲ್ಲಿ



## ಪುಸ್ತಕ ವಿಭಾಗ

ಆಕೆಯ ಪತಿ ಏಡ್ಸ್ ರೋಗಿಯಾಗಿದ್ದ!

# ಏಡ್ಸ್: ಮರಣ ಮೇಜವಾನಿ



ಇಲ್ಲ!

ನನ್ನಲ್ಲಿಂದು ಕತೆ ಚಿಗುರುತ್ತಿಲ್ಲ. ಕನಸು ಅರಳುತ್ತಿಲ್ಲ. ಎಲ್ಲಿಂದಲೋ ಎದ್ದು ಬಂದ ವಿಷಾದ ಗೀತೆಯೊಂದು ನನ್ನನ್ನು ಕಂಗೆಡಿಸಿದೆ. ಅವಳ ಹಾಡು ನಿಮಗೆ ಕೇಳಿಸಬೇಕು. ಆ ವ್ಯಥೆ ನಿಮಗೆ ಅರುಹಬೇಕು. ಆ ಲೋಕನಿಂದಿತ ಜೀವಿಗಳು ಇಡೀ ಜಗತ್ತಿನಿಂದ ದೂರಾಗಿ, ಬೇರೆಯಾಗಿ, ತಬ್ಬಲಿಗಳಾಗಿ ನಿಂತು ಮಾಡುತ್ತಿರುವ ಆಕ್ರಂದನ ನೀವೆಲ್ಲ ಕೇಳಬೇಕು. ನಕ್ಷತ್ರಲೋಕದ ಗಾರುಡಿಯ ಕತೆಗಳಿನ್ನು ನಾನು ಬರೆಯಲಾರೆ. ನನ್ನೊಳಗಿನ ಕತೆಗಾರ ಸತ್ತಿದ್ದಾನೆ. ಸಾವಿನ ಹುತ್ತದ ಕೊಪೆಯೊಳಗಿನಿಂದ ಕೇಳಿ ಬರುವ ಕೂಗು ನಿಮ್ಮ ತನಕ ತಲುಪಿದರೆ, ಅಷ್ಟು ಸಾಕು.

ನಿಮಗವಳು ಗೊತ್ತಿಲ್ಲ. ಈಗಿನ್ನೂ ಇಪ್ಪತ್ತಾರು ತುಂಬಿದವಳು. ಕುಂಕುಮಕ್ಕೇ ನಾಚಿಕೆಯಾಗುವಂಥ ಕೆಂಪು ಅವಳ ಕೆನ್ನೆಗಳಲ್ಲಿ. ನಕ್ಷತ್ರದ

ರವಿ ಬೆಳಗೆರೆ

ಹೊಳಪು ಕಣ್ಣುಗಳಿಗೆ ನಡೆದರೆ ನದಿಯಂತೆ. ಮಾತು ವೀಣೆ ನುಡಿದಂತೆ. ಮನಸ್ಸು ಮುಂಜಾವಿನ ಭಾವಗೀತೆಯಂತೆ. ಅವಳ ಮನೆಯ ತೊಟ್ಟಿಲು ಅಲುಗತೊಡಗಿ ಏಳೇ ಏಳು ತಿಂಗಳಾಗಿವೆ. ಹಾಲುಗಲ್ಲದ ಕೂಸು ಸದ್ದಿಲ್ಲದೆ ನಗು

ತ್ತದೆ, ನಿದ್ದೆಯಲ್ಲಿ.

ಬಾಗಿಲಲ್ಲಿ ನಿಂತಿದ್ದಾಳೆ, ನಿರೀಕ್ಷೆಯೆಲ್ಲ ಹೆಪ್ಪಾದಂತೆ ಸಂಜೆ ಏಳರ ಹೊತ್ತು. ಬರಬೇಕಾದವನು ಬಂದಿಲ್ಲ. ಅವನ ಸುದ್ದಿಯಾದರೂ ಬಂದೀತೆಂಬ ಆಸೆ. ಮನೆಯ ವರಾಂಡದಲ್ಲಿ ಟೀಪಾಯಿಯ ಮೇಲಿನ ಫೋನು ಅದೇಕೋ ಮುಗುಮ್ಮಾಗಿ ಕುಳಿತಿದೆ. ಏನಾಯಿತೋ ಏನೋ. ದೇವರೇ! ಏನೂ ಆಗದಿರಲಿ! ಅವನ ಸುದ್ದಿಯಾದರೂ ಬರಲಿ ..... ಅವಳು ಕಾಯುತ್ತಲೇ ಪ್ರಾರ್ಥಿಸುತ್ತಾಳೆ. ಆದರೆ 'ತಥಾಸ್ತು' ನುಡಿಯುವ ದೇವತೆಗಳು ಆಗಸದಲ್ಲಿಲ್ಲ. ಸಂಜೆಗತ್ತಲು ಪೂರ್ತಿ ಸುತ್ತಿಕೊಂಡಾಗ ಮನೆಯೊಳಗಿನ ಬೆಳಕು ಮೈಚಳಿ ಬಿಟ್ಟು ಬೆಳಗತೊಡಗುತ್ತದೆ.

ಇದ್ದಕ್ಕಿದ್ದಂತೆ ಮೌನ ಮುರಿದು ಫೋನು ದನಿಯೆತ್ತಿದಾಗ ವರಾಂಡಕ್ಕೆ ನುಗ್ಗಿ ಬರುತ್ತಾಳೆ. ಢವಗುಡುವ ಎದೆ ಹೊತ್ತು ಕಿರಿಚುತ್ತಾಳೆ .....

''ಹಲೋ ....''

''ನಾನು ...... ಮಾತಾಡ್ತಿರೋದು .....''

ಅತ್ತಲಿಂದೊಂದು ಕ್ಷೀಣ ದನಿ.

''ಗೊತ್ತಾಯ್ತು ..... ಹೇಗಿದೀರೀ? .....''

ಮೈಯ್ಯೆಲ್ಲ ದನಿಯಾಗಿ ಕೂಗುತ್ತಾಳೆ.

''ಇವತ್ತು ರಕ್ತ ಪರೀಕ್ಷೆಯ ರಿಜಲ್ಟು ಬಂತು ....''

''ಏನಂತೆ?''

'' ...... ''

''ಹೇಳಿ ..... ಏನು ಬಂದಿದೆ ರಿಜಲ್ಟು?''

ಚೀರಿ ಚೀರಿ ಕೇಳುತ್ತಾಳೆ.

''ಅದು ... ಅದು ... ಖಾತ್ರಿಯಾಗಿದೆ!''

ಅತ್ತಲಿಂದ ನುಡಿಯುತ್ತದೆ ದನಿ.

''ಭಗವಂತಾ!'' ಅವಳು ಕುಸಿಯುತ್ತಾಳೆ. ಫೋನು ಬಾವಲಿಯಂತೆ ತಂತಿಗೆ ಜೋತಾಡುತ್ತದೆ. ಇದ್ದಕ್ಕಿದ್ದಂತೆ ಆ ಕೋಣೆಯಲ್ಲಿ ಗಾಳಿ ಸ್ತಬ್ಧವಾಗುತ್ತದೆ. ಬೆಳಕು ಕ್ಷೀಣವಾಗುತ್ತದೆ. ಲಕ್ಷಾಂತರ ವರ್ಷಗಳ ಹಿಂದೆ ಹೂತಿಟ್ಟ ಹೆಣ ಧಿಡಗ್ಗನೆ ಎದ್ದು ಕೂತು ಆಕಳಿಸಿದಂಥ ಭಾವ. ತೊಟ್ಟಿಲೊಳಗಿನ ಮಗು ಕಿಟಾರನೆ ಕಿರುಚತೊಡಗುತ್ತದೆ.

1985ರ ಏಪ್ರಿಲ್ 16, ಅವಳ ಬದುಕಿನ ಅತ್ಯಂತ ಕೆಟ್ಟ ದಿನ. ಅಂದು ಸಂಜೆ ಎಂಟರ ಹೊತ್ತಿಗೆ ಅವಳಿಗೆ ಆ ಸುದ್ದಿ ತಲುಪಿತ್ತು. ಅವಳ ಗಂಡ ಏಡ್ಸ್ ರೋಗಿ! ಸುದ್ದಿ ತಿಳಿದ ಕೂಡಲೆ ಎಚ್ಚರ ತಪ್ಪಿದಳು. ಪ್ರಜ್ಞೆ ಬಂದಾಗ ಸತ್ಯಗಳು ಮತ್ತಷ್ಟು ಘನೀಭವಿಸಿ ಕಣ್ಣೆದುರಿಗೆ ನಿಂತಿದ್ದವು. ಮನೆಯಂಗಳಕ್ಕೆ ಬಂದು ನಿಂತ ತೋಳ ಹಸಿದಿದೆ. ಅದು ಬರಿಗೈಲಿ ಹಿಂತಿರುಗುವುದಿಲ್ಲ. ಏಡ್ಸ್ ವ್ಯಾಧಿಗೆ ಔಷಧಿಯಿಲ್ಲ.

ಮದುವೆಯಾಗಿ ಇನ್ನೂ ಎರಡು ವರ್ಷ ಕಳೆದಿಲ್ಲ. ಪುಟ್ಟ ಮಗುವಿಗೆ ಏಳು ತಿಂಗಳು. ಮಲ್ಲಿಗೆ ಬಳ್ಳಿ ಸಿಡಿಲು ತಡೆದೀತೆ? ಅವಳ ಕೆನ್ನೆ ಬದುಕಿಗೆ ಕನಸು ಕೊಟ್ಟವನು, ಮಾತಿಗೊಮ್ಮೆ ಮುತ್ತು ಕೊಟ್ಟವನು, ಒಡಲಿಗೆ ಜೀವ ಫಲವಿತ್ತವನು ...... ಇನ್ನವನು ಬದುಕಲಾರ! ಸಾವು ಯಾರಿಗೂ ತಪ್ಪಿದ್ದಲ್ಲವೆಂಬ ವೇದಾಂತ ಅವಳಿಗೂ ಗೊತ್ತು. ಆದರೆ ಎಂಥ ಸಾವು? ಯಾವ ಶತ್ರುವಿಗೂ ಬೇಡ. ರೋಗವಾದರೂ ಎಂಥದು ....! ನರಳಿ ನರಳಿ, ಕೃಶಿಸಿ, ಮೈಯ್ಯೆಲ್ಲ ಹುಣ್ಣಾಗಿ, ಗಡ್ಡೆಗಳಾಗಿ, ಸಾಯಲೊಲ್ಲದ ಜೀವ, ಸಾಯಬಾರದ ವಯಸ್ಸು ..... ಆದರೆ ಸಾವು ಇಷ್ಟಿಷ್ಟೇ ತೆವಳಿ ಮೈ ತುಂಬ ಆವರಿಸಿ ನಿಧಾನವಾಗಿ ಮುಗಿಸಿಬಿಡುತ್ತದೆ.

ಅದೇನನ್ನಿಸಿತೋ ..... ತಟ್ಟನೆ ಮೇಲೆದ್ದಳು. ಬಾವಲಿಯಂತೆ ನೇತಾಡುತ್ತಿದ್ದ ಫೋನು ಸರಿಯಾಗಿಟ್ಟಳು. ಅತ್ತು ಅತ್ತು ನಿದ್ರೆಗೆ ಜಾರಿದ ತೊಟ್ಟಿಲ ಮಗುವಿನ ಕೆನ್ನೆ ನೇವರಿಸಿದಳು. ಬೆರಳಿಗೆ ಬೆಚ್ಚನೆಯ ಕಣ್ಣ ಹನಿ ತಾಕಿದವು. ಆದರೆ ಅವಳ ಕಣ್ಣು ಒಣಗಿದ ಜಲಪಾತಗಳು. ಅದೇನೋ ಆವೇಶ ಅವಳನ್ನು ಮುತ್ತಿಕೊಂಡಿತ್ತು. ಸರಸರನೆ ಹೋಗಿ ತಮ್ಮ ಬೆಡ್‌ರೂಮಿನ ಕಪಾಟಿನಲ್ಲಿ ಜೋಡಿಸಿಟ್ಟ ಪುಸ್ತಕ, ಪತ್ರಿಕೆಗಳನ್ನು ಕಿತ್ತಾಡತೊಡಗಿದಳು. ಐದು ನಿಮಿಷದೊಳಗಾಗಿ ರೂಮು ರಣರಂಗದಂತಾಗಿತ್ತು. ಅವಳಿನ್ನೂ ಹುಡುಕುತ್ತಲೇ ಇದ್ದಾಳೆ. ಎಂದೋ ಅರ್ಥ ಓದಿ

ಎತ್ತಿಟ್ಟ ನೆನಪು. ಯಾವುದೋ ಹಳೆಯ ಪತ್ರಿಕೆ. ಎತ್ತಿಟ್ಟು ಎರಡು ವರ್ಷಗಳೇ ಆಗಿರಬೇಕು. ಹಾಂ ಸಿಕ್ಕಿತು! ಪತ್ರಿಕೆಯ ಹಾಳೆಗಳನ್ನು ಪರಪರನೆ ಬಿಡಿಸಿದಳು.

''ಏಡ್ಸ್ ..... ಅದಕ್ಕಿನ್ನೂ ಮದ್ದು ದೊರೆತಿಲ್ಲ!'' ಲೇಖನ ಅಚ್ಚಾಗಿತ್ತು. ಎಲ್ಲ ದುಗುಡ ಮರೆತು ನಿಧಾನವಾಗಿ ಒಂದೊಂದೇ ಸಾಲು ಓದತೊಡಗಿದಳು.

''1981ರಲ್ಲಿ ಅಮೆರಿಕ ಮತ್ತು ಫ್ರಾನ್ಸ್ ದೇಶಗಳಲ್ಲಿ ಧಿಡೀರನೆ ಎದ್ದು ನಿಂತ ಈ ಸಾವಿನ ದೂತನಂತಹ ರೋಗಕ್ಕೆ AIDS ಎನ್ನುತ್ತಾರೆ. ದೇಹದಲ್ಲಿ ಸಹಜವಾಗಿರಬೇಕಾದ ರೋಗನಿರೋಧಕ ಶಕ್ತಿ ಸಂಪೂರ್ಣವಾಗಿ ನಶಿಸಿ ಹೋಗುವ ರೋಗವೆ ಏಡ್ಸ್! (Acvired Immune Deficiency Syndrome) ಮನುಷ್ಯ ದೇಹದೊಳಗಿನ ರೋಗ ಪ್ರತಿರೋಧ ಶಕ್ತಿಯನ್ನು ನಾಶಗೊಳಿಸುವ ವೈರಸ್‌ಗೆ H.I.V. (Human Immuno definiency Virus) ಅಂತಾರೆ. ಒಂದು ಸಲ ಮನೆಯೊಳಗೆ ಕಾಲಿಟ್ಟರೆ ತಿರುಗಿ ಹೋಗದ ಅತಿಥಿ ಈ HIV ವೈರಸ್. ಇದಕ್ಕೆ ಮದ್ದಿಲ್ಲ. ಇದರ ಸೋಂಕು ತಡೆಯುವ ಲಸಿಕೆಯಿಲ್ಲ. ಸಾವು ನಿಶ್ಚಿತ!''

ತಟ್ಟನೆ ಓದುವುದು ನಿಲ್ಲಿಸಿದಳು. ಇದೆಂಥ ಶಾಪ? ಯಾವ ತಪ್ಪಿಗೆ ಶಿಕ್ಷೆ? ತನ್ನ ಗಂಡ ಏನು ಮಾಡಿದ್ದಾನೆ. ಪೂರ್ವ ಜನ್ಮದ ಶಾಪದ ಫಲವೇ? ಪ್ರಶ್ನೆಗಳ ಸಾಲು ದೊಡ್ಡದಿತ್ತು. ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಮಿದುಳಲ್ಲಿ ಮೊಳೆತು ನಿಂತ ಹಳವಂಡಗಳನ್ನು ಆಚೆ ನೂಕಿ ಕಣ್ಣೆದುರಿನಲ್ಲಿ ಸಾಲುಗಳನ್ನು ಒಂದೊಂದಾಗಿ ನುಂಗತೊಡಗಿದಳು. ಹೆಮ್ಮಾರಿಯಂಥ ರೋಗ ಹುಟ್ಟಿಕೊಂಡಿತಾದರೂ ಎಲ್ಲಿಂದ?

''1981ರಲ್ಲಿ ಸಲಿಂಗ ಕಾಮಿ ಪುರುಷರಲ್ಲಿ ಈ ರೋಗ ಉದ್ಭವಿಸಿದುದನ್ನು ಮೊದಲ ಬಾರಿಗೆ ಗುರುತಿಸಲಾಯಿತು. ಪಾಶ್ಚಿಮಾತ್ಯ ದೇಶಗಳಲ್ಲಿ, ಅದರಲ್ಲೂ ಅಮೆರಿಕೆಯಂತಹ ಶ್ರೀಮಂತರಾಷ್ಟ್ರದಲ್ಲಿ ವಿಕೃತಿಗಳಿಗೇನು ಕೊರತೆ? ನಿಸರ್ಗಕ್ಕೆ ವಿರುದ್ಧವಾಗಿ ನಿಂತು ತೋಳೇರಿಸಿದ ಮನುಷ್ಯ ಏನೆಲ್ಲ



ಅವಘಡಗಳನ್ನು ಉಂಟು ಮಾಡಿಕೊಂಡಿದ್ದಾನೆ! ಆರು ತಾಸಿನ ಸುಖ ನಿದ್ರೆ ಸಾಲದೆನ್ನಿಸಿ ನೂರೆಂಟು ಮಾದಕ ದ್ರವ್ಯಗಳನ್ನು ಸೃಷ್ಟಿಸಿಕೊಂಡಿದ್ದಾನೆ. ತೋಳಿನ ನೆತ್ತರ ನಾಳಗಳಿಗೆ ಸೂಜಿ ಹೆಚ್ಚಿ ಅದರ ಮೂಲಕ 'ಡ್ರಗ್' ಏರಿಸಿಕೊಳ್ಳುವ ಹುಂಬ ಮನುಷ್ಯ ತನಗೇ ಗೊತ್ತಿಲ್ಲದಂತೆ 'ಏಡ್ಸ್' ಸೋಂಕನ್ನೂ ಚುಚ್ಚಿಕೊಳ್ಳುತ್ತಾನೆ. ಹಾಗೆ 'ಏಡ್ಸ್' ಸಂತರಿಸಿಕೊಂಡವನು ಸದ್ದಿಲ್ಲದೆ ರಾತ್ರಿಗಳ ಕತ್ತಲಲ್ಲಿ ತನ್ನ ಜೊತೆಗಾರ್ತಿಗೆ ಅದನ್ನು ದಾನ ಮಾಡುತ್ತಾನೆ. ಅವಳು ತನ್ನ ಗರ್ಭದೊಳಗಿನ ನಿಷ್ಪಾಪಿ ಜೀವಿಗೂ ರೋಗವನ್ನು ಧಾರೆಯೆರೆಯುತ್ತಾಳೆ. ಸೋಂಕು ಆನುವಂಶಿಕವಾಗುತ್ತದೆ. ಅಷ್ಟೇ ಅಲ್ಲ, ಏಡ್ಸ್ ಸೋಂಕು ಹತ್ತಿದ ರಕ್ತ ಮತ್ತು ರಕ್ತ ವಸ್ತುಗಳನ್ನು ಅರಿಯದೆ ಪಡೆಯುವ ಮುಗ್ಧರಿಗೂ ಏಡ್ಸ್ ಬರಬಹುದು!''

ಅಯ್ಯೋ ವಿಧಿಯೇ, ವಿಜ್ಞಾನ ಮತ್ತು ಅಜ್ಞಾನಗಳೆರಡೂ ಮನುಷ್ಯನನ್ನು ಸಾವಿನ ಬಾಯಿಗೆ ತರುತ್ತವಲ್ಲ, ಎಂದು ನಿಟ್ಟುಸಿರಿಟ್ಟಳು. ಮತ್ತೇನು, ಸಲಿಂಗ ಕಾಮ - ಡ್ರಗ್ ಸೇವನೆ ಸೂಳೆಗಾರಿಕೆಗಳು ಅಜ್ಞಾನದ ರೆಂಬೆಗಳಾದರೆ

ಡ್ರಗ್ ಸೃಷ್ಟಿ ಮತ್ತು ರಕ್ತ ಪಡೆಯುವಿಕೆಗಳು ವಿಜ್ಞಾನದ ಫಲಶೃತಿಗಳಲ್ಲವೆ?

ಆದರೆ ಅವಳ ಗಂಡ ನಿಜಕ್ಕೂ ನಿಷ್ಪಾಪಿ. ಅಪ್ಪಟ ಆರೋಗ್ಯವಂತ ಯುವಕ. ಮನೆಯಲ್ಲಿ ರತಿಯಂಥ ಹೆಂಡತಿಯಿರುವಾಗ ಹೊರಗಿನ ಕುಳಿ ರ್ಗಾಳಿಗೆ ಕಿಟಕಿ ತೆರೆದ ಮೂರ್ಖನಲ್ಲ. ಅವನಲ್ಲಿ ವಿಕೃತಿಗಳಿಲ್ಲ. ಚಟಗಳಿಂದ ಗಾವುದ ದೂರವಿರು ವಾತ. ಆದರೂ ಈ ಮಾರಿ ರೋಗ ಅದೆಲ್ಲಿಂದ ತೆವಳಿ ಬಂತು?

ಎರಡು ವರ್ಷಗಳ ಹಿಂದಿನ ಮಾತು. 1983 ರಲ್ಲಿ ಅವನು ಇದ್ದಕ್ಕಿದ್ದಂತೆ ಅಸ್ವಸ್ಥನಾದ. ಆಸ್ಪ ತ್ರೆಯಲ್ಲಿ ಡಾಕ್ಟರು ಪರೀಕ್ಷಿಸಿದಾಗ ಅವನ ಸಣ್ಣ ಕರುಳಿನಲ್ಲಾದ ಅನವಶ್ಯಕ ಬೆಳವಣಿಗೆಯಿಂದಾಗಿ ವಿಪರೀತ ರಕ್ತ ಸ್ರಾವವಾಗುತ್ತಿದೆಯೆಂಬುದು ಅರಿ ವಿಗೆ ಬಂತು.

''ಇಂಟರ್ನಲ್ ಬ್ಲೀಡಿಂಗ್!'' ಅದು ಡಾಕ್ಟರು ಕೊಟ್ಟ ಹೆಸರು. ಅವಳು ನಿಂತಲ್ಲೇ ನಡುಗಿ ಹೋದಳು. ಆಗಷ್ಟೆ ಮದುವೆಯಾಗಿತ್ತು. ಕನಸು ಕೆದರಿಕೊಳ್ಳುವ ಕಾಲ, ಅಷ್ಟರಲ್ಲೇ ಅನಾರೋ ಗ್ಯದ ಸಿಡಿಲು!

''ಅಂಥಾ ಹೆದ್ರಿಕೊಳ್ಳೋಂಥಾದ್ದೇನೂ ಆಗಿ ಲ್ಲಮ್ಮಾ, ನೀವು ಧೈರ್ಯವಾಗಿರಿ'' ಎಂದ ಡಾಕ್ಟರು ಹೇರಳವಾಗಿ ರಕ್ತ ಹೆಪ್ಪುಗಟ್ಟುವ ವಸ್ತು ಗಳನ್ನು ಅವನಿಗೆ ನೀಡಿದರು. ಅದ್ಯಾವ ಕೆಟ್ಟ ಘಳಿಗೆಯೋ, ದುಷ್ಟ ವೇಳೆಯೋ ...... ಆ ರಕ್ತ ಹೆಪ್ಪುಗಟ್ಟಿಸುವ ವಸ್ತುಗಳ ನಡುವಿನಿಂದ ತೆವಳಿ ಬಂದ ಏಡ್ಸ್ ವೈರಸ್ ಅವನ ದೇಹದೊಳಗೆ ಸ್ಥಾಪಿತವಾಗಿಬಿಟ್ಟಿತ್ತು. ರಕ್ತದಾನ ಮಾಡಿ ಅದರ ಮೇಲೆ ಜೀವನ ನಡೆಸುವ ಏಡ್ಸ್ ರೋಗಿಯೊಬ್ಬ ಧಾರಾಳವಾಗಿ ಅನೇಕರಿಗೆ ರೋಗ ಹಂಚಿದ್ದ.

''ನಿಮ್ಮ ದೇಹ ಎಂಥ ವಿಚಿತ್ರವಾದ ಫ್ಯಾಕ್ಟರಿ ಯೆಂಬುದು ನಿಮಗೆ ಗೊತ್ತಿಲ್ಲ. ದೇಹದೊಳಕ್ಕೆ ಪ್ರವೇಶಿಸುವ ಯಾವುದೇ ಪರಕೀಯ ವಸ್ತು ಅಥವಾ ವೈರಸ್ ಅನ್ನು ತಕ್ಷಣ ನಾಶಗೊಳಿಸ ಬಲ್ಲ ಪೊಲೀಸ್ ಪಡೆಯಂತಹ ವಿಶಿಷ್ಟ ಜೀವಕೋ ಶಗಳು ನಿಮ್ಮ ದೇಹದಲ್ಲಿವೆ. ಪರಕೀಯ ವಸ್ತು ದೇಹದೊಳಗೆ ನುಗ್ಗಿದ ಕೂಡಲೆ ಲಕ್ಷಾಂತರ, ಕೋಟ್ಯಂತರ ಬಿಳ್ಕಣಗಳು ಜಾಗೃತವಾಗುತ್ತವೆ. ಈ ಭಕ್ಷಕ ಕಣಗಳು ಪರಕೀಯ ಶತ್ರುವನ್ನು ಸುತ್ತುವರಿದು, ಕೊಂದು, ನಾಶಗೊಳಿಸಿಬಿಡು ತ್ತವೆ. ಈ ಕ್ರಿಯೆಯಲ್ಲಿ 'ಟಿ' ಹಾಲ್ರಸ ಕಣ (Lymphocyte)ಗಳ ಪಾತ್ರ ಅತಿ ದೊಡ್ಡದು. ಇವುಗಳೊಂದಿಗೆ ಸಹಾಯಕ 'ಟಿ' ಕಣಗಳೂ ಸೇರಿ ಅದ್ಭುತ ಹೋರಾಟವನ್ನು ಮಾಡುತ್ತವೆ.''

''ಪರಕೀಯ ವಸ್ತುವಿನ ಆಗಮನವಾದೊ ಡನೆ ಭಕ್ಷಕ ಕಣಗಳು ಅವುಗಳನ್ನು ಸುತ್ತುವರೆ ಯುತ್ತವೆ. ಅವುಗಳಿಗೆ ಸಹಾಯಕ 'ಟಿ' ಕಣಗಳು ನೆರವಾಗುತ್ತವೆ. ಅವೆರಡೂ ಪರಕೀಯ ವೈರಸ್ ನೊಂದಿಗೆ ಸೆಣಸತೊಡಗಿದಾಗ ಭಕ್ಷಕ ಕಣಗಳು ಲಿಂಫೋ ಕೈನ್-ಇಂಟರ್ ಲ್ಯೂಕೆನ್-1 ಎಂಬ ರಸಾಯನಿಕ ವಸ್ತುವನ್ನು ಸ್ರವಿಸುತ್ತವೆ. ಇದು ಸಹಾಯಕ 'ಟಿ' ಕಣಗಳನ್ನು ಉತ್ತೇಜಿಸುವ ಟಾನಿ ಕ್ಕಿನಂತಹದು. ಈ ಉತ್ತೇಜಿತ ಸಹಾಯಕ 'ಟಿ' ಕಣಗಳು ಉತ್ಪಾದಿಸುವ ಮತ್ತೊಂದು ರಸವಸ್ತು ವೆಂದರೆ ಇಂಟರ್ ಲ್ಯೂಕೆನ್-2. ಇದು ಮತ್ತೊಂದು ತೆರನಾದ ಟಾನಿಕ್ಕು! ಇದರ ನೆರವಿ ನಿಂದ ಕೊಲ್ಲುವ 'ಟಿ' ಕಣಗಳ ಸಂಖ್ಯೆ ಹೆಚ್ಚು ತ್ತದೆ. ಹೀಗೇ ಮುಂದುವರಿಯುವ ಯುದ್ಧ ಕಡೆಗೆ ಪರಕೀಯ ವಸ್ತು ಅಥವಾ ವೈರಸ್ಸನ್ನು ಸಂಪೂರ್ಣ ನಾಶಗೊಳಿಸುವಲ್ಲಿ ಸಫಲವಾಗು ತ್ತದೆ. ಇದೆಲ್ಲ ಕೆಲಸದ ಮೂಲ ಕೇಂದ್ರಗಳೆಂದರೆ ಶಸ್ತ್ರಗಳ ಕಾರ್ಯಾಗಾರಗಳಂತಿರುವ ತೊರಳೆ (ಸ್ಪ್ಲೀನ್) ಮತ್ತು ಹಾಲ್ರಸ ಗ್ರಂಥಿಗಳು.''

''ಇಷ್ಟೆಲ್ಲ ಯುದ್ಧಕ್ಕೆ ಮೂಲ ಕಾರಣವಾ ಗುವ ವೈರಸ್ ಎಂಥದಿರಬೇಕು? ವೈರಸ್ ದೇಹ ಹೊಕ್ಕ ನಂತರ ದೇಹದೊಳಗಿನ ಜೀವಕೋಶ ಗಳಲ್ಲಿ ಮನೆ ಮಾಡುತ್ತದೆ. ಒಮ್ಮೆ ಹಾಗೆ ಮನೆ ಮಾಡಿದ ನಂತರವೇ ಅವುಗಳ ಸಂಖ್ಯಾಭಿವೃದ್ಧಿ ಸಾಧ್ಯ! ವೈರಸ್‌ಗಳಿಗೆ ಮನೆಗಳಾಗಿ ಪರಿವರ್ತಿತ ವಾದ ನಮ್ಮ ದೇಹದ ಜೀವಕೋಶಗಳನ್ನು ತಕ್ಷಣ ಕೊಲ್ಲುವ ಕೆಲಸ 'ಟಿ' ಕಣಗಳದ್ದು. ಒಮ್ಮೆ ಯುದ್ಧ ಮುಗಿದು ಶತ್ರುವಿನ ಸೊಲ್ಲಡಗಿದ

ಮೇಲೆ ರಕ್ತದೊಳಗಿನ ಭಕ್ಷಕ ಮತ್ತು ಜಲಗಾರ ಕಣಗಳು ನಿಧಾನವಾಗಿ ಆ ತನಕ ಆದ ಹಾನಿಯ ರಿಪೇರಿ ಮಾಡತೊಡಗುತ್ತವೆ. ಹೀಗೆ ದೇಹದಲ್ಲಿ ಪ್ರತಿರೋಧ ವ್ಯವಸ್ಥೆಯೊಂದು ನಿರಂತರವಾಗಿ ಕೆಲಸ ಮಾಡುತ್ತಲೇ ಇರುತ್ತದೆ. ಶತ್ರುವಿನ ಆಗಮನವನ್ನು ಗುರುತಿಸಿ, ರಕ್ಷಣಾ ಶಕ್ತಿಯನ್ನು ಹೆಚ್ಚಿಸಿ, ಹೋರಾಡಿ ನಂತರ ಶಾಂತಿ ನೆಲೆಗೊಳಿಸುವ ಇಡೀ ಪ್ರಕ್ರಿಯೆಯೇ ಪ್ರತಿರೋಧ ವ್ಯವಸ್ಥೆ!''

ತೊಟ್ಟಿಲ ಮಗು ನಿದ್ದೆಯಿಂದೆದ್ದು ಅಳತೊಡಗಿತು. ಅವಳು ಪತ್ರಿಕೆ ಮಡಚಿಟ್ಟು ಮೇಲೆದ್ದಳು. ಮಗುವಿಗೆ ಹಾಲೂಡಿಸುವಾಗ ಸುಮ್ಮನೆ ಕುಳಿತು ಆಲೋಚಿಸಿದಳು. ದೇಹ. ಪರಕೀಯ ವಸ್ತು, ವೈರಸ್ ಹಾಲಸ ಕಣಗಳು, ಯುದ್ಧ ...... ಹೀಗೆ ಓದಿದ್ದೆಲ್ಲ ನೆನಪಾಗಿ. ನಮ್ಮದೇ ಆದ ಈ ಪುಟ್ಟ ದೇಹದಲ್ಲಿ ಏನೆಲ್ಲ ನಡೆದಿದೆಯೋ! ಎಂದು ಪುಳಕಗೊಂಡಳು. ಇಂಥ ಪ್ರಬಲ ಸೇನೆಯನ್ನು ಸದೆ ಬಡಿದು ದೇಹದಲ್ಲಿ ಸ್ಥಾಪಿತವಾಗುವ ಏಡ್ಸ್ ವೈರಸ್ ಇನ್ನೆಂಥ ಪಿಶಾಚ ಸೃಷ್ಟಿಯಿರಬೇಕು! ಮತ್ತೆ ನಿದ್ದೆಗೆ ಜಾರಿದ ಮಗುವನ್ನು ಮಲಗಿಸಿ ಪತ್ರಿಕೆ ಕೈಗೆತ್ತಿಕೊಂಡಳು.

''ದೇಹದ ಇಡೀ ಪ್ರತಿರೋಧ ವ್ಯವಸ್ಥೆಯನ್ನು ನಿರ್ದಯವಾಗಿ ಊನಗೊಳಿಸುವುದೇ ಏಡ್ಸ್ ವೈರಸ್‌ನ ಅಪಾಯ. ಅದು ಹಾರುವ ಮೊದಲೇಟಿಗೆ ಬಲಿಯಾಗುವ ಬಹುಮುಖ್ಯ ಕಣವೆಂದರೆ ಸಹಾಯಕ ಹಾಲ್ರಸ ಕಣ. ಯುದ್ಧ ಪಡೆಯ ಮುಂಚೂಣಿಯಲ್ಲಿರುವ ಈ ಸಹಾಯಕ ಹಾಲ್ರಸ ಕಣಗಳ ಮೇಲಿನ ದಾಳಿ ಸಲೀಸಾಗಿ ಕೋಟೆಯನ್ನು ಒಡೆದು ಹಾಕುತ್ತದೆ. ಮುಂದೆ ಒಂದೊಂದಾಗಿ ಭಕ್ಷಕ ಕಣ, ನರಬಂಧಕ ಕಣ, ನಕ್ಷತ್ರ ಕಣ ಇತ್ಯಾದಿಗಳು ವೈರಸ್‌ಗೆ ಬಲಿಯಾಗುತ್ತವೆ. ನಂತರ ಏಡ್ಸ್ ವೈರಸ್ ದೇಹದ ವಿವಿಧ ಕೋಶಗಳಲ್ಲಿ ಪೊಟರೆ ಮಾಡಿಕೊಂಡು ಬದುಕುತ್ತದೆ. ಒಮ್ಮೆ ಪ್ರತಿರೋಧ ಪಡೆಯ ನಾಶವಾಯಿತೋ, ನಾನಾ ಸೋಂಕು ಜೀವಿಗಳು ಜಾಗೃತವಾಗಿ ಮೈ ತುಂಬ ತೆವಳ ತೊಡಗುತ್ತವೆ.''



ಸಾಕು ಸಾಕು, ಇದೆಲ್ಲ ಓದಿ ಇನ್ನಷ್ಟು ಹುಚ್ಚೇರುತ್ತೆ ಅನ್ನಿಸಿ ಪತ್ರಿಕೆ ಮೂಲೆಗೆಸೆದಳು. ತನ್ನ ಗಂಡನ ದೇಹದಲ್ಲೀಗ ಯುದ್ಧ ಮುಗಿದು ಹೋಗಿದೆ. ಶತ್ರು ಸ್ಥಾಪಿತನಾಗಿದ್ದಾನೆ. ಇನ್ನು ಏಡ್ಸ್ ವೈರಸ್‌ನ ಹರಡುವಿಕೆಗೆ ತಡೆಯಿಲ್ಲ. ಏಡ್ಸ್ ಬಂದವರೆಲ್ಲಾ ರೋಗಲಕ್ಷಣ ತೋರಿಸುತ್ತಾರೆಂದಲ್ಲ. ಅವರಿಗೆ ರೋಗ ಬಂದಿರುವುದು ಗೊತ್ತಾಗದಿರಲಿಕ್ಕೂ ಸಾಧ್ಯ. ಆದರೆ ಸೋಂಕನ್ನು ಸದ್ದಿಲ್ಲದೆ ಮತ್ತೊಬ್ಬರಿಗೆ ಸಾಗಿಸುತ್ತಿರುತ್ತಾರೆ. ಒಂದಂತೂ ನಿಜ, ಏಡ್ಸ್ ತಗುಲಿದ ರೋಗಿ ಯಾವುದೇ ಕಾರಣವಿಲ್ಲದೆ ಸರಸರನೆ ತೂಕ ಕಳೆದುಕೊಳ್ಳುತ್ತಾನೆ! ವಿನಾಕಾರಣ ಸುಸ್ತು, ನಿರಂತರ ಜ್ವರ, ರಾತ್ರಿಗಳಲ್ಲಿ ಅಖಂಡವಾಗಿ ಬೆವರು ಏಕೆ, ನಿಲ್ಲದ ಭೇದಿ, ತೊಡೆ ಸಂದಿಗಳಲ್ಲಿ ಗಂಟುಗಳು, ಬಾಯಿಸುತ್ತ 'ಹರ್ಪಿಸ್' ಗುಳ್ಳೆಗಳು ...... ಇವೆಲ್ಲ ಏಡ್ಸ್ ಲಕ್ಷಣಗಳೇ! ಇವೆಲ್ಲಕ್ಕೂ ಕಲಶವಿಟ್ಟಂತೆ ಕ್ಯಾನ್ಸರ್ ಗಂಟುಬೀಳುತ್ತದೆ. ಅಲ್ಲಿಗೆ ಎಲ್ಲವೂ ಮುಗಿಯುತ್ತದೆ. ಪ್ರತಿರೋಧ ಶಕ್ತಿಯ ನಾಶವೆಂದರೆ ಸಾವಿಗೆ ಔತಣವೇ.

ಆತನ ಪಸಿವು ಸಾಯುತ್ತದೆ. ಶ್ವಾಸಕೋಶ

ವೊಂದೇ ಅಲ್ಲದೆ ದೇಹದ ಬೇರೆ ಬೇರೆ ಭಾಗಗಳಲ್ಲಿ ಕ್ಷಯ ಗೋಚರಿಸುತ್ತದೆ. ಅನ್ನನಾಳದಲ್ಲಿ ಬೆಳೆಯುವ ವ್ರಣ ಅವನಿಗೆ ಏನನ್ನೂ ನುಂಗಲಾಗದಂತೆ ಮಾಡುತ್ತದೆ. ಹರ್ಪಿಸ್ ಗುಳ್ಳೆಗಳು ಬಾಯಿ, ಜನನಾಂಗ ಮತ್ತು ಗುದದ್ವಾರದ ಸುತ್ತ ಭೀಕರವಾಗಿ ಮೊಳೆತು ನಿಲ್ಲುತ್ತವೆ. ವಿಶೇಷವಾಗಿ ತೋಳ ಸಂದಿಯಲ್ಲಿ ಉಬ್ಬಿ ನಿಲ್ಲುವ ನೇರಳೆ ಬಣ್ಣದ ಗಂಟುಗಳು ಒಡೆದು, ಮಾಯದ ಹುಣ್ಣುಗಳಾಗಿ ನಿಲ್ಲುತ್ತವೆ.

* * *

ಸರಿಯುವ ಕಾಲಕ್ಕಿಂತ ದೊಡ್ಡ ಔಷಧಿಯಿಲ್ಲ. ಅವಳೀಗ ಮೊದಲಿನಂತಿಲ್ಲ. ತನ್ನ ಆರು ವರ್ಷದ ಮಗುವಿನೊಂದಿಗೆ ಬದುಕಿನ ಸುದೀರ್ಘ ರಸ್ತೆಯಲ್ಲಿ ದೃಢವಾದ ಹೆಜ್ಜೆ ತುಳಿಯುತ್ತಿದ್ದಾಳೆ. ಆಕೆ ಕೇವಲ ತಾಯಿಯಲ್ಲ. ಸಾಮಾಜಿಕ ಕಾರ್ಯಕರ್ತೆ. ನೊಂದವರ ಗೆಳತಿ. ಒಬ್ಬ ಅನುಭವಿ ಹಾಗೂ ಮತ್ತು ಪ್ರಜ್ಞಾವಂತ ಮಹಿಳೆ.

ಅವಳ ಕಥೆ ಅವಳೇ ಹೇಳಿಕೊಳ್ಳುತ್ತಾಳೆ, ಕೇಳಿ.

* * *

ಪ್ರಿಯ ಓದುಗರೇ,

ನನ್ನ ಪತಿಯ ದನಿ ಸ್ತಬ್ಧಗೊಂಡಿದೆ. ಅವರ ಭಾವಗಳಿಗೆಲ್ಲ ನಾನೇ ದನಿಯಾಗಬೇಕು. ನನ್ನ ಮೂಲಕ ಆತ ನಿಮ್ಮನ್ನು ತಲುಪುತ್ತಾನೆ. ಈ ಹೊತ್ತಿಗಾಗಲೇ ಜಗತ್ತಿನ ಲಕ್ಷಾಂತರ ದನಿಗಳು ಹೀಗೆಯೇ ಸ್ತಬ್ಧಗೊಂಡಿವೆ. ಅವೆಲ್ಲವೂ ತಮ್ಮ ಗೆಳತಿಯರ ಮೂಲಕ, ಮಡದಿಯರ ಮೂಲಕ, ದಾದಿಯರ ಮೂಲಕ ನಿಮ್ಮನ್ನು ತಾಕಬೇಕು. ನಿಮ್ಮಲ್ಲಿ ಪ್ರಜ್ಞೆಯಾಗಿ ಅರಳಬೇಕು. ಆಗ ಮಾತ್ರ ಈ ಮಾನವ ಹಂತಕ ಏಡ್ಸ್ ವೈರಸ್‌ನೊಂದಿಗೆ ಬದುಕುವ ಮತ್ತು ಹೋರಾಡುವ ಸಾಹಸ ಸಾಧ್ಯವಾದೀತು.

ನನ್ನ ಪತಿ ತೀರಿಕೊಂಡು ನಾಲ್ಕು ವರ್ಷಗಳಾದವು. ಚಳಿಗಾಲದ ಕೊನೆಯ ದಿನ ಆತ ನಮ್ಮನ್ನಗಲಿದ. ಅಗಲುವ ಹೊತ್ತಿಗೆ ಆತನನ್ನು ಮನೋವಿಕಲತೆ ಆವರಿಸಿಕೊಂಡಿತ್ತು. ಯೋಚನೆ ನಿಂತು ಹೋಗಿತ್ತು. ಮಾತು ಸತ್ತಿದ್ದವು. ದೇಹ ನಿಶ್ಚಲವಾಗಿತ್ತು. ಆದರೂ ಅಂತರಾತ್ಮದ ಆಳದಲ್ಲಿ ಆತ ಏನು ಬಯಸುತ್ತಿರಬಹುದೆಂಬುದು ನನಗೆ ಗೊತ್ತು. ನಾನು ಮತ್ತು ನನ್ನ ಮಗು ಒಂದು ಹೊಸ ಬದುಕಿನ ಚಿಹ್ನೆಗಳಾಗಿ ಜೀವಿಸಬೇಕೆಂದು ಆತ ಬಯಸುತ್ತಿದ್ದ.

ನನ್ನ ಪಾಲಿಗೆ ಹೊಸ ಬದುಕೆಂದರೆ, ಕಳೆದು ಹೋದ ಬದುಕನ್ನು ಅರ್ಥಮಾಡಿಕೊಳ್ಳುವುದು. ರೋಗದೊಂದಿಗೆ ಬದುಕಿದ ದಿನಗಳಲ್ಲಿ ನಾವು ಅನುಭವಿಸಿದ ನೋವು, ನಲಿವು, ಆಸೆ ಮತ್ತು ಭರವಸೆಗಳನ್ನು ಮತ್ತೆ ನೆನಪಿಗೆಳೆದುಕೊಳ್ಳುವುದು. ನಿಮ್ಮೊಂದಿಗೆ ಹಂಚಿಕೊಳ್ಳುವುದು.

ಏಡ್ಸ್ ಸೋಂಕು ತಗುಲಿದೆಯೆಂದು ವೈದ್ಯರು ಘೋಷಿಸಿದ ನಂತರ ಆತ ಹದಿನಾರು ತಿಂಗಳ ಕಾಲ ಬದುಕಿದ್ದರು. ಅದಕ್ಕೆ ಮೊದಲು ಸಣ್ಣ ಕರುಳಿನ ರಕ್ತ ಸ್ರಾವ ತಡೆಯಲು ನೀಡಲಾದ ರಕ್ತ ಹೆಪ್ಪುಗಟ್ಟಿಸುವ ವಸ್ತುಗಳ ಮೂಲಕ ಈ ರೋಗ ಬರಬಹುದೇನೋ ಎಂಬ ಭಯ ನಮ್ಮನ್ನು ಎರಡು ವರ್ಷ ಕಾಡಿತ್ತು. ಅದಿನ್ನೂ ಏಡ್ಸ್ ಬಗೆಗೆ ಜನರಲ್ಲಿ ಮುಗ್ಧತೆಯಿದ್ದ ಕಾಲ. ''ರಕ್ತ ದಾನ ಪಡೆಯುವುದರ ಮೂಲಕ ಏಡ್ಸ್ ಬರುವುದು ತೀರ ಅಪರೂಪ. ಎಲ್ಲೋ ಲಕ್ಷಕ್ಕೊಬ್ಬರಿಗೆ ಹಾಗಾಗಬಹುದು. ನೀವು ಧೈರ್ಯದಿಂದಿರಿ'' ಎಂದು ಹೇಳುತ್ತಿದ್ದರು ಜನ. ಆ ''ಲಕ್ಷಕ್ಕೊಬ್ಬ ದುರ್ದೈವಿ'' ನಾನಾಗಿರಲಾರನೆಂಬ ಹುಚ್ಚು ವಿಶ್ವಾಸ ನನ್ನಾತನಿಗೂ ಇತ್ತು.

ಆದರೆ ಆಗಬಾರದ್ದು ಆಗಿಯೇ ಹೋಯಿತು. 'ನಿಮಗೆ ಏಡ್ಸ್ ಸೋಂಕು ತಗುಲಿದೆ!' ಎಂದು ವೈದ್ಯರು ಹೇಳಿದಾಗ ಆತ ಧರೆಗಿಳಿದು ಹೋದ. ಆಸೆ ಸತ್ತಿತ್ತು. ಸಂತೈಸುವ ಒಂದೇ ಒಂದು ಹೃದಯವೂ ಇಲ್ಲ. ಯಾರ ನೆರವೂ ಇಲ್ಲ. ಅತ್ತು ಎದೆ ಭಾರವಿಳಿಸಿಕೊಳ್ಳಲು ಒಂದು ಒಡಲೂ ಜೊತೆಗಿಲ್ಲ. ಗೆಳೆಯರು ಹಠಾತ್ತನೆ ದೂರವಾದರು. ನನ್ನ ಪತಿ ತನ್ನ ಒಬ್ಬಂಟಿ ಕೋಣೆಯಲ್ಲಿ ಅದೆಷ್ಟು ಅತ್ತನೋ!

ನಾನು ಐದುನೂರು ಕಿಲೋ ಮೀಟರುಗಳಷ್ಟು ದೂರದಲ್ಲಿದ್ದೆ. ಆತ ಫೋನಿನ ಮೇಲೆ

ಆ ದಾರುಣವಾದ ಸುದ್ದಿ ಹೇಳಿದಾಗ ಕನಲಿ ಹೋದೆ. ನಿಶ್ಚೇಷ್ಟಿತಳಾಗಿ ಬಿದ್ದುಕೊಂಡೆ. ಏಡ್ಸ್ ಬಗ್ಗೆ ದೊರಕಿದ್ದೆಲ್ಲ ಓದಿದೆ. ಅತ್ತು ಅತ್ತು ಕಣ್ಣು ಬತ್ತಿ ಹೋದವು. ಏಡ್ಸ್ ಬರಬಹುದೆಂಬ ಭೀತಿಯೊಂದಿಗೆ ಕಳೆದ ಎರಡು ವರ್ಷಗಳಿಗಿಂತ, ಏಡ್ಸ್ ಬಂದು ಬಿಟ್ಟಿದೆಯೆಂಬ ಸುದ್ದಿ ತಿಳಿದ ನಂತರದ ದಿನಗಳು ದಾರುಣವಾಗಿದ್ದವು.

ಆತ ಮೇ ತಿಂಗಳ ಹೊತ್ತಿಗೆ ನನ್ನಲ್ಲಿಗೆ ಬಂದ. ಐನೂರು ಕಿಲೋ ಮೀಟರು ದೂರದ ನಗರದಲ್ಲಿ ಆತನಿಗೊಂದು ಒಳ್ಳೆಯ ನೌಕರಿಯಿತ್ತು. ಇಲ್ಲಿ ನನಗೂ ನೌಕರಿಯಿತ್ತು. ಆದರೆ ಮನೆಗೆ ಬಂದಾತ ಮೊದಲಿನಂತಿರಲಿಲ್ಲ. ತಿಂಗಳುಗಟ್ಟಲೆ ಆತ ಮೌನವಾಗಿ ಹೊದ್ದು ಮಲಗಿಬಿಟ್ಟ. ಜೊತೆಗಿದ್ದೂ ನಾವು ಬೇರೆಯಾಗಿದ್ದೆವು. ಹಠಾತ್ತನೆ ನಮ್ಮ ನಡುವೆ ಬಿರುಕೊಂದು ಬಾಯಿ ಬಿಟ್ಟಿತ್ತು. ಅಷ್ಟೊಂದು ಪ್ರೀತಿಸುತ್ತಿದ್ದ ಆತನನ್ನು ಮುಟ್ಟಲು ಕೂಡ ನಾನು ಹಿಂಜರಿದೆ. ಅದೇನೋ ಹೇಸಿಗೆ. ಎಂಥದೋ ಭಯ. ಅವ್ಯಕ್ತ ನೋವು!

ಆದರೆ ದಿನಗಳೆದಂತೆಲ್ಲ ನನ್ನ ಭಯ, ನೋವು, ಹೇಸಿಗೆ, ಹಿಂಜರಿತಗಳು ಕರಗಿ ಕರುಣೆ ನನ್ನೆದೆಯಲ್ಲಿ ಒಸರತೊಡಗಿತು. ಯಾವ ರೋಗವಾದರೇನಂತೆ? ಆತ ನನ್ನ ಗಂಡನಲ್ಲವೆ? ನನ್ನ ಬದುಕಿಗೊಂದು ಅರ್ಥಕೊಟ್ಟವನಲ್ಲವೆ? ಮೆಲ್ಲನೆ ನಾನು ಆತನನ್ನು ಸಮೀಪಿಸಿದೆ. ಮಾತನಾಡಿಸಿದೆ. ಸಂತೈಸಿದೆ. ಆದರೆ ಆತ ನಿರ್ವಿಣ್ಣನಾಗಿದ್ದ. ಆತನಿಗಾಗಿ ನಾನು ತಂದ ಹೊಸ ಜೊತೆ ಬಟ್ಟೆಗಳನ್ನು ಕಣ್ಣೆತ್ತಿ ನೋಡುವ ಉತ್ಸಾಹವೂ ಉಳಿದಿರಲಿಲ್ಲ. ಸಾವಿನೂಟಕ್ಕೆ ಸಿದ್ಧವಾದವನಿಗೆ ಬೆಳ್ಳಿ ಬಟ್ಟಲೇಕೆ? ಎನ್ನುತ್ತಿದ್ದ. ಆ ರೋಗದ ಸಮ್ಮುಖದಲ್ಲಿ ನಾವೆಷ್ಟು ಶಕ್ತಿ ಹೀನರಾಗಿದ್ದೆವೆಂದರೆ, ನಮ್ಮೆಲ್ಲ ದಾರಿಗಳೂ ಮುಚ್ಚಿ ಹೋಗಿದ್ದವು. ಒಬ್ಬರ ಮೇಲೊಬ್ಬರು ರೇಗುವುದು ನಿತ್ಯದ ಮಾತಾಗಿತ್ತು.

ನಾವು ಹೆದರಿದ್ದೆವು. ಅದು ಸಾವಿನ ಹೆದರಿಕೆಯಲ್ಲ. ಸಾವಿನ ಪ್ರಕ್ರಿಯೆಯ ಬಗೆಗಿನ ಹೆದರಿಕೆ. ಅದಕ್ಕಿಂತಲೂ ಹೆಚ್ಚಾಗಿ ಏಡ್ಸ್ ವೈರಸ್



ಅದ್ಹೇಗೋ ಮಿದುಳಿನ ತನಕ ತೆವಳಿ ಬಂದು ನನ್ನ ಪತಿಯನ್ನು ಮನೋವೈಕಲ್ಯಕ್ಕೆ ಈಡು ಮಾಡೀತೆಂಬ ಬೇಗುದಿ ನಮ್ಮನ್ನು ತಿವಿಯುತ್ತಿತ್ತು. ಇನ್ನೂ ಗಟ್ಟಿಮುಟ್ಟಾದ ದೇಹ. ಸಾಯುವ ವಯಸ್ಸಲ್ಲ. ದೇಹ ಸಾಯಲೊಲ್ಲದು. ಆದರೆ ಸಾವು ಹಿಡಿದು ಇಷ್ಟಿಷ್ಟೇ ಕುಕ್ಕುತ್ತದೆ ..... ಅದರ ಊಹೆಯೇ ನಮ್ಮನ್ನು ಕಂಗೆಡಿಸಿತ್ತು.

ಜಗತ್ತಿಗೂ-ನಮಗೂ ನಡುವೆ ಕಬ್ಬಿಣದ ಪರದೆ ಬಿದ್ದಿತ್ತು. ಆಸ್ಪತ್ರೆಗಳಲ್ಲಿ ವೈದ್ಯರು ನಮ್ಮ ಲೈಂಗಿಕ ಬದುಕಿನ ಬಗ್ಗೆ ಕೆದಕಿ ಕೆದಕಿ ಕೇಳಿದರು. ನೂರೆಂಟು ಹೆಸರು ಹೇಳಿ ಇದರಲ್ಲಿ ಯಾವ ಮಾದಕ ದ್ರವ್ಯ ತೆಗೆದುಕೊಳ್ಳುತ್ತಿದ್ದಿರೆಂದು ನನ್ನಾತನನ್ನು ಹಿಂಸಿಸಿದರು. ಆದರೆ ಯಾರೂ ಧೈರ್ಯ ಹೇಳಲಿಲ್ಲ. ನೆರವಾಗಲಿಲ್ಲ. ಒಳ್ಳೆಯ ಸಾವನ್ನೂ ಕರುಣಿಸಲಿಲ್ಲ. ಇದೆಲ್ಲಕ್ಕಿಂತ ಹೆಚ್ಚಾಗಿ ನಮ್ಮನ್ನು ನಾವೇ ಛೀದರಿಸಿಕೊಂಡೆವು. ಒದಗಿ ಬಂದ ಅನಾಹುತವನ್ನು ಒಪ್ಪಿಕೊಳ್ಳಲು ನಾವೇ ಸಿದ್ಧರಿರಲಿಲ್ಲ. ರೋಗದೊಂದಿಗೆ ಬದುಕಲೇಬೇಕಾದ ಅನಿವಾರ್ಯತೆಗೆ ನಮ್ಮ ವರ್ತನೆ ತದ್ವಿರುದ್ಧವಾದುದಾಗಿತ್ತು. ನಾವ್ಯಾರು, ನಮ್ಮ ಸ್ಥಿತಿಯೇನು

ಮತ್ತು ಈ ದಾರಿಯ ಅಂತ್ಯ ಎಂಥದೆಂದು ತಿಳಿದುಕೊಂಡು ಪ್ರಾರಂಭಿಸಬೇಕಾದ ಪಯಣಕ್ಕೆ ನಾವು ಸಿದ್ಧರಾಗಲೇ ಇಲ್ಲ.

ಹೀಗೆ ಮೊದಲ ಮೂರು ತಿಂಗಳ ಕಾಲದ ನಮ್ಮ ಯಾತ್ರೆಯನ್ನು ನನ್ನ ಪತಿ ಒಬ್ಬಂಟಿಯಾಗಿ ನೂಕಬೇಕಾಯಿತು. ಮೇಲಾಗಿ ಆತನಿಗೆ ನಾನಿದ್ದ ಊರಿನಲ್ಲಿ ಸರಿಯಾದ ನೌಕರಿ ಸಿಗಲಿಲ್ಲ. ಒಂಟಿತನ, ರೋಗ, ಹೆದರಿಕೆಗಳಲ್ಲಿ ನರಳಿ ನರಳಿ ಸಾಕಾಗಿ ಕಡೆಗೊಮ್ಮೆ ಆತ ಹಲವಾರು ನಿರ್ಧಾರಗಳಿಗೆ ಬಂದ. ''ಡಿಯರ್, ನನ್ನ ನಿರ್ಧಾರಗಳನ್ನು ಕೇಳು- ನಾನು ಬದುಕಬೇಕು! ನಾನು ಜೊತೆಯಲ್ಲೇ ಬದುಕಬೇಕು. ನನ್ನ ಯೋಗ್ಯತೆಗೆ, ಅಭಿಲಾಷೆಗೆ ತಕ್ಕಂತಹ ನೌಕರಿ ಮಾಡಬೇಕು'' ಎಂದು ಆತ ಚೀಟಿಯೊಂದರಲ್ಲಿ ಬರೆದು ನನ್ನ ಕೈಗಿತ್ತ. ನನ್ನ ಕಣ್ಣು ತುಂಬಿ ಬಂದವು. ನಾನೂ ಇಂಥವೇ ನಿರ್ಧಾರಗಳನ್ನು ಮಾಡಿದ್ದೆ. ''ಜೊತೆಗೇ ಬದುಕಬೇಕು ಆದರೆ ಈಗ ನಾನಿರುವ ಊರಿನಲ್ಲೇ ಬದುಕುಳಿದು, ಇಲ್ಲೇ ಹೊಸ ಆಸರೆಗಳನ್ನು ಹುಡುಕಿಕೊಳ್ಳಬೇಕು. ಮತ್ತೆ ಆತ ಐನೂರು ಕಿಲೋಮೀಟರ್ ದೂರದ ಊರಿಗೆ ಹೋಗುವುದು ಬೇಡ!'' ಇದು ನನ್ನ ಆಸೆ.

ಆದರೆ ಪರಿಸ್ಥಿತಿ ನನ್ನ ಪತಿಯ ನಿರ್ಧಾರಗಳನ್ನೇ ಬೆಂಬಲಿಸಿತು. ಆತ ಬಯಸಿದ ನೌಕರಿ ಮತ್ತದೇ ದೂರದ ಊರಿನಲ್ಲಿ ದೊರಕಿತು. ನಾನೂ ಅವನೊಂದಿಗೆ ಹೊರಟೆ. ಒಮ್ಮೆ ಅಲ್ಲಿಗೆ ಹೋಗಿ ನೆಲೆಗೊಂಡೆವು ನೋಡಿ! ಬದುಕಿನ ಹಾದಿಯೇ ಬದಲಾಯಿತು. ನಿರಾಸೆಯ ಬೋಳು ನೆಲದಲ್ಲಿ ಸಂತಸದ ಚಿಗುರೊಡೆಯಿತು.

ಅದಕ್ಕೆಲ್ಲ ಮೂಲ ಕಾರಣ ನನ್ನಾತನ ಮನಸ್ಸು! ಆತನಿಗೆ ಬದುಕಬೇಕೆಂಬ ಅದಮ್ಯ ಉತ್ಸಾಹವಿತ್ತು. ಸಂತಸದ ಸೆಲೆಗಳನ್ನು ಹುಡುಕುವ ಕುತೂಹಲವಿತ್ತು. 'ಸಾವು ಬಂದರೆ ಸಾಯೋಣವಂತೆ, ಸಾವಿಗೆ ಮುಂಚೆಯೇ ಸಾಯುವುದೇಕೆ' ಎಂಬ ದಿಟ್ಟ ನಿರ್ಧಾರ ಆತನದಾಗಿತ್ತು. ತನ್ನ ದೈಹಿಕ ದೌರ್ಬಲ್ಯಗಳು, ಶಕ್ತಿಯ ಇತಿಮಿತಿಗಳು ಆತನಿಗೆ ಚೆನ್ನಾಗಿ ಗೊತ್ತಿದ್ದವು. ಆತ ಬದುಕನ್ನೂ, ಜನರನ್ನೂ, ಕಲಿಯುವಿಕೆಯನ್ನೂ ಅಗಾಧವಾಗಿ ಪ್ರೀತಿಸುತ್ತಿದ್ದ. ಅಂತೆಯೇ ಸಾವಿನ ದವಡೆಗೆ ಸಿಕ್ಕು ನಗುತ್ತ ಬಾಳತೊಡಗಿದ. ನನ್ನನ್ನೂ ಬಾಳಗೆಳೆದು ನಿಲ್ಲಿಸಿದ. ನಾವು ಮಾಡಬಹುದಾದ್ದನ್ನೆಲ್ಲ ಮಾಡಿದೆವು. ರೋಗವನ್ನು ಗುರುತಿಸಿ, ಒಪ್ಪಿ, ಸಹಿಸಿಕೊಂಡಿದ್ದು ನಿಜವೇ ಆದರೂ ಅದಕ್ಕೆಷ್ಟು ಮಹತ್ವ ಕೊಡಬೇಕೋ ಅಷ್ಟನ್ನೇ ಕೊಟ್ಟಿದ್ದೆವು. ಹೀಗಾಗಿ ರೋಗಕ್ಕೂ ನಮ್ಮೆಡೆಗೆ ಭಯವಿದ್ದಿರಬೇಕು!

ಆತನಕ ಕೇವಲ ಆತನ ಹಿತೈಷಿಯಾಗಿ, ತಿಂಗಳುಗಟ್ಟಲೆ ಏಕಾಂತದಲ್ಲಿ ಆತನನ್ನು ಕೆಡವಿ ನಿಶ್ಚಲಳಾಗಿದ್ದ ನಾನು ಕ್ರಮೇಣ ಆತನ ಮನದನ್ನೆಯಾದೆ, ಗೆಳತಿಯಾದೆ, ಮಡದಿಯಾದೆ. ಆದರೆ ಈ ಸಹಜೀವನದ, ಸಂತಸದ ಕಾಲ ದೀರ್ಘವಾದುದಾಗಿರಲಿಲ್ಲ. ಕೇವಲ ಆರು ತಿಂಗಳ ಅವಧಿ ..... ಆತ ಸಾಯಲು ಪ್ರಾರಂಭಿಸಿದ. ಆದರೆ ಸಾಯುತ್ತಲೇ ಬದುಕುವ ಕಲೆಯನ್ನಾತ ರೂಢಿಸಿಕೊಂಡಿದ್ದ. ಬದುಕು ಎಷ್ಟೇ ಅಸಹನೀಯವಾದರೂ ಅದನ್ನು ಸಹ್ಯವಾಗಿಸಿಕೊಳ್ಳುವ ಕಲೆ ನಮಗೆ ಅಭ್ಯಾಸವಾಗಿತ್ತು.

ಯಾವುದರ ಬಗ್ಗೆ ನಾವು ತುಂಬ ಹೆದರಿದ್ದೆವೋ, ಅದು ಸಂಭವಿಸಿಯೇ ಬಿಟ್ಟಿತು. ನನ್ನಾತನ ಮಿದುಳನ್ನು ವೈರಸ್ ಆಕ್ರಮಿಸಿಕೊಳ್ಳತೊಡಗಿತು. ಉಳಿದ ಮನೋವೈಕಲ್ಯಕ್ಕಿಂತ ಏಡ್ಸ್ ವಿಕಲತೆ ವಿಭಿನ್ನವಾದುದು. ಮಿದುಳು ಪೂರ್ತಿಯಾಗಿ ನಿಷ್ಕ್ರಿಯವಾಗುವ ತನಕ ರೋಗಿಗೆ ತನ್ನಲ್ಲಿ ಆಗುತ್ತಿರುವ ಬದಲಾವಣೆಗಳು ಗೊತ್ತಾಗುತ್ತಿರುತ್ತವೆ! ತನ್ನ ಮರವು, ಯೋಚಿಸಲಾಗದಂತಹ, ಬಡಬಡಿಕೆ, ಅಸಂಬದ್ಧ ಮಾತು, ಕ್ರಿಯೆ ..... ಇವೆಲ್ಲವೂ ಅರಿವಿಗೆ ಬರುತ್ತಿರುತ್ತವೆ.

ಇದು ಗೊತ್ತಾದ ಕೂಡಲೆ ನಾವಿಬ್ಬರೂ ಕೂತು ರೋಗ ಉಲ್ಬಣಿಸುತ್ತಿರುವ ವಿಧಾನದ ಬಗ್ಗೆ ಚರ್ಚಿಸಿದೆವು. ತೀವ್ರಗೊಂಡಾಗ ನಾನು ಹೇಗೆ ಆತನಿಗೆ ನೆರವಾಗಬಹುದೆಂಬುದನ್ನು ಮೊದಲೇ ನಿರ್ಧರಿಸಿದೆವು. ಆತ ತನ್ನಿಂದ ಸಾಧ್ಯವಾದಷ್ಟೂ ಸಹಕರಿಸಿದ. ಬದುಕಬೇಕೆಂಬ ಆಸೆ

ಆತನನ್ನು ಸಾವಿನಿಂದ ಉಳಿಸುತ್ತಿತ್ತು. ಎಷ್ಟೋ ದಿನಗಳನ್ನು ನಾವು ಮಕ್ಕಳಂತೆ ಆಟವಾಡುತ್ತ ಕಳೆದಿದ್ದೇವೆ. ಅರ್ಧಕ್ಕೇ ಆಟ ನಿಲ್ಲಿಸಿ ಅತ್ತಿದ್ದೇವೆ. ಏನೇನೋ ನೆನೆದು ನಕ್ಕಿದ್ದೇವೆ.

ಆದರೆ ದಿನಗಳೆದಂತೆಲ್ಲ ಆತ ನಿಷ್ಕ್ರಿಯವಾಗ ತೊಡಗಿದ. ಮಾತು ಮುಗಿದು ಹೋದವು. ನನ್ನ ಹೆಜ್ಜೆ ಸಪ್ಪಳ ಕೇಳಿ ಥಕ್ಕನೆ ತಿರುಗಿ ನೋಡುವ ಕಾಲವೂ ಮುಗಿದುಹೋಯಿತು. ಇಷ್ಟಾದರೂ ಆತ ಬದುಕಿದ್ದ. ನಮ್ಮಿಬ್ಬರ ನಡುವಣ ಸಂಬಂಧ ಜೀವಂತವಾಗಿತ್ತು. ಸಾವಿನೊಂದಿಗೆ ನಾವು ಬದುಕಿದ್ದೆವು. ಆ ಸಾವು ಅತ್ಯಂತ ನಿಧಾನವಾದ, ಯಾತನಾಮಯವಾದ ಸಾವಾಗಿತ್ತು. ನಾನು ಸಾವಿನ ಸೂಲಗಿತ್ತಿಯಾಗಿದ್ದೆ! ಆತನ ಸಾವು ನಿಶ್ಚಿತ. ಆದರೆ ನನ್ನ ಭವಿಷ್ಯ? ಏಡ್ಸ್‌ನೊಂದಿಗೆ ಬದುಕಿದ್ದಕ್ಕಿಂತ, ಅದರಾಚೆಗೆ ಆರೋಗ್ಯವಂತ (?) ಜಗತ್ತಿನಲ್ಲಿ ಬದುಕಬೇಕಾದ ದಿನಗಳ ಕಲ್ಪನೆ ಹೆಚ್ಚು ದಾರುಣವಾಗಿತ್ತು. ಅದೊಂದು ಮುಂಜಾವು ..... ತಣ್ಣಗಿತ್ತು. ಚಳಿಗಾಲದ ಕಡೆಯ ದಿನ ವದು. ನಾನು ನನ್ನ ಪತಿಯ ಕೋಣೆಗೆ ಕಾಲಿಟ್ಟೆ. ಸಾವು ತನ್ನ ಕೆಲಸ ಮುಗಿಸಿ ಹೊರಟುಹೋಗಿತ್ತು. ನನ್ನ ಪತಿ ನಿಶ್ಚಲನಾಗಿದ್ದ.

ಶವಯಾತ್ರೆ ಮುಗಿಸಿ ಬಂದು ಕೋಣೆಯಲ್ಲಿ ಒಬ್ಬಳೇ ಕುಳಿತೆ. ನನ್ನ ಮಗ ಅಂಗಳದಲ್ಲಿ ಆಡುತ್ತಿದ್ದ. ಯಾರದೋ ಮಾತು ಕೇಳಿಸಿದವು. ಪಕ್ಕದ ಮನೆಯವರು ಮಾತಾಡಿಕೊಳ್ಳುತ್ತಿದ್ದರು,

''ಈ ಹುಡುಗನ ಅಪ್ಪ ಸತ್ತನಂತೆ?''

''ಹೌದು, ಇವತ್ತು ಬೆಳಗ್ಗೆ .....''

''ಏನಾಗಿತ್ತು?''

''ಏಡ್ಸ್!''

ನಾನು ವಿಷಣ್ಣಳಾಗಿ ಕೂತು ಕಿಟಕಿಯಾಚೆಗಿನ ಶೂನ್ಯವನ್ನೇ ದಿಟ್ಟಿಸಿದೆ, ನಿಸ್ಸಹಾಯಕಳಾಗಿ. ●

---

**ಈ ಲೇಖನದ ಮೂಲ ಹಂದರವು ಆಸ್ಟ್ರೇಲಿಯಾದ ಮೆಲ್‌ಬೋರ್ನ್‌ನಲ್ಲಿ ಗಲಾಟರಲ್ಲಿ ಮಹಿಳೆಯೊಬ್ಬಳು ಮಾಡಿದ ಭಾಷಣದಿಂದ ಪ್ರೇರಿತವಾಗಿದೆ. ಉಳಿದಂತೆ ಏಡ್ಸ್ ರೋಗದ ಕುರಿತಾದ ವಿವರಗಳನ್ನು ಡಾ. ಓ.ಎಸ್. ಶಂಕರ್ ಅವರ 'ಏಡ್ಸ್' ಪುಸ್ತಕದಿಂದ ಪಡೆಯಲಾಗಿದೆ. ಪುಸ್ತಕದ ಪ್ರಕಾಶಕರು 'ನವಕರ್ನಾಟಕ ಪ್ರಕಾಶನ'**

---

- ★ ಪ್ರಿಯ ವ್ಯಕ್ತಿಯನ್ನು ದೋಷಗಳ ಸಹಿತವಾಗಿಯೇ ಸ್ವೀಕರಿಸುವ ಶಕ್ತಿ ನಿಜವಾದ ಪ್ರೀತಿಯಲ್ಲಿರುತ್ತದೆ. ಮತ್ತು ಇರಬೇಕು.
- ★ ಐಶ್ವರ್ಯ ಹೆಚ್ಚಾದಂತೆ ಶಿಷ್ಟಾಚಾರಗಳು ಹೆಚ್ಚು ಬಂಧನಕಾರಿಯಾಗುತ್ತವೆ.
- ★ ಶರೀರ ಸುಖಕ್ಕೆ ಸಂಬಂಧಿಸಿದ ವಿಷಯಗಳನ್ನು ಮುಕ್ತಕಂಠವಾಗಿ ಮಾತನಾಡುವುದು ಶಿಷ್ಟಸಮ್ಮತವೆನಿಸುವುದಿಲ್ಲ.
- ★ ಪ್ರತಿಷ್ಠೆ, ಒಂದು ವಿಷಸಿಕ್ತ ಬಾಣದಂತೆ, ಮನುಷ್ಯನನ್ನು ಜೀವಸಹಿತವಾಗಿ ಹುಗಿದು ಆ ಜಾಗದಲ್ಲಿ ಒಂದು ಸುಂದರವಾದ ಸಮಾಧಿಯನ್ನು ಕಟ್ಟುತ್ತದೆ.
- ★ ದೂರದಿಂದ ಭಯಂಕರವಾಗಿ ಕಂಡದ್ದು ನಿಜವಾಗಿಯೂ ಅಷ್ಟು ಭಯಂಕರವಾಗಿರುವುದಿಲ್ಲ. ಮರಣವಾದರೂ ಹಾಗೆಯೇ.
- ★ ಸಾವಿನ ಬಾಗಿಲಲ್ಲಿ ಅರಸೂ ಕೂಡ ಭಿಕಾರಿಯಾಗುತ್ತಾನೆ.
- ★ ಧೈರ್ಯದ ಒಂದು ಮಾತಿನಲ್ಲಿ, ಆತ್ಮೀಯತೆಯ ಒಂದು ಸ್ಪರ್ಶದಲ್ಲಿ, ಅಗಾಧವಾದ ಶಕ್ತಿಯಿದೆ.
- ★ ಸುಖಕ್ಕಿಂತ ದುಃಖದಲ್ಲಿಯೇ ಜನರು ಹೆಚ್ಚು ಹತ್ತಿರವಾಗುತ್ತಾನೆ.

(ವಿ.ಎಸ್.ಖಾಂಡೇಕರರ 'ಯಯಾತಿ'ಯಿಂದ)

(ಸಂಗ್ರಹ) ವಿ.ಎಚ್.ಅಶ್ವತ್ಥಾಮ

# 'ಕೆನಡಾ' ಎಂದರೆ ಇಲ್ಲೇನಿಲ್ಲ

ಎಸ್. ಜಯಶ್ರೀನಿವಾಸರಾವ್

ಕೆನಡಾ ದೇಶಕ್ಕೆ ಕೆನಡಾ ಎಂದೇ ಏಕೆ ಹೆಸರಿದೆ? ಗೆಳೆಯರನ್ನು ಭೇಟಿಯಾದಾಗ ಕೈ ಕುಲುಕುವ ಪದ್ಧತಿ ಹೇಗೆ ಶುರುವಾಯಿತು? Curfew ಪದದ ನಿಜವಾದ ಅರ್ಥವೇನು? His Masters Voiceನ ನಾಯಿಯ ಹೆಸರೇನಿರಬಹುದು? ಬಿ.ಎ. ಪದವಿಯಲ್ಲಿರುವ ಬ್ಯಾಚಲರ್ ಎಂಬ ಪದಕ್ಕೆ ಬ್ರಹ್ಮಚಾರಿ ಎಂಬರ್ಥ ಸರಿಯೇ?

ಇವೆಲ್ಲಾ ನಾವು ಪ್ರತಿನಿತ್ಯ ಬಳಸುವ ಪದಗಳು, ನೋಡುವ ವಿಷಯಗಳು. ತುಂಬಾ ಸಾಮಾನ್ಯವಾದ, ಜೀವನದಲ್ಲಿ ಹಾಸುಹೊಕ್ಕಾಗಿರುವ ಈ ಪದಗಳ, ವಿಷಯಗಳ ಹಿಂದೆ, ಪದ್ಧತಿಗಳ ಹಿಂದೆ ಸ್ವಾರಸ್ಯಕರ ಘಟನೆಗಳು, ಪದ್ಧತಿಗಳು ಹಾಗೂ ಮೂಲಪದಗಳಿವೆ. ಅವುಗಳ ಕಥೆಗಳು ಸ್ವಾರಸ್ಯಕರವಾಗಿರುವುದರ ಜತೆಗೆ ಜ್ಞಾನವರ್ಧಕವಾಗಿವೆ, ಎಂದರೆ ಸುಳ್ಳಾಗಲಾರದು.

ಹದಿನೈದನೇ ಶತಮಾನದಲ್ಲಿ ಯುರೋಪಿನ ಕೆಲವು ಸಾಹಸಿಗಳು ಭಾರತವನ್ನರಸಿ ಹೊರಟರು. ಹೀಗೆ ಹೊರಟವರಲ್ಲಿ ಕೊಲಂಬಸ್ ಅಮೆರಿಕ ಖಂಡವನ್ನು ಕಂಡು ಹಿಡಿದ. ವಾಸ್ಕೋ ಡ ಗಾಮಾ ಭಾರತಕ್ಕೆ ಸಮುದ್ರ ದಾರಿಯನ್ನು ಕಂಡು ಹಿಡಿದ. ಹೀಗೆ ಭಾರತವನ್ನರಸಿ ಹೊರಟವರಲ್ಲಿ ಪೋರ್ಚುಗಲ್ ದೇಶದ ಕೊರ್ಟೆರಲ್ ಎಂಬವನು ಅಮೆರಿಕ ಖಂಡದ ಸೇಂಟ್ ಲಾರೆನ್ಸ್ ನದಿಯ ತನಕ ಹೋದ. ಅಲ್ಲಿಂದ ಭಾರತಕ್ಕೆ ಹೋಗಬಹುದೆಂದು ಭಾವಿಸಿದ. ಅವನ ಜತೆಗಿದ್ದವರೆಲ್ಲ ಅಲ್ಲಿನ ಪ್ರದೇಶವನ್ನೆಲ್ಲ ಸುತ್ತಿ ನೋಡಿ ಬೇಜಾರಾಗಿ 'ಕೆನಡಾ' 'ಕೆನಡಾ' ಎಂದು ಹೇಳತೊಡಗಿದರು. ಅವರ ಭಾಷೆಯಲ್ಲಿ 'ಕೆನಡಾ' ಎಂದರೆ 'ಇಲ್ಲೇನಿಲ್ಲ' ಎಂದರ್ಥ. ಆ ಪ್ರದೇಶದ ಮೂಲನಿವಾಸಿಗಳು ಈ ಪದವನ್ನು ಪದೇ ಪದೇ ಕೇಳುತ್ತಿದ್ದರು. ಹಾಗೂ ಅವರ ಭಾಷೆಯಲ್ಲೂ ಬಳಸತೊಡಗಿದರು. ಸ್ವಲ್ಪ ಸಮಯದ ನಂತರ ಇತರ ಯುರೋಪಿನವರು ಬಂದಾಗ ಅಲ್ಲಿನ ಜನ 'ಕೆನಡಾ' .... 'ಕೆನಡಾ' ಎಂದು ಕೂಗಿದರು. 'ಕೆನಡಾ' ಎಂದು ಕೂಗಿ ವಾಪಸ್ ಹೋದ ಪೋರ್ಚುಗೀಸರ ಹಾಗೆ 'ಕೆನಡಾ' ಎಂದು ಕೂಗಿದರೆ ಈ ಹೊಸ ಜನರೂ ತಿರುಗಿ ಹೋಗುತ್ತಾರೆ ಎಂದು ಆ ಮುಗ್ಧ ಜನ ಭಾವಿಸಿದರು. ಅಲ್ಲಿ ನೆಲೆಸಲು ಬಂದ ಜನರೆಲ್ಲರೂ ಈ ಕೂಗು ಕೇಳಿ ಈ ಪ್ರದೇಶದ ಹೆಸರಿರಬೇಕೆಂದು ಭಾವಿಸಿದರು. ಹೀಗೆ ಆ ನಾಡಿಗೆ 'ಕೆನಡಾ' ಎಂಬ ಹೆಸರು ಅಂಟಿಕೊಂಡಿತು.

ನಾವು ದಿನನಿತ್ಯ ಗೆಳೆಯರನ್ನು ಭೇಟಿಯಾದಾಗ ಕೈ ಕುಲುಕುವ ಕ್ರಿಯೆ ಅಥವಾ ಪರಿಪಾಟದ ಹಿಂದೆಯೂ ಒಂದು ಹಳೇ ಸಂಪ್ರದಾಯದ ಕಥೆ ಇದೆ. ಈ ಕ್ರಿಯೆ ಯುರೋಪಿನ ಪುರಾತನ ಸಂಪ್ರದಾಯಗಳಲ್ಲಿ ಒಂದು. ಆಗಿನ ಕಾಲದಲ್ಲಿ ಗೆಳೆತನ ಸೂಚಿಸಲಿಕ್ಕಾಗಲಿ ಅಥವಾ ಸೌಜನ್ಯತೆ ಸೌಹಾರ್ದತೆಗಾಗಲಿ ಕೈ ಕುಲುಕುತ್ತಿರಲಿಲ್ಲ. ಅದು ಒಂದು ಆತ್ಮ ರಕ್ಷಣೆಯ ಕ್ರಿಯೆ ಆಗಿತ್ತು ಎಂದರೆ ಆಶ್ಚರ್ಯವಾಗಬಹುದು. ಆಗಿನ ಕಾಲದಲ್ಲಿ ಸಾಮಾನ್ಯವಾಗಿ ಎಲ್ಲರೂ ಖಡ್ಗವನ್ನು ಧರಿಸುತ್ತಿದ್ದರು. ಯಾರಾದರೂ ಎದುರಿಗೆ ಸಿಕ್ಕಾಗ ಅವರು ತಮ್ಮ ಖಡ್ಗವನ್ನು ಬಳಸದಿರಲೆಂದು ಅವರ ಆಯುಧ ಬಳಸುವ ಕೈಯನ್ನು ಗಟ್ಟಿಯಾಗಿ ಹಿಡಿಯುತ್ತಿದ್ದರು. ದಿನ ಕಳೆದಂತೆ ಆಯುಧದ ರೂಪಗಳು ಬದಲಾಗುತ್ತಿದ್ದಂತೆ, ಖಡ್ಗದಿಂದ ಅಪಾಯ ಕಡಿಮೆಯಾಗುತ್ತ ಬಂತು. ಆದರೆ ಕೈ ಕುಲುಕುವ ಅಭ್ಯಾಸ ಮಾತ್ರ ಉಳಿದುಕೊಂಡು ಬಂದಿದೆ. ಈಗಂತೂ ಪ್ರಪಂಚದ ಮೂಲೆಮೂಲೆಗಳಲ್ಲೂ ಕೈ ಕುಲುಕುವುದು ಬಹಳ ಸಾಮಾನ್ಯವಾದ ಗೆಳೆತನದ ಸೂಚಕ ಸಂಕೇತವಾಗಿದೆ.

ಮೊದಲ ವಿಲಿಯಂ (William I) ಹಾಗೂ ದ್ವಿತೀಯ ವಿಲಿಯಂರ (William II) ಕಾಲದಲ್ಲಿ ಸೂರ್ಯಾಸ್ತದ ಹೊತ್ತಿಗೆ ಒಂದು ಘಂಟೆಯನ್ನು

ಹೊಡೆಯುತ್ತಿದ್ದರು. ಈ ಘಂಟೆಯ ಶಬ್ದವನ್ನು ಕೇಳುತ್ತಿದ್ದಂತೆ ಪ್ರಜೆಗಳೆಲ್ಲರೂ ಬೆಂಕಿ ಹಾಗೂ ಮೊಂಬತ್ತಿಗಳನ್ನು ಆರಿಸಬೇಕೆಂದು ಸೂಚನೆಯಿತ್ತು. ದಿನನಿತ್ಯದ ಈ ಒಂದು ಕ್ರಿಯೆ ಅಥವಾ ಚಟುವಟಿಕೆಗೆ 'ಕರ್ಫ್ಯೂ' ಎಂದು ಕರೆಯುತ್ತಿದ್ದರು. ಈ ಪದವನ್ನು ಫ್ರೆಂಚ್ ಭಾಷೆಯ 'ಕವೆ' (COVRE) ಹಾಗೂ 'ಫ್ಯೂ' (FEW) ಎಂಬ ಎರಡು ಪದಗಳನ್ನು ಜೋಡಿಸಿ ರೂಪಿಸಲಾಗಿದೆ. 'ಬೆಂಕಿಯನ್ನು ಮುಚ್ಚು' ಎಂಬುದು ಈ ಪದಗಳ ಒಟ್ಟು ಅರ್ಥ. ಆದರೆ ಈಗಿನ ಅರ್ಥವೇ ಬೇರೆ. ಶಾಂತಿಪಾಲನೆಗೋಸ್ಕರ ನಗರಗಳಲ್ಲಿ 'ಕರ್ಫ್ಯೂ' ವಿಧಿಸುತ್ತಾರೆ. ಸೂಚಿತ ಅವಧಿಗಳಲ್ಲಿ ಮಾತ್ರ ಮನೆಯಿಂದ ಹೊರಗೆ ಕದಲಬಹುದು.

'ಗ್ರಾಮಾಫೋನ್ ಕಂಪನಿ' ಎಂಬ ಲಾಂಗ್‌ಪ್ಲೆ (LP) ಹಾಗೂ ಕ್ಯಾಸೆಟ್ ತಯಾರಿಸುವ ಸಂಸ್ಥೆಯ ಚಿಹ್ನೆ ಎಲ್ಲರೂ ನೋಡಿರಬಹುದು. ಹಳೆಯ ಕಾಲದ ಕೊಳವೆ ಗ್ರಾಮಾಫೋನ್ ರೆಕಾರ್ಡ್ ಪ್ಲೇಯರ್‌ನ ಮುಂದೆ ಕುಳಿತು ಸಂಗೀತವನ್ನಾಲಿಸುತ್ತಿರುವಂತೆ ಕುಳಿತಿರುವ ನಾಯಿಯ ಚಿತ್ರ ಸಂಗೀತ ಪ್ರಿಯರಿಗೆಲ್ಲರಿಗೂ ಚಿರಪರಿಚಿತ.

1880ರಲ್ಲಿ ಲಂಡನ್ನಿನ ಫ್ರಾನ್ಸಿಸ್ ಬರ್ರ್ಯಾಡ್ ಎಂಬ ಕಲಾವಿದ ತನ್ನ ಮಾತನಾಡುವ ಯಂತ್ರಕ್ಕೆ ಒಂದು ಕೊಳವೆಯನ್ನು ಸಿಕ್ಕಿಸಿದ. ಹಾಗೂ ಆ ಯಂತ್ರದ ಕೊಳವೆಯಿಂದ ಸಂಗೀತ ಹೊರಬರುತ್ತಿದ್ದಂತೆ ಬರ್ರ್ಯಾಡ್‌ನ (Nipper) ಎಂಬ ಹೆಸರಿನ ಫಾಕ್ಸ್ ಟೆರಿಯರ್ (FOX TERRIER) ನಾಯಿ ಅದರ ಮುಂದೆ ಕುಳಿತು ತಲೆಯನ್ನು ಕೊಂಕಿಸಿ ಆಲಿಸುತ್ತಿತ್ತು. 1895ರಲ್ಲಿ ನಿಪ್ಪರ್ ಸತ್ತಾಗ ಬರ್ರ್ಯಾಡ್‌ನು ಅಂದು ನೋಡಿದ ಹೃದಯಂಗಮ ದೃಶ್ಯವನ್ನು ಚಿತ್ರಿಸಲು ನಿರ್ಧರಿಸಿದ. ಆ ಚಿತ್ರವನ್ನು ಆತ 'ಹಿಸ್ ಮಾಸ್ಟರ್ಸ್ ವಾಯ್ಸ್' (His Master's Voice) ಎಂದು ಕರೆದ.

ಗ್ರಾಮಾಫೋನ್ ಕಂಪನಿಯ ಈ ಕಲಾಕೃತಿಯನ್ನು ಮತ್ತು ಅದರ ಹಕ್ಕುಗಳನ್ನು ಒಂದು ನೂರು ಪೌಂಡುಗಳಿಗೆ ಖರೀದಿಸಿತು. ಆ ಮೂಲ ಕೃತಿಗೆ ಬಹಳ ಬೆಲೆ ಇತ್ತು. ಕಂಪನಿಯ ನಿರ್ದೇಶಕರ ಕೊಠಡಿಯಲ್ಲಿ ನೇತು ಹಾಕಿದ್ದ ಈ ಚಿತ್ರವನ್ನು ಬೆಂಕಿ ಹಾಗೂ ಇತರ ಆಕಸ್ಮಿಕಗಳಲ್ಲಿ ರಕ್ಷಿಸಬೇಕೆಂದು ಕಂಪನಿಯು ಅಗ್ನಿಶಾಮಕ ವಿಭಾಗಕ್ಕೆ ವಿಶೇಷ ಆಜ್ಞೆ ಇತ್ತು. ಅಂದಿನಿಂದ ನಿಪ್ಪರ್‌ನ ಪ್ರತಿಕೃತಿಯು ಸಾವಿರ ಸಾವಿರ ಸಂಖ್ಯೆಯಲ್ಲಿ ಅಚ್ಚಾಗಿವೆ. ರೆಕಾರ್ಡುಗಳು ಕ್ಯಾಸೆಟ್ಟುಗಳಲ್ಲಿ ಮಾತ್ರವಲ್ಲ, ಪೆನ್ನುಗಳು, ಟಿ ಶರ್ಟುಗಳು, ಪೋಸ್ಟರ್‌ಗಳಲ್ಲಿಯೂ ಅಚ್ಚಾಗಿವೆ. ಈಗಲೂ ಗ್ರಾಮಾಫೋನ್ ಕಂಪನಿಯು ನಿಪ್ಪರ್ ಅನ್ನು ತನ್ನ ಅಧಿಕೃತ ಚಿಹ್ನೆಯಾಗಿ ಬಳಸುತ್ತಿದೆ. ನಿಪ್ಪರ್‌ಗೆ ಅಭಿಮಾನಿಗಳಿಂದ ಪತ್ರಗಳೂ ಬರುತ್ತವೆಂದರೆ ಆಶ್ಚರ್ಯವಾಗಬಹುದು.

ಬಿ.ಎ. ಪದವಿಯಲ್ಲಿರುವ 'ಬಿ' ಅಕ್ಷರಕ್ಕೆ 'ಬ್ಯಾಚೆಲರ್' ಎಂಬ ವಿಸ್ತರಣೆ ಇದೆ. ಆದರೆ ಈ 'ಬ್ಯಾಚೆಲರ್'ನ ಅರ್ಥ 'ಬ್ರಹ್ಮಚಾರಿ' ಎಂದಲ್ಲ. ಟಾಲ್ಬಾಟ್ ಎಂಬ ಆಂಗ್ಲ ರಾಜಕಾರಣಿಯ ಪ್ರಕಾರ ಈ ಪದವನ್ನು ಸ್ಪಾನಿಷ್ ಭಾಷೆಯ 'BACHILLIR' ಎಂದರೆ ಬಹಳ ಹೊತ್ತು ಮಾತಾಡುವವ, ವಾದಿಸುವವ ಎಂಬ ಅರ್ಥ ಕೊಡುವ ಪದದಿಂದ ತಗೆದುಕೊಳ್ಳಲಾಗಿದೆ. ಹಿಂದೆ ಪದವಿ ಪ್ರಧಾನ ಸಮಾರಂಭದ ಮುಂಚೆ ವಿದ್ಯಾರ್ಥಿಯ ವಾಕ್‌ಚಾತುರ್ಯ ಹಾಗೂ ಬುದ್ಧಿವಂತಿಕೆಯನ್ನು ಪರೀಕ್ಷಿಸಲು ಚರ್ಚಾ ಸ್ಪರ್ಧೆಗಳಿದ್ದಂತೆ ವಾದ ಪ್ರತಿವಾದಗಳು ನಡೆಯುತ್ತಿದ್ದವು. ಈಗಲೂ ಸಹ ಒಬ್ಬ ಒಳ್ಳೆಯ ವಾಕ್‌ಪಟುವನ್ನು ಕೇಂಬ್ರಿಜ್ ವಿಶ್ವವಿದ್ಯಾನಿಲಯದಲ್ಲಿ 'ರ್‍ಯಾಂಗ್ಲರ್' (WRANGELER) ಎಂದು ಕರೆಯುತ್ತಾರೆ. ಹೀಗೆ, ಬ್ಯಾಚೆಲರ್ ಎಂದರೆ ಒಬ್ಬ ಒಳ್ಳೆಯ ಭಾಷಣಕಾರ, ವಾಕ್‌ಪಟು, ಈ ಪದವನ್ನು 'BACHILLER' ಎಂದು ಬರೆಯುತ್ತಿದ್ದರು.

ಹೀಗೆ ಪದಗಳ ಹಿಂದೆ ಅದರದೇ ಆದ ಸ್ವಾರಸ್ಯಕರ ಕಥೆಗಳಿವೆ. ಇಲ್ಲಿ ತೆಗೆದುಕೊಂಡಿರುವ ಪದಗಳು ಎಲ್ಲವೂ ವಿದೇಶದ್ದಾಗಿದ್ದರೂ ನಾವದನ್ನು ದಿನ ನಿತ್ಯ ಬಳಸುವುದರಿಂದ ಇವೆಲ್ಲದರ ಹಿನ್ನೆಲೆಯ ಕಥೆಗಳು ಹಾಗೂ ಘಟನೆಗಳು ಇನ್ನೂ ಸ್ವಾರಸ್ಯಕರ ಹಾಗೂ ರೋಚಕವಾಗಿದೆ. ●

(ಸಂಗ್ರಹ)

# ಸತ್ತ ಜೀವಿಯ ಮೇಲೆ ರೆಕ್ಕೆ ಚೆಲ್ಲುವ ರಣಹದ್ದು

ಚಿತ್ರ-ಲೇಖನ : ಹೇಮಚಂದ್ರ ಅಕ್ಕಿ



"ಹದ್ದು ಬದುಕಿದ ಹಾಗೆ ಯಾಕೆ ಬದುಕಿರಬೇಕು?" ಎಂಬುದು ಎಲ್ಲ ಭಾಷೆಗಳಲ್ಲೂ ಬಳಕೆಯಲ್ಲಿರುವ ಮಾತು. "ಹದ್ದಿನ ಕಣ್ಣು! ಹ್ಯಾಗೆ ನೋಡ್ತಾನೆ ನೋಡು ...." ಅಂತಲೂ ಅನ್ನುತ್ತಿರುತ್ತೇವೆ. ತುಂಬ ಕ್ರೂರಿಯಾದವನನ್ನು 'ಅವನೊಬ್ಬ ರಣಹದ್ದು' ಎಂದು ಮೂದಲಿಸುತ್ತೇವೆ. ಇಷ್ಟಕ್ಕೂ ಈ 'ರಣಹದ್ದು' ಅಷ್ಟೊಂದು ಕೆಟ್ಟದ್ದೆ?

ಥಕ್ಕನೆ ನೋಡಿದರೆ ಮಗುವಿನಂತೆ ಅಥವಾ ಕುಸಿದ ಬೆನ್ನಿನ ತೆಳ್ಳನೆಯ ಮುದುಕನಂತೆ ಕಾಣುವ, ಸದಾ ಸತ್ತ ಜೀವಿಯ ಸುತ್ತ ಹಾರಾಡುವ, ಬೇಟೆಯಾಡಲಾಗದ, ಕೊಳಕು ದೇಹದ ಈ ಪಕ್ಷಿ ಮನುಷ್ಯನ ಹೀಯಾಳಿಕೆಗೆ, ಅವಕೃಪೆಗೆ ಪಾತ್ರವಾಗಿದೆ. ತುಂಬ ವರ್ಷಗಳ ಕಾಲ ಬದುಕುವ ಈ ಪಕ್ಷಿಯನ್ನು ಕಂಡರೆ ಎಂಥದೋ ಅಸಹ್ಯ, ಏನೋ ಅಸಹ್ಯ.

### ರಣರಂಗದ ಹದ್ದುಗಳು

ಆದರೆ ರಣಹದ್ದು ಒಂದರ್ಥದಲ್ಲಿ ಹಾರಾಡುವ ಮುನಿಸಿಪಾಲಿಟಿ! ಅಷ್ಟರ ಮಟ್ಟಿಗೆ ಮನುಷ್ಯನಿಗೆ ನೆರವಾಗುವ ಜೀವಿ. ಆದರದು ನಮಗಿಂತ ತುಂಬ ದೂರದ, ಎತ್ತರದ ಲೋಕ. ಅಷ್ಟೇ ನಿಗೂಢವೂ ಹೌದು. ಈ ಹಿಂದೆ ಯುದ್ಧಗಳು ನಡೆದಾಗ ರಣರಂಗದಲ್ಲಿ ಸತ್ತು ಬಿದ್ದ ಸೈನಿಕರ ಮಾಂಸ ತಿನ್ನಲು ಎರಗುತ್ತಿದ್ದುದರಿಂದಲೋ ಏನೋ ಇವಕ್ಕೆ 'ರಣಹದ್ದು' (ರಣರಂಗದ ಹದ್ದು)ಗಳು ಎಂಬ ಹೆಸರು ಬಂದಿರಬೇಕು. ರಣಹದ್ದುಗಳ ಸಮೂಹವನ್ನು ಪಕ್ಷಿವಿಜ್ಞಾನಿಗಳು ಎರಡು ಗುಂಪುಗಳನ್ನಾಗಿ ವಿಂಗಡಿಸಿದ್ದಾರೆ.

ರಣಹದ್ದುಗಳಿಗೂ ಮನುಕುಲದ ನಂಬುಗೆಗಳಿಗೂ ಹಳೆಯ ನಂಟು. ಪುರಾತನ ಈಜಿಪ್ಟ್ ಮತ್ತು ಮಧ್ಯ ಅಮೆರಿಕೆಯಲ್ಲಿ ಇತ್ತು ಎನ್ನಲಾದ 'ಮಯಾ' ನಾಗರಿಕತೆಯ ಜನರು ರಣಹದ್ದುಗಳನ್ನು ಸಂತಾನ ಸೂಚಕ ಜೀವಿಗಳೆಂದು ಭಾವಿಸುತ್ತಿದ್ದರು. ಅವುಗಳನ್ನು ಕೊಲ್ಲುವುದು ನಿಷೇಧವಾಗಿತ್ತು. ಪುರಾತನ ಈಜಿಪ್ತದ ಜನ ತಮ್ಮ ಮೆಕೆಬೆಟ್ ದೇವತೆ ಕಾಲಾಂತರದಲ್ಲಿ ರಣಹದ್ದಿನ ರೂಪ ತಾಳಿದಳೆಂದು ನಂಬಿದ್ದರು. ಗ್ರೀಕ್ ಮತ್ತು ರೋಮ್ ದೇಶಗಳ ದಾದಿಯರಿಗೆ ರಣಹದ್ದುಗಳ ಪುಕ್ಕಗಳನ್ನಾರಿಸಿಟ್ಟುಕೊಳ್ಳುವ ಹವ್ಯಾಸವಿತ್ತು. ಅವರ ಪಾಲಿಗೆ ಅವು ಶುಭಸೂಚಕಗಳಾಗಿದ್ದವು. ಇಂದಿಗೂ ಸತ್ತ ವ್ಯಕ್ತಿಯನ್ನು ಹೂಳುವ ಅಥವಾ ಸುಡುವ ಸಂಪ್ರದಾಯವಿಲ್ಲದ ಕೆಲವು ಫಾರ್ಸಿ ಮತೀಯರು ಮೃತ ದೇಹಗಳನ್ನು ಎತ್ತರವಾದ ಕಟ್ಟಡಗಳ ಮೇಲಿಟ್ಟು ಬರುತ್ತಾರೆ. ಅಥವಾ ಊರಾಚೆಗಿನ ಮರಗಳಿಗೆ ನೇತು ಹಾಕುತ್ತಾರೆ. ಅವು ರಣಹದ್ದುಗಳಿಗೆ ಸಂದಾಯವಾಗುವ ಕಾಣಿಕೆಗಳೆಂಬುದು ಅವರ ನಂಬಿಕೆ.

ಐದು ಸಾವಿರ ವರ್ಷಗಳಷ್ಟು ಪುರಾತನವಾದ ಈಜಿಪ್ತ್ ಸಂಸ್ಕೃತಿಯಲ್ಲಿ ರಣಹದ್ದುಗಳಿಗೆ 'ಫೆರೋ(ರಾಜ)ನ ಕೋಳಿ' ಎಂಬ ಹೆಸರಿತ್ತು. ಅಂದಿನ ಕೆಲ ಸಮಾಧಿಗಳ ಗೋಡೆಗಳ ಮೇಲೆ ಈ ಪಕ್ಷಿಯ ಚಿತ್ರಗಳಿವೆ. ಈ ಜಾತಿಯ ರಣಹದ್ದುಗಳು ಬಿಳಿಯ ಬಣ್ಣದವುಗಳಾಗಿದ್ದು ಕೊಂಚ ಮಟ್ಟಿಗೆ ಕೋಳಿಯನ್ನು ಹೋಲುತ್ತವೆ. ಸತ್ತ ಪ್ರಾಣಿಯ ಮಾಂಸದೂಟಕ್ಕೆ ಇವು ಕೊನೆಯ ಅತಿಥಿಗಳು. ಹೀಗಾಗಿ, ಅವುಗಳ ಕೊಕ್ಕುಗಳು ಕೊಳೆತ ಮಾಂಸದ ಚೂರುಗಳನ್ನು ಕಿತ್ತು ತಿನ್ನಲು ಬರುವಂತೆ ಮೊನಚಾಗಿ ರೂಪುಗೊಂಡಿವೆ. ಇವು ಹೆಚ್ಚಾಗಿ ದಕ್ಷಿಣ ಯುರೋಪ, ದಕ್ಷಿಣ ಏಷಿಯಾ ಮತ್ತು ಆಫ್ರಿಕಾಗಳಲ್ಲಿ ವಾಸಿಸುತ್ತವೆ. ತಮ್ಮ ಗೂಡನ್ನು ಸಮುದ್ರ ಮಟ್ಟಕ್ಕಿಂತ ಹನ್ನೆರಡು ಸಾವಿರ ಅಡಿಗಳಷ್ಟು ಎತ್ತರದಲ್ಲಿ ಕಲ್ಲು ಬಂಡೆಗಳ ಸಂದಿಯಲ್ಲಿ ಕಟ್ಟಿಕೊಳ್ಳುತ್ತವೆ. ಒಂದೋ ಎರಡೋ ಮೊಟ್ಟೆಗಳನ್ನಿಡುವ ಇವು ಮರಿಗಳ ಪಾಲನೆಯಲ್ಲಿ ತುಂಬ ಕಾಳಜಿ ವಹಿಸುತ್ತವೆ. ಸಾಮಾನ್ಯವಾಗಿ ಒಂದು ಹದ್ದಿನ ಮರಿ ಹಾರಲು ಯೋಗ್ಯವಾಗುವುದು ಒಂದು ವರ್ಷದ ನಂತರವೇ! ಮರಿಯಾಗಿದ್ದಾಗ ಈ ಜಾತಿಯ ರಣಹದ್ದು ಕಂದು ಬಣ್ಣದ್ದಾಗಿರುತ್ತದೆ. 'ಈಜಿಪ್ಷಿಯನ್ ವಲ್ಚರ್' (Egyptian Vulture) ಎಂದೇ ಕರೆಸಿಕೊಳ್ಳುವ ಈ ಬಿಳಿ ರಣಹದ್ದು ಆಸ್ಟ್ರಿಚ್ ಪಕ್ಷಿಗಳ ಮೊಟ್ಟೆಗಳನ್ನು ಒಡೆದು ತಿನ್ನಲು ಕಲ್ಲನ್ನು ಆಯುಧವನ್ನಾಗಿ ಬಳಸುತ್ತದೆ.

### ಗಡ್ಡದ ರಣಹದ್ದುಗಳು

ಭಾರತದಲ್ಲಿ ಸುಮಾರು ಎಂಟು ಜಾತಿಯ ರಣಹದ್ದುಗಳಿದ್ದು ಅವುಗಳಲ್ಲಿ ಹಿಮಾಲಯದ 'ಗಡ್ಡಧಾರಿ' ರಣಹದ್ದುಗಳು ತುಂಬ ಮುಖ್ಯವಾದವೆನ್ನಲಾಗಿದೆ. ನೋಡಲು ನಿಜಕ್ಕೂ ಸುಂದರವಾದ ಈ ರಣಹದ್ದುಗಳನ್ನು ಅನೇಕರು ಸ್ವರ್ಣ ಗರುಡ (Golden Eagle) ಎಂದು ತಪ್ಪಾಗಿ ಭಾವಿ



ಸುತ್ತಾರೆ. ತುಂಬ ಅಪರೂಪವಾದ ಈ ಗಡ್ಡದ ರಣಹದ್ದುಗಳು ಭಾರತದ ಹಿಮಾಲಯ, ಉತ್ತರ ಆಫ್ರಿಕಾ, ಮಧ್ಯಏಷ್ಯಾ ಮತ್ತು ಯುರೋಪ್ ಖಂಡಗಳಲ್ಲಿ ಕಂಡುಬರುತ್ತವೆ. ಇಡೀ ಯುರೋಪದಲ್ಲಿ ಕೇವಲ ಐವತ್ತು ಜೊತೆ ರಣಹದ್ದುಗಳು ಸಂತಾನೋತ್ಪತ್ತಿಯಲ್ಲಿ ತೊಡಗಿವೆಯೆಂದರೆ ಈ ಪಕ್ಷಿ ಎಷ್ಟು ವಿರಳ ಎಂಬುದು ನಿಮಗರ್ಥವಾದೀತು.

ಗಡ್ಡದ ರಣಹದ್ದುಗಳಿಗೂ ಸ್ವರ್ಣಗರುಡಗಳಿಗೂ ಹೋಲಿಕೆ ಬಹಳ. ಅವುಗಳ ನಡಿಗೆ, ಹಾರುವ ರೀತಿ, ಸತ್ತ ಪ್ರಾಣಿಯನ್ನು ಕಾಲಲ್ಲಿ ಎತ್ತೊಯ್ಯುವ ವಿಧಾನ ..... ಎಲ್ಲವೂ ಗರುಡನನ್ನೇ ಹೋಲುತ್ತವೆ. ಆದ್ದರಿಂದ ಪಕ್ಷಿ ವಿಜ್ಞಾನಿಗಳು ಇವುಗಳನ್ನು ರಣಹದ್ದು ಮತ್ತು ಗರುಡ ಕುಲದ ನಡುವಣ ಪಕ್ಷಿಗಳೆಂದೇ ಭಾವಿಸುತ್ತಾರೆ. ಎಲ್ಲ ರಣಹದ್ದುಗಳಂತೆಯೇ ಈ ಗಡ್ಡದ ಹಕ್ಕಿಗಳಿಗೂ ಮೊಂಡ ಕೊಕ್ಕು ಮತ್ತು ಮೊಂಡಾದ ಉಗುರುಗಳಿವೆ. ಹೀಗಾಗಿ ಸತ್ತ ಪ್ರಾಣಿಯ ಮಾಂಸವೇ ಗತಿ. ಆದರೆ ಈ ಹಕ್ಕಿಯ ಒಂದು ವೈಶಿಷ್ಟ್ಯವೆಂದರೆ ಇದಕ್ಕೊಂದು ವಿಶಿಷ್ಟ ನಾಲಗೆಯಿದೆ. ಮಾಂಸಾಹಾರಿ ಮನುಷ್ಯರು ಮೂಳೆಯೊಳಗಿನ ಅಸ್ಥಿಮಜ್ಜೆ (Bone marrow)ಯನ್ನು ಹೀರಿ ತಿಂದಂತೆಯೇ ಈ ಪಕ್ಷಿ ತನ್ನ ನಾಲಗೆಯಿಂದ ಅಸ್ಥಿಮಜ್ಜೆಯನ್ನು ತಿನ್ನುತ್ತದೆ. ತಮಾಷೆಯೆಂದರೆ ಮೂಳೆಯನ್ನು ಒಡೆದು ಒಳಗಿನ ಮಜ್ಜೆ ಹೀರಲು ಈ ಹಕ್ಕಿ ಬಳಸುವ ವಿಧಾನ. ಅದು ಮೂಳೆಯನ್ನು ಸುಮಾರು ಮುನ್ನೂರು ಅಡಿ ಎತ್ತರಕ್ಕೊಯ್ದು ಅಲ್ಲಿಂದ ಕೆಳಗಿನ ಬಂಡೆಗಳ ಮೇಲಕ್ಕೆಸೆಯುತ್ತದೆ. ಹಾಗೆ ಬಿದ್ದು ಮೂಳೆ ಚೂರಾದ ನಂತರವೇ ಅದರ ಊಟ!

ಗಡ್ಡದ ರಣಹದ್ದಿನ ಗೂಡು ಆರರಿಂದ ಏಳು ಸಾವಿರ ಅಡಿ ಎತ್ತರದಲ್ಲಿ ಪರ್ವತದ ಬಂಡೆಗಳ ಸಂದಿಯಲ್ಲಿ ಕಟ್ಟಲ್ಪಟ್ಟಿರುತ್ತದೆ. ದೊಡ್ಡ ಟೊಂಗೆಗಳು, ಎಲುಬುಗಳು ಮತ್ತು ಚರ್ಮದಿಂದ ದೊಡ್ಡ ಗೂಡು ಕಟ್ಟಿಕೊಳ್ಳುವ ಈ ಹಕ್ಕಿ ಸಂತಾನೋತ್ಪತ್ತಿಗೆ ಮುನ್ನ ಆಡುವ ನಾಟ್ಯ ವಿಶೇಷವಾದದ್ದು. ಇಪ್ಪತ್ತೈದು ಸಾವಿರ ಅಡಿಗಳ ಎತ್ತರದಲ್ಲಿ, ಆಮ್ಲಜನಕ ತುಂಬ ವಿರಳವಾಗುವೆಡೆಗಳಲ್ಲಿ ಕೂಡ ಹಾಯಾಗಿ ಹಾರಬಲ್ಲ ಈ ರಣಹದ್ದು ಪರ್ವತಾರೋಹಿಗಳಿಗೆ ಸಂಗಾತಿಯೂ ಆಗಬಲ್ಲದು!

ಹಿಮಾಲಯದ ಶ್ರೇಣಿಯದೇ ಆದ ಮತ್ತೊಂದು ರಣಹದ್ದೆಂದರೆ 'ಗ್ರಿಫನ್'. ಸುಮಾರು ನಲವತ್ತೊಂದು ಇಂಚು ಎತ್ತರದ ಈ ಪಕ್ಷಿಗೆ ಉದ್ದನೆಯ, ಬಾಗಿದ ಬೋಳು ಕತ್ತು, ಅದರ ಮೇಲೊಂದು ಬಿಳಿಯ ಸ್ಕಾರ್ಫು ಮತ್ತು ತೆಳ್ಳನೆಯ ಕಾಲುಗಳು ಇವೆ. ಇವೇ ಅದರ ಆಕರ್ಷಣೆಗಳೂ ಹೌದು. ಇದರ ಉಪಜಾತಿಯ ಸಣ್ಣ ಗ್ರಿಫನ್ ರಣಹದ್ದು ಮಾತ್ರ ಬಯಲು ಸೀಮೆಯಲ್ಲಿ ಬದುಕುತ್ತದೆ. ಉಳಿದಂತೆ ಗ್ರಿಫನ್‌ಗಳಿಗೆ ಹಿಮಾಲಯದ ದೊಡ್ಡ ಪರ್ವತಗಳೇ ಮನೆಗಳು. ಅವುಗಳ ಕೊರಕಲಿನಲ್ಲಿ ಜಾರಿ ಬಿದ್ದು ಸಾಯುವ ಹೇಸರಗತ್ತೆಗಳೇ ಬೇಟೆಗಳು. ಗುಂಪುಗುಂಪಾಗಿ ಕುಳಿತು ಊಟ ಮಾಡುವ ಈ ರಣಹದ್ದುಗಳು ಆಕಾಶದಲ್ಲಿ ಹಾರುವಾಗ ತೇಲುವಂತೆ ಕಾಣುತ್ತವೆ. ಜನವರಿಯಿಂದ ಏಪ್ರಿಲ್ ತನಕ

ಗೂಡು ಕಟ್ಟುವ ಗ್ರಿಫನ್‌ಗಳು ಒಂದು ಮೊಟ್ಟೆ ಯನ್ನು ಐವತ್ನಾಲ್ಕು ದಿನಗಳ ಕಾಲ ಕಾವು ಕೊಟ್ಟು ಮರಿ ಮಾಡುತ್ತವೆ. ಅದರ ಮರಿಗಳು ಹಾರಾಡಲು ನೂರಾ ಹದಿನೈದು ದಿನಗಳಾದರೂ ಬೇಕು.

### ಅಮೆರಿಕದ ಕಾಂಡರ್

ಅಮೆರಿಕ ಖಂಡದಲ್ಲಿ ಆರು ಜಾತಿಯ ರಣಹದ್ದುಗಳಿವೆ. ಆ್ಯಂಡಿಯನ್ ಕಾಂಡರ್, ಕ್ಯಾಲಿಫೋರ್ನಿಯ ಕಾಂಡರ್, ರಾಜರಣಹದ್ದು, ಕಪ್ಪುರಣಹದ್ದು, ಟರ್ಕಿ ರಣಹದ್ದು ಮತ್ತು ಹಳದಿ ತಲೆಯ ರಣಹದ್ದುಗಳು ಇಲ್ಲಿದ್ದು ಇವುಗಳನ್ನು ಕೊಕ್ಕರೆ ಹಾಗೂ ನೀರು ಕಾಗೆಗಳ ಜಾತಿಗೆ ಸೇರಿಸಲಾಗುತ್ತದೆ. ಈ ರಣಹದ್ದುಗಳು ಕೂಗಲು ಬಾರದೆ ಕೇವಲ ಬುಸುಗುಡುವ ಸದ್ದು ಮಾಡಬಲ್ಲ ಜೀವಿಗಳು. ಆದರೆ ಇತರೆಲ್ಲಾ ಪಕ್ಷಿಗಳಿಗಿಂತ ಎತ್ತರದಲ್ಲಿ ಹಾರುತ್ತವೆ. ಒಂದೇ ದಿನದಲ್ಲಿ ನೂರಾರು ಮೈಲಿ ದೂರಕ್ಕೆ ಹಾರಿ ಆಹಾರ ಹುಡುಕುತ್ತವೆ. ಇವುಗಳ ಪೈಕಿ ಆ್ಯಂಡಿಯನ್ ಕಾಂಡರ್ ರಣಹದ್ದಿಗೆ 'ಜಗತ್ತಿನ ಅತಿ ದೊಡ್ಡ ಹಾರುವ ಪಕ್ಷಿ' ಎಂಬ ಕೀರ್ತಿಯಿದೆ. ಹನ್ನೆರಡು ಅಡಿ ಅಗಲದ ರೆಕ್ಕೆಯಿರುವ ಈ ಹಕ್ಕಿಯ ತೂಕ ಹನ್ನೆರಡೂವರೆ ಕಿಲೋಗ್ರಾಂನಷ್ಟು! ಇದರ ತಲೆಯ ಮೇಲಿರುವ ಕಪ್ಪನೆಯ ಮಾಂಸಲಭಾಗ ದೂರಕ್ಕೆ ಟೊಪ್ಪಿಗೆಯಂತೆ ಕಾಣುತ್ತದೆ. ನೋಡಲು ನಿಜಕ್ಕೂ ಇದು ಸುಂದರವಾದ ಪಕ್ಷಿ. ಒಂದೇ ಸಲಕ್ಕೆ ಆರು ಕೇಜಿ ಮಾಂಸ ತಿನ್ನುವ ಈ ರಣಹದ್ದು ಒಮ್ಮೆ ತಿಂದರೆ ಇಡೀ ವಾರ ಉಪವಾಸವಿರಬಲ್ಲದು.

ಮೊಂಡನೆಯ ಕೊಕ್ಕುಗಳ ಈ ನಿಷ್ಪಾಪಿ ಹಕ್ಕಿಗಳು ಅನಿವಾರ್ಯವಾಗಿ ಕೊಳೆತ ಮಾಂಸ ತಿನ್ನುತ್ತವೆ. ಇದರಿಂದ ಮನುಷ್ಯನ ನೈರ್ಮಲೀಕರಣಕ್ಕೆ ನೆರವಾದಂತಾಯಿತೇ ಆದರೂ ಈ ರಣಹದ್ದುಗಳು ಸ್ವತಃ ಕೊಳಕು ಜೀವಿಗಳು. ಅದರ ಮೈ ನಾರುತ್ತದೆ. ದನದ ಮಾಂಸ ತಿಂದು ಆ ಮೂಲಕ ಕೆಲ ಬಾರಿ ದನಗಳಿಗೆ ರೋಗ ಬರುವ ಕೀಟಾಣುಗಳನ್ನು ಹರಡುತ್ತವಾದ್ದರಿಂದ ದನಗಾಹಿಗಳು ಇವುಗಳನ್ನು ಹಿಡಿದು ಕೊಲ್ಲುತ್ತಾರೆ. ಸದಾ ಸತ್ತ ಪ್ರಾಣಿಗಳ ಒಡಲೊಳಕ್ಕೆ ಕೊಕ್ಕು ತೂರಿಸಿ ಮಾಂಸ ಕಿತ್ತುವುದರಿಂದಾಗಿ ರಣಹದ್ದುಗಳ ಕುತ್ತಿಗೆ ಪುಕ್ಕಳಿಲ್ಲದೆ ಬೋಳಾಗಿ ಬೆಳೆಯುತ್ತದೆ. ಇದು ಜೀವ ವಿಕಾಸದ ನಿಯಮ. ಈ ಕಾರಣಕ್ಕಾಗಿಯೇ ಕೆಟ್ಟದಾಗಿ ಕಾಣುವ ರಣಹದ್ದು ಮನುಷ್ಯನ ಭೀದರಿಕೆಗೆ ಕಾರಣವಾಗುತ್ತದೆ. ಏನೇ ಆದರೂ ಈ ನಿಷ್ಪಾಪಿ ಪಕ್ಷಿ ಸಂಕುಲ ನಾಶವಾಗಬಾರದಲ್ಲವೇ? ●




ಇವತ್ತಿಗೆ ಈ ಯುದ್ಧ ಇಷ್ಟಕ್ಕೇ ಮುಗಿಸಿ-ಚರ್ಚೆಗೆ ಇಳಿಯೋಣವೆ ಚಿನ್ನಾ!!

# ಆತ ಇರುವೆ ತಿನ್ನುತ್ತಾನೆ!

## ಇರುವೆ ತಿನ್ನುವುದು ನೆನಪಾಯಿತಂತೆ!

*ಟೇಕಲ್ ಗೋಪಾಲಕೃಷ್ಣ*



ಆವನಿಗೆ ಈಗ ತೊಂಬತ್ತಾರು ವರ್ಷ. ಗಟ್ಟಿ ಮುಟ್ಟಾಗಿದ್ದಾನೆ. ಹಲ್ಲು ಉದುರಿಲ್ಲ. ಕಣ್ಣು ಮಂಜಾಗಿಲ್ಲ. ಕಿವಿ ಚುರುಕು. ತನ್ನ ಹೊಲದಲ್ಲಿ ಇಂದಿಗೂ ಸೋಯಾಬೀನ್ಸ್ ಬೆಳೆಯುತ್ತಾನೆ. 'ಏನಯ್ಯಾ ನಿನ್ನ ದೀರ್ಘಾಯುಷ್ಯ ಮತ್ತು ಆರೋಗ್ಯಗಳ ಗುಟ್ಟು?' ಅಂದರೆ ಅವನ ಉತ್ತರ ವಿಚಿತ್ರವಾಗಿರುತ್ತದೆ.

'ನಾನು ಇರುವೆ ತಿನ್ನುತ್ತೇನೆ!' ಅಂತಾನೆ.

ಚೈನಾ ದೇಶದ ಯಾನ್ ಜೋಂಗ್ ಶಾನ್ ತನ್ನ ಅರವತ್ತನೇ ವಯಸ್ಸಿನಲ್ಲಿ ಇದ್ದಕ್ಕಿದ್ದಂತೆ ಇರುವೆ ತಿನ್ನತೊಡಗಿದ. ಹಾಗೆ ನೋಡಿದರೆ ಚೈನಾದ ಪ್ರಾಚೀನ ವೈದ್ಯ ಪದ್ಧತಿಯಲ್ಲಿ ಇರುವೆಗಳನ್ನು ಪೌಷ್ಟಿಕತೆಯ ಕೊರತೆಯಿರುವವರಿಗೆ ಕೊಡುವ ಸಂಪ್ರದಾಯವಿತ್ತು. ಆದರೆ ಯಾನ್ ಮಾತ್ರ ಇರುವೆ ತಿನ್ನುವುದನ್ನು ವೈದ್ಯರಿಂದ ಕಲಿಯಲಿಲ್ಲ. ಆದೊಂದು ದಿನ ಹೊಲದಲ್ಲಿ ಕೆಲಸ ಮಾಡುತ್ತಿದ್ದ ಯಾನ್, ಸಾಲು ಸಾಲಾಗಿ ತಮಗಿಂತ ದೊಡ್ಡ ಕಾಳುಗಳನ್ನು ಹಿಡಿದೊಯ್ಯುತ್ತಿದ್ದ ಇರುವೆಗಳನ್ನು ನೋಡಿ ಅಚ್ಚರಿಗೊಂಡ. ಅವುಗಳ ವಿಚಿತ್ರ ಶಕ್ತಿಯ ರಹಸ್ಯವೇನಿರಬೇಕೆಂದು ಚಿಂತಿಸಿದ. ಇದ್ದಕ್ಕಿದ್ದಂತೆ ಕಾಡಿನಲ್ಲಿ ಕರಡಿಗಳು ಇಂಥ ಇರುವೆಗಳನ್ನು ಹಿಡಿದು ಖುಷಿಯಿಂದ ಮುಕ್ಕುವುದು ನೆನಪಾಯಿತು. ಅದೇನು ಭಾವಾವೇಶ ಏನೋ ..... ಇರುವೆಗಳನ್ನು ಹಿಡಿದು ತಿನ್ನತೊಡಗಿದ. ಅದೇ ಅಭ್ಯಾಸವಾಯಿತು.

ಮೊದಮೊದಲು ಇರುವೆಗಳು ಲಿಂಬೆ ಹುಳಿಯ ರುಚಿ ನೀಡುತ್ತಿದ್ದವು. ಅನಂತರ ಅವುಗಳನ್ನು ಕುದಿಯುವ ನೀರಿಗೆ ಹಾಕಿ ಸಾಯಿಸಿ ತಿನ್ನತೊಡಗಿದ. ಅದು ಹೆಚ್ಚು ರುಚಿಕರವೆನ್ನಿಸಿತು. ತನ್ನ ಊಟದ ಡಬ್ಬಿಯಿಂದ ಮಾಂಸದ ತುಣುಕೊಂದನ್ನು ನೆಲದ ಮೇಲೆ ಚೆಲ್ಲಿ ಇರುವೆಗಳನ್ನು ಆಕರ್ಷಿಸಿ ಹಿಡಿಯುವುದು ಯಾನ್‌ನ ತಂತ್ರವಂತೆ. ಈಗೀಗ ಆತ ಇರುವೆ, ಜೇನುತುಪ್ಪ ಮತ್ತು ಕೋಳಿಮೊಟ್ಟೆ ಬೆರೆಸಿ ತಿನ್ನುತ್ತಾನಂತೆ. ದೀರ್ಘಾಯುಷ್ಯಕ್ಕೆ ಇರುವೆಗಿಂತ ಸೋವಿ ಔಷಧಿ ಇನ್ನೆಲ್ಲಿ ಸಿಕ್ಕೀತು?

ಕಟಿಬಂಧವೆಂಬುದು ಇಂದು ನಿನ್ನೆಯದಲ್ಲ!

# ಬಳುಕುವ ಬಳ್ಳಿಗೆ ಸೊಂಟಪಟ್ಟಿ!

ರವಿಕುಮಾರ



**ತುಂ**ಡು ಲಂಗಗಳ ನೆರಿಗೆಗಳನ್ನೊದೆಯುತ್ತ ನಡೆದಿದೆ ಲಲನೆಯರ ಗುಂಪು. ಸ್ಕರ್ಟ್, ಮಿಡಿ, ಟೂಪೀಸ್, ಫ್ರಾಕ್ ...... ಹೀಗೇ ನಮ ನಮೂನೆ ಡ್ರೆಸ್ಸುಗಳು. ಆದರೆ ಅವರೆಲ್ಲರಿಗಿಂತ ಹೆಚ್ಚಾಗಿ ನೋಡುಗರ ಕಣ್ಣು ಸೆಳೆಯುವ ಹುಡುಗಿ ತನ್ನ ತೆಳ್ಳನೆಯ ಸೊಂಟಕ್ಕೆ ಎರಡು ಅಂಗೈಯ್ಯ

ಗಲದ ಒಂದು ಪಟ್ಟಿ ಸುತ್ತಿಕೊಂಡಿದ್ದಾಳೆ! ಅದು ಕಟಿಬಂಧ!

ಅದಕ್ಕೆ ಇವತ್ತಿನ ಹೆಸರು ಏನೇ ಇರಲಿ, ಕಟಿ ಬಂಧ ಇವತ್ತಿನದಲ್ಲ. ಶತಶತಮಾನಗಳಿಂದ ಗಂಡು-ಹೆಣ್ಣುಗಳ ಭೇದವಿಲ್ಲದೆ ಬಳಸುತ್ತ ಬಂದ ಈ ಸೊಂಟಪಟ್ಟಿ ನಮ್ಮ ಸಂಸ್ಕೃತಿಯ ಅವಿಭಾಜ್ಯ ಅಂಗ. ಹಿಂದೆ ಅಜ್ಜಿಯರ ಸೊಂಟದಲ್ಲಿ ಬೆಳ್ಳಿಯ 'ಡಾಬು'ಗಳನ್ನು ನೋಡುತ್ತಿದ್ದೆವಲ್ಲ, ಈ ಬಟ್ಟೆಯ ಡಾಬುಗಳಲ್ಲಿ ಹುಡುಗಿಯರು ಬಳುಕುತ್ತಿದ್ದಾರೆ!

ಸಿಂಧೂ ಕಣಿವೆಯಲ್ಲಿ ನಡೆಸಿದ ಉತ್ಖನನ ಕಾಲದಲ್ಲಿ ದೊರೆತ ಒಂದು ಕಟಿಬಂಧದಲ್ಲಿ ನೀಳವೂ, ಉರುಟೂ ಆದ ಕಡುಕೆಂಪು ಬಣ್ಣದ ಆರು ಸಾಲು ಹರಳುಗಳಿದ್ದವು. ಇವುಗಳು ಒಂದೊಂದು ಐದು ಅಂಗುಲ ಉದ್ದವಾಗಿದ್ದವು. ಇವುಗಳ ನಡುನಡುವೆ ಕಂಚಿನ ಹರಳುಗಳಿದ್ದವು. ಉದ್ದನೆಯ ಹರಳನ್ನು ಪೋಣಿಸುವುದಕ್ಕೆ ಪ್ರತಿಯೊಂದರಲ್ಲೂ ಆರು ತೂತುಗಳಿದ್ದವು. ಸುಮಾರು ಒಂದು ಮೀಟರ್ ಉದ್ದನೆಯ ಈ ಕಟಿಬಂಧದ ಎರಡೂ ಕೊನೆಗಳು ಕಂಚಿನ ಅರ್ಧ ವೃತ್ತಾಕಾರದ ಫಲಕಗಳನ್ನು ಅಳವಡಿಸಿದ್ದು, ಅವುಗಳಿಗೆ ಮೂಲತಃ ಹೊಳಪಿನ ಲೇಪ ನೀಡಲಾಗಿರುವುದು ಗೋಚರಿಸುತ್ತದೆ. ಈ ಫಲಕಗಳಿಗೆ ದಾರ ಕಟ್ಟುವುದಕ್ಕೆ ತೂತುಗಳೂ ಇವೆ.

ಸಂಸ್ಕೃತ ಸಾಹಿತ್ಯದಲ್ಲಿ ಸೊಂಟದಲ್ಲಿ ಧರಿಸುವ ಒಡವೆಗಳ ಬಗ್ಗೆ ವರ್ಣನೆಗಳಿವೆ. ಸೀತೆ ತನ್ನ ಹೊಳೆಯುವ ತಲೆಗೂದಲಲ್ಲಿ ರತ್ನ ಖಚಿತ ಪತಂಗ ಆಕಾರದ ಒಡವೆಗಳನ್ನೂ ಇತರ ಆಭರಣಗಳನ್ನೂ ಧರಿಸಿದ್ದಳು. ಆಕೆಯ ತೋಳು ಹಾಗೂ ಮಣಿಕಟ್ಟುಗಳಲ್ಲಿದ್ದ ಮುತ್ತು, ರತ್ನ ಖಚಿತವಾದ ತೋಳ ಬಂದಿಗಳೇ ಮೊದಲಾದ ಒಡವೆಗಳಾಗಿದ್ದವು. ಆಕೆಯ ತೆಳುವಾದ ಸೊಂಟದಲ್ಲಿ ಕಟಿಬಂಧವಿತ್ತು ಎಂದು ರಾಮಾಯಣದಲ್ಲಿ ವರ್ಣಿಸಲಾಗಿದೆ. ಪುರಾಣಕಾಲದಲ್ಲಿ ಇನ್ನಿತರ ಒಡವೆಗಳಂತೆ ಕಟಿಬಂಧಗಳು ಕೂಡ ಭಾರೀ ತೂಕದವಾಗಿದ್ದು ಎದ್ದು ಕಾಣಿಸುವಂತಿದ್ದವು. ವಿವರವಾದ ಕುಸುರಿ ಕಲೆಗಾರಿಕೆಯೂ ಅವುಗಳಲ್ಲಿರುತ್ತಿತ್ತು.

ಕಾಳಿದಾಸನೂ ತನ್ನ ಕಾವ್ಯಗಳಲ್ಲಿ ಸೊಂಟದ ಆಭರಣಗಳ ಬಗ್ಗೆ ವರ್ಣನೆ ಮಾಡಿದ್ದಾನೆ. ಸಾಮಾನ್ಯವಾಗಿ ಕಾಳಿದಾಸ ಚಿತ್ರಿಸಿದ ಕಟಿಬಂಧಗಳು ಬಂಗಾರದವುಗಳಾಗಿದ್ದು ರತ್ನ ಖಚಿತವಾದವುಗಳು. ಅವುಗಳನ್ನು ಈ ಕವಿ ಮೇಖಲಾ, ಕಿಂಕಿಣಿ, ಸಪ್ತಕಿ, ಮಣಿಮೇಖಲಾ, ಸರಸನ್ ಮೇಖಲಾ, ಹೇಮಮೇಖಲಾ ಮೊದಲಾದ ಹೆಸರುಗಳಿಂದ ಕರೆದಿದ್ದಾನೆ. ಇವುಗಳಲ್ಲಿ ಹೆಚ್ಚಿನವುಗಳು ಧರಿಸಿದಾಗ ಶಬ್ದ ಹೊರಡಿಸುತ್ತಿದ್ದವು.

ಅಸ್ಸಾಂ ದೊರೆಯ ರಾಯಭಾರಿ ಹಂಸವೇಗನಿಗೆ ಹರ್ಷವರ್ಧನ ಕಳಿಸಿಕೊಟ್ಟ ಪಾರಿತೋಷಕಗಳಲ್ಲಿ ಹೊಳೆಯುವ ಮುತ್ತುಗಳಿದ್ದ ಪರಿವೇಶ ಎಂಬ ಹೆಸರಿನ ಸೊಂಟ ಪಟ್ಟಿಯೂ ಸೇರಿತ್ತು. ಶೃಂಖಲಾ ಎಂಬ ಹಲವು ವಿಧದ ಸರಗಳೂ ಪ್ರಚಲಿತವಿದ್ದವು. ಬರೀ ಬಂಗಾರದ ಪಟ್ಟಿ ಅಥವಾ ಒಡ್ಯಾಣಕ್ಕೆ ಹೇಮಸೂತ್ರವೆಂಬ ಅಥವಾ ತಪನೀಯ ಮೇಖಲಾ ಎಂಬ ಹೆಸರಿತ್ತು. ತಪನೀಯ ಮೇಖಲಾ ಎಂಬುದನ್ನು ಕಾಳಿದಾಸನೂ ಉಲ್ಲೇಖಿಸಿದ್ದಾನೆ.

ಮಣಿಮೇಖಲೆಯಲ್ಲಿನ ಬಂಗಾರದ ಹರಳುಗಳು ಮಳೆಗಾಲದಲ್ಲಿ ಹಕ್ಕಿಗಳು ಉಲಿದಂತೆ ಉಲಿಯುತ್ತಿದ್ದವು ಎಂದು ಮಹಾಕಾವ್ಯಗಳು ವರ್ಣಿಸಿವೆ. ಸರಸಾಣ ಅಥವಾ ಕಂಚಿ ಎಂಬ ಹೆಸರಿನ ಕಟಿಬಂಧಗಳೂ ಇದ್ದು ಅವುಗಳಲ್ಲಿ ರೇಶಿಮೆಯ ದಾರಗಳನ್ನು ಅಲಂಕಾರಕ್ಕಾಗಿ ಹೊಲೆಯಲಾಗಿತ್ತು. ಅಜಂತಾ ಹಾಗೂ ಎಲ್ಲೋರ ಗುಹೆಗಳ ಸ್ತ್ರೀಯರ ಭಿತ್ತಿ ಚಿತ್ರಗಳಲ್ಲಿ ಹಾಗೂ ಶಿಲ್ಪಗಳಲ್ಲಿ ಈ ಅಲಂಕಾರಗಳನ್ನು ಕಾಣಬಹುದು.

ಮಥುರಾ ವಸ್ತುಸಂಗ್ರಹಾಲಯದಲ್ಲಿ ದೇಶದ ಹಲವಾರು ಪ್ರದೇಶಗಳ ಪುರಾತನ ಕಟಿಬಂಧಗಳ ಅಪಾರ ಸಂಗ್ರಹವಿದೆ. ಅಲ್ಲಿ ಅವುಗಳನ್ನು ಮೂರು ಮಾದರಿಗಳಲ್ಲಿ ವಿಂಗಡಿಸಲಾಗಿದೆ. ಒಂದನೆಯದು, ಅಲಂಕಾರದ ಸಣ್ಣ ಫಲಕಗಳನ್ನು ಪರಸ್ಪರ ಜೋಡಿಸಿದವು. ಎರಡನೆಯದು,

ಹಲವಾರು ಸರಗಳನ್ನು ಸೇರಿಸಿ ಮಧ್ಯಭಾಗದಲ್ಲಿ ಪ್ರಧಾನ ಅಲಂಕಾರದ ಫಲಕವೊಂದಕ್ಕೆ ಜೋಡಿಸಲಾದವುಗಳು. ಮೂರನೆಯದು, ಸರಳವೂ ಅಗಲವೂ ಆದ ಅಲಂಕಾರದ ಕಟಿಬಂಧಗಳು. ಮಥುರಾ ಸಂಗ್ರಹಾಲಯದಲ್ಲಿರುವ ಹಲವಾರು ಕಟಿಬಂಧಗಳು ಮಧ್ಯಭಾಗದಲ್ಲಿ ಪೆಂಡೆಂಟ್‌ಗಳನ್ನು ಹೊಂದಿವೆ. ಬಿಹಾರದ ದರ್ಭಾಂಗಾ ಜಿಲ್ಲೆಯಲ್ಲಿ ದೊರೆತ 'ಕರ್ಧನಿ' ಇಂಥಹ ಪದಕ ಹೊಂದಿದೆ. ಒರಿಸ್ಸಾದ ಮಯೂರ್‌ಭಂಜ್‌ನ 'ಅಂತ ಬೀಚ' ಮಹಾರಾಷ್ಟ್ರದ 'ಕಮರ್‌ಪಟ್ಟ' ರಾಜಸ್ತಾನದ 'ಕಿಂಕಿಣಿ' ಹಾಗೂ ಗುಜರಾತ್‌ನ 'ಕಂಡೋರ್'ಗಳು ಮಧ್ಯಭಾಗದ ಪ್ರಧಾನ ಫಲಕಕ್ಕೆ ಉದ್ದನೆಯ ಹರಳುಗಳನ್ನು ಜೋಡಿಸಿ ರಚಿಸಿದವುಗಳಾಗಿವೆ. ಆದರೆ ಉತ್ತರ ಪ್ರದೇಶದ 'ಕಮಲಾಕ್ಷ', ತಮಿಳುನಾಡಿನ 'ಒಡ್ಯಾಣಂ' ಒರಿಸ್ಸಾದ 'ಚಂದ್ರಹಾರ'ಗಳು ಮಧ್ಯದಲ್ಲಿ ಪದಕ ಅಥವಾ ಪ್ರಧಾನ ಅಲಂಕಾರ ಭಾಗ ಇಲ್ಲದೇ ಇರುವ ಕಟಿಬಂಧಗಳಿಗೆ ಮಾದರಿಗಳಾಗಿವೆ. ಪಶ್ಚಿಮ ಬಂಗಾಳ, ಬಿಹಾರ, ಒರಿಸ್ಸಾ, ಉತ್ತರಪ್ರದೇಶ, ಮಹಾರಾಷ್ಟ್ರ, ಮಧ್ಯಪ್ರದೇಶ ಹಾಗೂ ಗುಜರಾತ್‌ಗಳಲ್ಲಿ ಕಟಿಬಂಧಗಳಿಗೆ ಬೆಳ್ಳಿಯನ್ನೂ ಬಳಸುತ್ತಿದ್ದರು. ಆದರೆ ಪಂಜಾಬ್, ರಾಜಸ್ತಾನ, ತಮಿಳ್ನಾಡು, ಕರ್ನಾಟಕ ಹಾಗೂ ಕೇರಳಗಳಲ್ಲಿ ಬಂಗಾರದ ಕಟಿಬಂಧಗಳೇ ಜನಪ್ರಿಯವಾಗಿವೆ.

ಉತ್ತರ ಭಾರತದಲ್ಲಿ 'ಕಮರ್‌ಪಟ್ಟಾ' ಅಥವಾ 'ಸಾದಾಪಟ್ಟ' 'ಕಮಾರ್‌ಸಾಲ' ಅಥವಾ 'ಕುರ್ಸಾಮ್-ಕಿ-ಪಟ್ಟಿ' ಹಾಗೂ 'ಜರ್ ಕಿ ಕಮರ್'ಗಳ ಶೈಲಿ. ವಿನ್ಯಾಸಗಳಲ್ಲಿ ವ್ಯತ್ಯಾಸ ಇರುವುದು ಕಂಡು ಬಂದಿದೆ. ಕಮರ್‌ಪಟ್ಟಾ ಎಂಬುದು ಕೇವಲ ಸರಳವಾದ, ಒಂದೂವರೆ ಅಂಗುಲದ ಅಗಲದ ಲೋಹದ ಪಟ್ಟಿ. ತುದಿಗಳಲ್ಲಿ ಚಿತ್ತಾರಗಳಿವೆ. ಕಮರ್‌ಸಾಲ್ ಎಂಬುದು ಎರಡಂಗುಲ ಚದುರದ ಸಣ್ಣಫಲಕಗಳನ್ನು ಪರಸ್ಪರ ಕೊಂಡಿಗಳಿಂದ ಜೋಡಿಸಿ ತಯಾರಿಸಿದ್ದು ಈ ಫಲಕಗಳಲ್ಲಿಯೂ ಚಿತ್ತಾರಗಳಿವೆ. ಜರ್‌ಕಮರ್ ಎಂಬುದು ಸರಳವಾದ ಚಿನ್ನದ ಸೊಂಟಪಟ್ಟಿ.



ನೀನು ಇವಳನ್ನು ಲವ್ ಮಾಡು ಮುಂದೆ ಬಂದದ್ದನ್ನು ನಾನು ನೋಡಿಕೊಳ್ತೀನಿ ಅಂತ ಹೇಳಿದ್ಯಲ್ಲ! ನೀನು

ಸಾಮಾನ್ಯವಾಗಿ ಉತ್ತರಭಾರತದ ಮುಸ್ಲಿಂ ಮಹಿಳೆಯರು ಪರಂಪರಾಗತವಾಗಿ 'ಕಮರ್ ಬಂದ್' ಅಥವಾ 'ಲಿಜಾಂ'ಗಳನ್ನು ಧರಿಸುತ್ತಿದ್ದರು. ಒರಿಸ್ಸಾ ಹಾಗೂ ಆಂಧ್ರಪ್ರದೇಶಗಳಲ್ಲಿ 'ಪಟ್ಟಿಗ್ಗಾ' ಹಾಗೂ 'ಫಾಲಕರ' ಎಂಬ ಹೆಸರಿನ ಇಂತಹುದೇ ಕಟಿಬಂಧಗಳನ್ನು ಧರಿಸುತ್ತಿದ್ದರು. ಯಾವ ಕಾರಣದಿಂದಲೋ ಈ ಸಾಂಪ್ರದಾಯಿಕ ಕಟಿಬಂಧಗಳ ಜನಪ್ರಿಯತೆ ಕಡಿಮೆಯಾಯಿತು. ಇಂದು ಅವು ಧಾರ್ಮಿಕ ಸಮಾರಂಭಗಳಲ್ಲಿ ಹಾಗೂ ಉತ್ಸವ ಕಾಲದಲ್ಲಿ ಮಾತ್ರ ಕಾಣಬಹುದು. ಆದರೂ ಕಟಿಬಂಧಗಳ ಬಳಕೆ ಕೆಲವು ಸಮುದಾಯಗಳಿಗೆ ಹಾಗೂ ಜಾತಿಪಂಗಡಗಳಿಗೆ ಸೀಮಿತವಾಗಿದೆ.

ಇಂದು ನಗರಗಳಲ್ಲಿ ಯುವತಿಯರು ಮತ್ತೆ ಸೊಂಟಗಳನ್ನು ಸಿಂಗರಿಸಿಕೊಳ್ಳತೊಡಗಿದ್ದಾರೆ!

(ಆಧಾರ : ಫೀಚರ್ ವೀಕ್ಲಿ ಮ್ಯಾಗಜಿನ್)

ಆಕೆಯ ಗರ್ಭದಲ್ಲಿ ಶಿಶುವಿರಲಿಲ್ಲ!

# ರಾಷ್ಟ್ರೀಯ ದಾಖಲೆ ಸ್ಥಾಪಿಸಿದ ಕರ್ನಾಟಕದ ವೈದ್ಯ

ಡಾ| ಕರವೀರಪ್ರಭು ಕ್ಯಾಲಕೊಂಡ



ಬೀರೂರು ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲೂಕಿನ ಒಂದು ಹೋಬಳಿ ಕೇಂದ್ರ. ಜನತೆಯ ಆರೋಗ್ಯದ ಅವಶ್ಯಕತೆಗಳನ್ನು ಪೂರೈಸಲು ಒಂದು ಸರಕಾರಿ ಸಾರ್ವಜನಿಕ ಆಸ್ಪತ್ರೆ ಇದೆ. ಡಾ| ಟೇಕಪ್ಪನಂತಹ ಪ್ರತಿಭಾವಂತ ವೈದ್ಯರಿಂದಾಗಿ ಚೈತನ್ಯಶಾಲಿಯಾಗಿದೆ. ಹಳ್ಳಿ ಪರಿಸರದ ಹಿನ್ನೆಲೆಯಲ್ಲಿ, ಸಿಗುವ ಸೀಮಿತ ಸೌಲಭ್ಯಗಳ ಸದುಪಯೋಗ ಮಾಡಿಕೊಂಡು, ಸಹೋದ್ಯೋಗಿಗಳ ಸಹಕಾರ ಪಡೆದು, ನಿರ್ಗತಿಕಳೊಬ್ಬಳು ನಿರಾತಂಕವಾಗಿ ಉಸಿರಾಡುವಂತೆ ಮಾಡಲು, ಡಾ| ಟೇಕಪ್ಪ ಶಸ್ತ್ರಚಿಕಿತ್ಸೆ ಮಾಡಿದರು. ಸೇವಾ ಮನೋಭಾವದಿಂದ ಸಾಹಸಕ್ಕೆ ಕೈಯಿಟ್ಟದ್ದು, ರಾಷ್ಟ್ರೀಯ ದಾಖಲೆಯ ಹೆಗ್ಗಳಿಕೆಗೆ ಕಾರಣವಾಯಿತು. ಕುತ್ತುಸಿರು ಬಿಡುತ್ತಿದ್ದ ಬಡರೋಗಿಯ ಹೊಟ್ಟೆಯಿಂದ 40 ಕಿಲೋ ತೂಕದ ಗಡ್ಡೆಯೊಂದನ್ನು ಹೊರತೆಗೆದು ಸುತ್ತಲಿನ ಜನರನ್ನು ಬೆರಗುಗೊಳಿಸಿದರು.

34 ವರ್ಷದ ಗೌರಮ್ಮ ಹಳ್ಳಿ ಹೆಂಗಸು. ಗತಿಯಿಲ್ಲದ ದಲಿತೆ. ಹೊಟ್ಟೆ ಪಾಡಿಗಾಗಿ ಕೂಲಿನಾಲಿ ಮಾಡುತ್ತಿದ್ದಳು. ಮೊದಮೊದಲು ಕಿಬ್ಬೊಟ್ಟೆಯಲ್ಲಿ ನೋವು ಕಾಣಿಸಿಕೊಂಡಾಗ ಕಾಳಜಿ ಮಾಡಲಿಲ್ಲ. ಮುಂದೆ ಹೊಟ್ಟೆ ಬೆಳೆಯತೊಡಗಿತು. ವಾರಿಗೆಯ ಹೆಂಗಸರು ಕೇಳಿದಾಗ, ಗರ್ಭಿಣಿಯಿರುವ ಕನಸಿಗೆ ಕಾವು ಕೊಡಹತ್ತಿದಳು. ಎಂಟು ವರ್ಷದ ಹೆಣ್ಣು ಮಗುವಿನ ನಂತರ ಗರ್ಭ ನಿಂತಿದೆಯೆಂದು ಖುಷಿ ಪಟ್ಟಳು. ಪಾಪ! ಹೊಟ್ಟೆಯಲ್ಲೊಂದು ಗಡ್ಡೆ ಬೆಳೆಯುತ್ತಿರಬಹುದೆಂಬ ಸಂಶಯ ಅವಳ ಕನಸಿನಲ್ಲೂ ಸುಳಿಯಲಿಲ್ಲ.

ತುಂಬು ಗರ್ಭಿಣಿಯಂತೆ ಹೊಟ್ಟೆ ದೊಡ್ಡದಾದಾಗ ಹೆರಿಗೆಯ ದಿನಕ್ಕೆ ಹಾತೊರೆದಳು. ವರ್ಷ ತುಂಬಿದರೂ ಹೆರಿಗೆಯಾಗದಿದ್ದಾಗ ವೈದ್ಯರ ಬಳಿಗೆ ಹೋಗಬೇಕಾಯಿತು. ಕಂಡ ಕಂಡ ದವಾಖಾನೆಯ ಮೆಟ್ಟಲು ಹತ್ತಿದಳು. ವೈದ್ಯರು ಕೊಟ್ಟ ಗುಳಿಗೆಗಳನ್ನು ನುಂಗಿದಳು. ಸಮಸ್ಯೆ ಸಮಸ್ಯೆಯಾಗಿಯೇ ಉಳಿಯಿತು. ಆಕೆ ಬರಬರುತ್ತ ನಿತ್ರಾಣದ ನೆಲೆಯಾದಳು. ಹೆಜ್ಜೆ ಕಿತ್ತಿಡುವುದು ಕಷ್ಟವಾಗಹತ್ತಿತು. ನಿರಾಶೆಯ ನಿಸ್ತೇಜ ಮುಖ ಹೊತ್ತು ಬೀರೂರಿನ ಪಿ.ಕೆ. ಎಸ್. ಸಾರ್ವಜನಿಕ ಆಸ್ಪತ್ರೆಗೆ ಬಂದಳು. ತನ್ನ ಅಳಲನ್ನು ತೋಡಿಕೊಂಡಳು. ಬೆನ್ನಿಗಂಟಿದ ಬಡತನವನ್ನು ಶಪಿಸಿದಳು.

ಡಾ। ಟೇಕಪ್ಪ ಅವಳನ್ನು ಪರೀಕ್ಷಿಸುತ್ತಿದ್ದರು. ರಕ್ತಹೀನತೆಯು ತಾಂಡವ ನೃತ್ಯಗೈಯುತ್ತಿತ್ತು. ಸೊರಗಿ ಸೊರಗಿ ಸೋತಿದ್ದಳು. ಎಲುಬು ತೊಗಲಿನ ಹಂದರವಾಗಿದ್ದಳು. ಹೊಟ್ಟೆ ಮಾತ್ರ ಸಾಕಷ್ಟು ಉಬ್ಬಿಕೊಂಡಿತ್ತು. ಪಿಂಡದ ಭಾಗಗಳನ್ನು ಗುರುತಿಸಲು ಮುಟ್ಟಿ ಮುಟ್ಟಿ ನೋಡಿದರು. ಪಿಂಡಾಂಡದ ಹೃದಯದ ಮಿಡಿತ ಕೇಳಲು ಹುಡುಕಾಡಿದರು. ಸಾಧ್ಯವಾಗಲಿಲ್ಲ. ಹೊಟ್ಟೆ ಸುತ್ತಳತೆ 135 ಸೆಂ.ಮೀ. ಇತ್ತು. ಟೇಕಪ್ಪನವರಿಗೆ ಏನಿರಬಹುದೆಂಬ ಪ್ರಶ್ನೆ ಕಾಡಹತ್ತಿತು. ಗುಟ್ಟಿನ ಮೊಟ್ಟೆ ಒಡೆಯಲು ಸ್ಕ್ಯಾನಿಂಗ್ ಮಾಡಿಸಲು ಹೇಳಿದರು. ಹೊಟ್ಟೆಗೆ ಹಿಟ್ಟಿಲ್ಲದಾಗ ಅದಕ್ಕೆಲ್ಲಿಂದ ದುಡ್ಡು ತರುವುದು ಎಂದು ಹೇಳುವಾಗ ಗೌರಮ್ಮನ ಕಣ್ಣೀರು ಕಪಾಳಕ್ಕೆ ಬಂದಿದ್ದವು.

ಸಹೃದಯಿ ಟೇಕಪ್ಪನವರಿಗೆ ಅವಳ ಪರಿಸ್ಥಿತಿಯ ಅರಿವು ಗಮನಕ್ಕೆ ಬಂದಿತು. ತಾವೆ ಸ್ವಂತ ಖರ್ಚಿನಿಂದ ಶಿವಮೊಗ್ಗಕ್ಕೆ ಕರೆದುಕೊಂಡು ಹೋದರು. ಸ್ಕ್ಯಾನಿಂಗ್ ಮಾಡಿಸಿದರು. ಅವಳ ಹೊಟ್ಟೆಯಲ್ಲಿ ಬೆಳೆಯುತ್ತಿರುವುದು ಭ್ರೂಣವಲ್ಲವೆಂದು ಖಚಿತಪಡಿಸಿಕೊಂಡರು. ಜೇನು ಹುಟ್ಟಿನ ಸ್ವರೂಪದ ದೊಡ್ಡ ಗಡ್ಡೆಯಿದ್ದುದರಿಂದಾಗಿ ಅಂಡಾಶಯ ಅರ್ಬುದದ ಸಂಶಯ ಟೇಕಪ್ಪನವರನ್ನು ಕಾಡ ಹತ್ತಿತು. ಹಲವು ಹತ್ತು ಪರೀಕ್ಷೆ ಮಾಡಿಸಿದಾಗ ಸಂಶಯ ನಿವಾರಣೆಯಾಯಿತು. ಸಮಾಧಾನದ ನಿಟ್ಟುಸಿರನ್ನು ಬಿಟ್ಟರು. ಸೂಕ್ತ ಔಷಧೋಪಚಾರ ಮಾಡಿದರು. ರೋಗಿಯ ಸಾಮಾನ್ಯ ಸ್ಥಿತಿಯಲ್ಲಿ ಸುಧಾರಣೆ ಕಂಡುಬಂದಿತು. ಸಹೋದ್ಯೋಗಿ ಡಾ। ಚಂದ್ರಶೇಖರ ಕೂಡ ಚರ್ಚಿಸಿದರು. ಅರಿವಳಿಕೆ ತಜ್ಞ ಡಾ। ಆನಂದರ ಅಭಿಪ್ರಾಯ ಪಡೆದರು. ಸಹಕಾರ ಕೋರಿದರು. ಶಸ್ತ್ರಚಿಕಿತ್ಸೆಯ ದಿನವನ್ನು ನಿಗದಿಪಡಿಸಿದರು.



ಸಿಗದಿ ಪಡಿಸಿದ ದಿನದಂದು ಮುಂಜಾನೆ ಶಸ್ತ್ರ ಚಿಕಿತ್ಸಾ ಕೊಠಡಿಗೆ ಗೌರಮ್ಮನನ್ನು ಕರೆದೊಯ್ದರು. ಅರಿವಳಿಕೆ ತಜ್ಞರ ಸಹಾಯದಿಂದ ಅರಿವಳಿಕೆ ಉಂಟಾಗುವಂತೆ ಮಾಡಿದರು. ಕೂರ ಸಂದೆಲು (Xiphi Sternum)ನಿಂದ ಗುಂಜೆಡೆಯ ಕೂಡೇಣು (Public Symphysis)ವರೆಗಿನ ಉದ್ದನೆಯ ಮಧ್ಯರೇಖೆಯ ಕೊಯ್ತದಿಂದ ಹೊಟ್ಟೆಯನ್ನು ಪದರು ಪದರಾಗಿ ಬಿಚ್ಚಿದರು. ದೀರ್ಘಕಾಲೀನ ಬದುಕಿನಿಂದಾಗಿ ಗಡ್ಡೆಗೆ ದಪ್ಪ ಕವಚದ ಬಳುವಳಿ ಸಿಕ್ಕಿತ್ತು. ಹೊಟ್ಟೆಯ ಮುಂಭಾಗಕ್ಕೆ ಅಲ್ಲಲ್ಲಿ ಅಂಟಿಕೊಂಡಿತ್ತು. ಸುದೈವದ ಸಂಗತಿಯೆಂದರೆ ಅದು ಯಾವ ಅಂಗಾಂಗಗಳಿಗೂ ತೊಡಕಿಕೊಂಡಿರಲಿಲ್ಲ. ಬೆನ್ನಿಗೂ ಚಾಚಿಕೊಂಡಿರಲಿಲ್ಲ. ಚಾಣಾಕ್ಷತನದಿಂದ ಅಂಟಿಕೆಗಳನ್ನು ಬಿಡಿಸಿದರು. ಎಡಗಡೆಯ ಅಂಡಾಶಯದಿಂದ ಬೆಳೆದ ಗಡ್ಡೆಯಾಗಿದ್ದನ್ನು ಖಚಿತಪಡಿಸಿಕೊಂಡರು. ಗರ್ಭಕೋಶ ಮತ್ತು ಬಲ ಅಂಡಾಶಯಗಳು ಸಾಮಾನ್ಯ ಸ್ಥಿತಿಯಲ್ಲಿದ್ದುದರಿಂದಾಗಿ ಅವುಗಳ ತಂಟೆಗೆ ಹೋಗಲಿಲ್ಲ. ಸಂಬಂಧಿಸಿದ ಅಂಗಾಂಶಗಳನ್ನು ಗಟ್ಟಿಯಾಗಿ ಕಟ್ಟಿ, ರಕ್ತ ಒಸರದಂತೆ ಕಾಳಜಿ ವಹಿಸಿ, ಕತ್ತರಿಸಿ ಇಡೀ ಗಡ್ಡೆಯನ್ನು ಹೊರ ತೆಗೆದರು. ಇಬ್ಬರ ಸಹಾಯದಿಂದ ಈ ಕಾರ್ಯ ನೆರವೇರಿಸಲಾಯಿತು. ಅಷ್ಟೊಂದು ಭಾರವಾಗಿತ್ತು. ತೂಕ ಮಾಡಿದಾಗ 46 ಕಿಲೋ ಇತ್ತು! ಬೀರೂರ ಜನರು ಗಡ್ಡೆಯನ್ನು ನೋಡಿ ಬೆಕ್ಕಸಬೆರಗಾದರು. ಕ್ಲಿಷ್ಟ ಶಸ್ತ್ರಚಿಕಿತ್ಸೆ ಮಾಡಿದ ಯುವ ವೈದ್ಯ ಡಾ। ಟೇಕಪ್ಪನವರನ್ನು ಮುಕ್ತ ಕಂಠದಿಂದ ಹೊಗಳಿ, ಅಭಿನಂದನೆ ಸಲ್ಲಿಸಿದರು. ಡಾ। ಟೇಕಪ್ಪನವರಿಗೂ ಅಚ್ಚರಿ ಮುತ್ತಿಗೆ ಹಾಕಿತ್ತು. ಅರಿವಿಲ್ಲದಂತೆ ರಾಷ್ಟ್ರೀಯ ದಾಖಲೆ ಮುರಿದಿದ್ದರು. ಗಿನ್ನಿಸ್ ದಾಖಲೆ 48.6 ಕಿಲೋ!

ವೈದ್ಯಕೀಯ ಸವಲತ್ತುಗಳ ಸ್ವರ್ಗ, ಆಧುನಿಕ ಸಾಧನ ಸಲಕರಣೆಗಳ ಆಗರ, ತಂತ್ರಜ್ಞಾನ, ಸೂಕ್ಷ್ಮಾತಿಸೂಕ್ಷ್ಮ ಶಸ್ತ್ರಚಿಕಿತ್ಸಾ ನಿಪುಣತೆಯ ತಂಡಗಳ ತವರು ಎಂದು ಹೆಸರುವಾಸಿಯಾದ ಮುಂಬೈ ನಗರದಲ್ಲಿಯ ಭಗವತಿ ಹಾಸ್ಪಿಟಲ್‌ನ ತಜ್ಞರ ತಂಡ, ಸಕಲ ಸೌಲಭ್ಯಗಳ ಮಧ್ಯದಲ್ಲಿ 29-3-1990ರಂದು ಕಠ್ಮಂಡುವಿನ ಶ್ರೀಮತಿ ಲಲಿತಾ ಉದಯಸಿಂಹ ಎಂಬ ಮಹಿಳೆಗೆ ಶಸ್ತ್ರಚಿಕಿತ್ಸೆ ಮಾಡಿ 40 ಕಿಲೋ ತೂಕದ ಅಂಡಾಶಯದ ಗಡ್ಡೆ(Ovarian cyst)ಯನ್ನು ಹೊರ ತೆಗೆದಿದ್ದರು. ಇದು ರಾಷ್ಟ್ರೀಯ ದಾಖಲೆಯಾಗಿತ್ತು. ದಪ್ಪಕ್ಷರದ ಸುದ್ದಿಗೆ ಗ್ರಾಸವಾಗಿತ್ತು. ಇದನ್ನು 'ಹೆಲ್ತ್ ಆ್ಯಂಡ್ ನ್ಯೂಟ್ರಿಷನ್' ಎನ್ನುವ ಆಂಗ್ಲ ಮಾಸಿಕ 1990ರ ಮೇ ಸಂಚಿಕೆಯಲ್ಲಿ ದಪ್ಪಕ್ಷರದಲ್ಲಿ ಪ್ರಕಟಿಸಿತ್ತು.

ಗ್ರಾಮಾಂತರ ಆಸ್ಪತ್ರೆಯಲ್ಲಿ ಕೊರತೆಗಳ ಕೂಪದಲ್ಲಿ ಸಾಹಸದ ಯಶಸ್ವಿ ಶಸ್ತ್ರಚಿಕಿತ್ಸೆ ಮಾಡಿದ ಡಾ। ಟೇಕಪ್ಪ ಬಡ ಹೆಣ್ಣು ಮಗಳ ಪ್ರಾಣ ಉಳಿಸುವುದರ ಜೊತೆಗೆ ಹೊಚ್ಚ ಹೊಸ ರಾಷ್ಟ್ರೀಯ ದಾಖಲೆ ನಿರ್ಮಿಸಿದರು. ಶಸ್ತ್ರಚಿಕಿತ್ಸೆಯ ಎಲ್ಲ ಹಂತಗಳನ್ನು ವಿಡಿಯೋದಲ್ಲಿ ಹಿಡಿದಿಡಲಾಗಿದೆ. ಡಾ। ಟೇಕಪ್ಪ ಇದೊಂದೇ ಶಸ್ತ್ರಚಿಕಿತ್ಸೆ ಮಾಡಿಲ್ಲ. ಕಳೆದ ಐದು ವರ್ಷಗಳಲ್ಲಿ ಸೌಲಭ್ಯಗಳ ಕೊರತೆಯ ನಡುವೆಯು 1156 ದೊಡ್ಡ ಶಸ್ತ್ರಚಿಕಿತ್ಸೆಗಳನ್ನು ಮಾಡಿ ಸಾರ್ವಜನಿಕರ ಪ್ರೀತಿಗೆ ಪಾತ್ರರಾಗಿದ್ದಾರೆ. 5000ಕ್ಕೂ ಹೆಚ್ಚು ಕುಟುಂಬ ಕಲ್ಯಾಣ ಶಸ್ತ್ರಚಿಕಿತ್ಸೆಗಳನ್ನು ಮಾಡಿ ಸರಕಾರದ ಗೌರವಕ್ಕೂ ಪಾತ್ರರಾಗಿದ್ದಾರೆ.

ದಾಖಲೆ ನಿರ್ಮಿಸಿದ್ದರಿಂದ ಡಾ। ಟೇಕಪ್ಪ ಬೀಗುತ್ತಿಲ್ಲ. ಒಬ್ಬ ನಿರ್ಗತಿಕ ಮಹಿಳೆಯ ಪ್ರಾಣ ಉಳಿಸಿದ ಸಂತೃಪ್ತಿ ಅವರಿಗಿದೆ ಅಷ್ಟೇ. ''ಒಬ್ಬ ಸರಕಾರಿ ಸೇವಕನಾಗಿ ನನ್ನ ಕರ್ತವ್ಯ ಮಾಡಿದ್ದೇನೆ. ನಾನಲ್ಲದೆ ಮತ್ತಾರಾದರೂ ಗೌರಮ್ಮನ ಶಸ್ತ್ರಚಿಕಿತ್ಸೆ ಮಾಡಿದ್ದರೂ, ಅವರು ಆ ಕೀರ್ತಿಗೆ ಪಾತ್ರರಾಗುತ್ತಿದ್ದರು. ಆ ಅವಕಾಶ ನನಗೆ ಸಿಕ್ಕಿತು'' ಎಂದು ತಮ್ಮನ್ನು ಪ್ರಶ್ನಿಸುವವರಿಗೆ ಸೌಜನ್ಯದಿಂದಲೇ ಉತ್ತರಿಸುವ ಉದಾರ ಗುಣದ ಡಾ। ಟೇಕಪ್ಪನವರಿಗೆ ತಮ್ಮ ವೃತ್ತಿಯಲ್ಲಿ ಸಾಕಷ್ಟು ಸಾಧಿಸಬೇಕೆನ್ನುವ ಛಲವಿದೆ, ಉತ್ಸಾಹವಿದೆ. ಎಲ್ಲಕ್ಕೂ ಹೆಚ್ಚಾಗಿ ಸೇವೆ ಸಲ್ಲಿಸುವ ಮಾನವೀಯತೆ ಇದೆ.

# ಆನಂದಕ್ಕೊಂದು ಮಕರಂದ ಬಿಂದು

ಡಾ. ಕೆ.ಸಿ. ಮರಿಯಪ್ಪ

**ಮ**ಕರಂದ ಎಂದರೆ ಸಾಕು ಮಕ್ಕಳಿಂದ ಹಿಡಿದು ಬೊಚ್ಚುಬಾಯಿಯ ಮುದುಕರ ತನಕ ಎಲ್ಲರೂ ಬಾಯಿ ಚಪ್ಪರಿಸುವವರೇ! 'ಜೇನು' ಎಂಬ ಶಬ್ದ ನೂರೆಂಟು ಕಡೆ ಹಲವಾರು ಅರ್ಥ ಪಡೆದು ಮೆರೆಯುತ್ತದೆ. ಜೇನಿನಂಥ ಬದುಕು, ಹಾಲುಜೇನು ಬೆರೆತಂತೆ, ಜೇನು ಕಣ್ಣು, ಜೇನುಗೂಡಿನಂಥ ಏಕತೆ, ಜೇನುಗೂಡಿನಷ್ಟು ನಿಗೂಢ.... ಹೀಗೇ ಸಾಗೀತು ಪಟ್ಟಿ.

ಎಲ್ಲೋ ಅರಳಿನಿಂತ ಸ್ನಿಗ್ಧ ಕುಸುಮದ ಕೆನ್ನೆಯ ಮೇಲಿಂದ ಮಕರಂದವನ್ನೆತ್ತಿಕೊಂಡು ಬರುವ ತುಂಟ ದುಂಬಿ ತನ್ನ ಚಿತ್ರವಿಚಿತ್ರವಾದ ಗೂಡಿನಲ್ಲಿ ಶೇಖರಿಸಿಡುವ ಈ ಜೇನುತುಪ್ಪ ಕೇವಲ ರುಚಿಗಾಗಿ ಅಲ್ಲ. ಅದರ ಔಷಧೀಯ ಗುಣಗಳಿಂದಾಗಿಯೂ ಮನುಷ್ಯನ ಆನಂದಕ್ಕೆ ಕಾರಣವಾಗಿದೆ.

ನಿಸರ್ಗವು ಮಾನವನಿಗೆ ನೀಡಿರುವ ನೈಸರ್ಗಿಕ ಹಾಗೂ ಸರ್ವಶ್ರೇಷ್ಠವಾದ ಒಂದು ಕೊಡುಗೆ 'ಜೇನು' ಹೂವಿನ ಮಕರಂದದಲ್ಲಿರುವ ಸುಕ್ರೋಸ್ (Sucrose) ಗ್ಲೂಕೋಸ್ (Fructose) ಮತ್ತು ಸಕ್ಕರೆ (Dextrose) ಆಗಿ ಪರಿವರ್ತನೆಯಾಗುವುದರಿಂದ ಜೇನುತುಪ್ಪ ಆಗುತ್ತದೆ.



ಚಿತ್ರ: ಬಿ.ವಿ. ಗುಂಡಣ್ಣ

ಜೇನುತುಪ್ಪದ ಬಣ್ಣ, ವಾಸನೆ, ಮಕರಂದ ಸಂಗ್ರಹಿಸುವ ಹೂವನ್ನು ಅವಲಂಬಿಸಿರುತ್ತದೆ ಮತ್ತು ಋತುಮಾನ, ಹವಾಮಾನ ಇವುಗಳ ಮೇಲೂ ಜೇನುತುಪ್ಪದ ವಾಸನೆ, ಬಣ್ಣ ಅವಲಂಬಿಸಿರುತ್ತದೆ. ಜೇನುತುಪ್ಪದ ರಚನೆಯೂ ಕೂಡ ಬಹಳ ಸ್ವಾರಸ್ಯವಾದುದು. ಕೆಲವು ಸಲ ಸ್ಥಳದಿಂದ ಸ್ಥಳಕ್ಕೆ ಋತುಮಾನದಿಂದ ಋತುಮಾನಕ್ಕೆ ವ್ಯತ್ಯಾಸವಾಗಿರುತ್ತದೆ. ಹೂವು ಮತ್ತು ಮಕರಂದ

ಪರಿಸರದ ಪರಿಸ್ಥಿತಿಗಳನ್ನು ಮುಖ್ಯವಾಗಿ ತೇವಾಂಶ (Humidity) ಅವಲಂಬಿಸಿರುತ್ತದೆ.

ಜೇನುತುಪ್ಪದಲ್ಲಿ ಸುಮಾರು ೭೦-೮೦% ಸಕ್ಕರೆ ಉಳಿದ ಭಾಗ ನೀರಿನ ಅಂಶವಾಗಿರುತ್ತದೆ. ಜೊತೆಗೆ ಖನಿಜಾಂಶಗಳು, ಪ್ರೋಟೀನುಗಳು, ಆಮ್ಲ ಮತ್ತು ಇತರ ವಸ್ತುಗಳೂ ಇರುತ್ತವೆ. ಜೇನುತುಪ್ಪದ ಸುಗಂಧ, ರುಚಿ ಅದರಿಂದ ಬಾಷ್ಪವಾಗುವ ಎಣ್ಣೆಯ ಅಂಶ ಹಾಗೂ ಬಾಷ್ಪವಾಗದ ಆಮ್ಲಗಳಿಗೆ ಅನುಗುಣವಾಗಿರುತ್ತದೆ. ದೇಹದ ಅಂಗರಚನೆಗೆ ಬೇಕಾದ ಆಮ್ಲವು ಇದರಲ್ಲಿ ಇರುವುದರಿಂದ ಜೇನುತುಪ್ಪವು ಸ್ವಾಭಾವಿಕವಾದ ಆಮ್ಲವಾಗಿದೆ.

ಜೇನುತುಪ್ಪದಲ್ಲಿ ಇರುವ ಜೀವಸತ್ವ (Vitamin)ಗಳ ಬಗ್ಗೆ ಹೇಳುವುದಾದರೆ ಕನಿಷ್ಠ ಪ್ರಮಾಣದಲ್ಲಿ 'ಎ' ಜೀವಸತ್ವ ಇರುತ್ತದೆ. ಜೊತೆಗೆ ಪೌಷ್ಟಿಕಾಂಶ ಹಾಗೂ 'ಬಿ' ಜೀವಸತ್ವವು ಬಹಳ ಹೇರಳವಾಗಿರುತ್ತದೆ. ಶರ್ಕರ ಪಿಷ್ಟ (Carbohydrate) ಜೀವದ್ರವ್ಯವೂ (Metabolism) ಇರುತ್ತವೆ. ಆದರೆ 'ಬಿ' ಜೀವಸತ್ವವು ಇಷ್ಟೇ ಪ್ರಮಾಣದಲ್ಲಿ ಎಂದು ಹೇಳಲು ಬರುವುದಿಲ್ಲ, ವ್ಯತ್ಯಾಸವಾಗುತ್ತಿರುತ್ತದೆ.

ಜೇನುತುಪ್ಪವನ್ನು ಎಷ್ಟು ವರ್ಷಗಳ ಕಾಲ ಬೇಕಾದರೂ ಶೇಖರಿಸಿ ಇಡಬಹುದು. ಆದರೆ ಬಟ್ಟ ಇಳಿಯದಂತೆ (Fermentation) ಎಚ್ಚರ ವಹಿಸಬೇಕಾಗುತ್ತದೆ. ೨೨.೮°C ನಿಂದ ೧೫.೬°C (ಸೆಂಟಿಗ್ರೇಡ್) ಉಷ್ಣಾಂಶ ಇದ್ದಾಗ ಜೇನುತುಪ್ಪವು ಹರಳು-ಹರಳಾಗುತ್ತದೆ.

ಜೇನುತುಪ್ಪವು ಬಹು ಉಪಯೋಗಿ ಔಷಧಿಯಾಗಿದೆ. ಪಚನಕ್ರಿಯೆಗೆ ಸಂಬಂಧಿಸಿ ಹಾಗೆ ಅನಾದಿಕಾಲದಿಂದಲೂ ಜೇನುತುಪ್ಪವನ್ನು ಬಳಸಲಾಗುತ್ತಿದೆ. ಆಹಾರದ ಸವಿಯನ್ನು ಹೆಚ್ಚಿಸಲು ಜೇನುತುಪ್ಪವನ್ನು ಬಳಸುತ್ತಾರೆ. ಮುಖ್ಯವಾಗಿ ಬೆಳಗಿನ ಉಪಾಹಾರದ ಜೊತೆ, ಧಾನ್ಯ, ಹಣ್ಣುಗಳು ಮತ್ತು ಬೇಕರಿಯ ಉತ್ಪನ್ನಗಳಿಗೆ ಹೆಚ್ಚಾಗಿ ಬಳಸುತ್ತಾರೆ.

ಪುಟ್ಟ ಮಕ್ಕಳಿಗೆ ಕೆಮ್ಮು ಬಂದಾಗ ಹಾಲಿಗೆ ಒಂದು ಚಮಚ ಜೇನುತುಪ್ಪ ಸೇರಿಸಿ ಕೊಟ್ಟಾಗ ಕೆಮ್ಮು, ನೆಗಡಿ, ಶೀತ ಶಮನವಾಗುವುದನ್ನು ನಾವೆಲ್ಲಾ ಕಂಡಿದ್ದೇವೆ. ಕೆಮ್ಮಿನ ಔಷಧಿ (Cough Syrup) ತಯಾರಿಕೆಯಲ್ಲೂ ಇದನ್ನು ಬಳಸುತ್ತಾರೆ. ಮೂಳೆ, ವಾತ, ರಕ್ತರೋಗ, ಕರುಳುಬೇನೆ, ಮೂಳೆ ಮುರಿತ ಔಷಧಿಗಳ ತಯಾರಿಕೆಯಲ್ಲೂ ಇದನ್ನು ಉಪಯೋಗಿಸುತ್ತಾರೆ.

ಮಲಬದ್ಧತೆಗೆ ಸಂಬಂಧಿಸಿದ ತೊಂದರೆಗಳಿಗೆ ಜೇನುತುಪ್ಪವು ದಿವ್ಯ ಔಷಧಿಯಾಗಿದೆ. ಕ್ರೀಡಾಪಟುಗಳು, ಹಾಗೂ ಇತರ ದೈಹಿಕ ಪರಿಶ್ರಮದ ವ್ಯಕ್ತಿಗಳಿಗೆ ಇದೊಂದು ಪೌಷ್ಟಿಕ ಟಾನಿಕ್ ಇದ್ದಂತೆಯೇ ಸರಿ. ರಕ್ತನಾಳಗಳಲ್ಲಿ, ರಕ್ತದ ತೊರೆಯಲ್ಲಿ ಜೇನುತುಪ್ಪ ಸುಲಭವಾಗಿ ಸೇರುವುದರಿಂದ ತಕ್ಷಣದ ಉಪಶಮನ ನೀಡುತ್ತದೆ.

ರೋಗ ನಿರೋಧಕ ಗುಣವನ್ನು ಕೂಡ ಜೇನುತುಪ್ಪವು ಹೊಂದಿರುವುದರಿಂದ ಗಾಯಗಳು, ಮೂಳೆ ಮುರಿತ, ಮುಂತಾದವುಗಳನ್ನು ಗುಣಪಡಿಸಲು ಜೇನುತುಪ್ಪವನ್ನು ಮುಖ್ಯವಾಗಿ ಬಳಸುತ್ತಾರೆ. ಸೌಂದರ್ಯವರ್ಧಕ ಕೇಂದ್ರಗಳಲ್ಲಿ (Beauty Paralour) ಮುಖ ವರ್ಧನೆಗೆ (Facial Pack) ಹಾಗೂ ಲೋಷನ್‌ಗಳ ತಯಾರಿಕೆಯಲ್ಲಿ ಜೇನುತುಪ್ಪವನ್ನು ಬಳಸಲಾಗುತ್ತಿದೆ. ಚುಯಿಂಗ್‌ಗಮ್, ಬಬ್ಬಲ್ ಗಮ್‌ಗಳ ತಯಾರಿಕೆಗೂ ಇದು ಬೇಕೇ ಬೇಕು. ಅತ್ಯಂತ ಶೀತದಲ್ಲಿ ಕೋಳಿಮೊಟ್ಟೆಗಳ ಸಂರಕ್ಷಣೆಗೆ ಇದನ್ನು ಬಳಸುತ್ತಾರೆ.

ಶೀತಕ್ಕೆ ತುಳಸಿಯೊಡನೆ ಜೇನುತುಪ್ಪವನ್ನು ಸೇರಿಸಿ ಬೆಳಗ್ಗೆ, ರಾತ್ರಿ, ತೆಗೆದುಕೊಂ

ಡರೆ ಸಾಕು ಶೀತ ಪರಾರಿ. ಗುಲಾಬಿ ದಳದೊಡನೆಯೂ ತೆಗೆದುಕೊಳ್ಳಬಹುದು. ಕ್ಷಯರೋಗದ ಪ್ರಾರಂಭದಲ್ಲೇ ಜೇನು ತುಪ್ಪ ಕೊಟ್ಟರೆ ಖಾಯಿಲೆ ಶಮನ, ಕಣ್ಣಿನ ಎಲ್ಲಾ ಖಾಯಿಲೆಗಳಿಗೂ ಇದೊಂದು ಉತ್ತಮ ಔಷಧಿಯಾಗಿದೆ.

ಆರೋಗ್ಯ ಹಾಗೂ ದೃಢಕಾಯರಾಗಿ ಇರಬೇಕಾದರೆ ರಾತ್ರಿ ಮಲಗುವ ಮುನ್ನ ಒಂದು ಲೋಟ ಬಿಸಿನೀರು ಒಂದು ಚಮಚ ಜೇನುತುಪ್ಪ ಸೇರಿಸಿ ಕುಡಿಯಿರಿ. ದಿನಕ್ಕೆ ನಾಲ್ಕಾವರ್ತಿ ಸಂಪೆರಸದೊಡನೆ ಜೇನು ತುಪ್ಪ ತೆಗೆದುಕೊಳ್ಳಿ. ದಿನಕ್ಕೆ ಮೂರಾವರ್ತಿ ಒಂದು ಲೋಟ ಟೀ ಜೊತೆ ಜೇನುತುಪ್ಪ ಸೇವಿಸಿರಿ.

ಕ್ಯಾಲೋರಿ ದೃಷ್ಟಿಯಿಂದ ಜೇನು ತುಪ್ಪ ತುಂಬಾ ಒಳ್ಳೆಯದು. ಚಾಕಲೇಟು, ಕೋಕೋ ಮುಂತಾದ ಪೌಷ್ಟಿಕಾಂಶ ಉತ್ಪನ್ನಗಳ ಜೊತೆ ಜೇನುತುಪ್ಪ ಸ್ಪರ್ಧಿಸುವಂತಿದೆ. ೧೦೦ಗ್ರಾಂ. ಜೇನುತುಪ್ಪ ೩೩೫ ಕ್ಯಾಲೋರಿಗಳನ್ನು ಹೊಂದಿದೆ.

ಜೇನಿನಲ್ಲಿ ಇರುವ ಗ್ಲುಕೋಸ್ ರಕ್ತನಾಳಗಳನ್ನು ವಿಸ್ತಾರಗೊಳಿಸುತ್ತದೆ. ಸಡಿಲಗೊಳಿಸುತ್ತದೆ. ರಕ್ತದ ಒತ್ತಡ ಇದ್ದವರಿಗೆ ಇದೊಂದು ಉತ್ತಮ ಔಷಧಿ. ಜಠರ ಮತ್ತು ಕರುಳು, ಯಕೃತ್‌ಗಳ ಕಾಯಿಲೆಗಳಿಗೆ ಇದು ತುಂಬಾ ಉಪಯುಕ್ತವಾಗಿದೆ. ಕಿಡ್ನಿ ತೊಂದರೆಯಾದವರಿಗೆ ವೈದ್ಯರು ಜೇನುತುಪ್ಪ ಶಿಫಾರಸು ಮಾಡುತ್ತಾರೆ. ಒಂದು ಲೋಟ ಟೀ ಜೊತೆ ೧೦ ಗ್ರಾಂ ಜೇನುತುಪ್ಪ ಸೇರಿಸಿ ಕುಡಿದರೆ ಕಿಡ್ನಿ ತೊಂದರೆ ಮಾಯ.

ಮದ್ಯ ಸೇವಿಸಿ ಪ್ರಜ್ಞೆ ತಪ್ಪಿದವರನ್ನು ಜೇನುತುಪ್ಪ ಕೊಡುವುದರ ಮೂಲಕ ಪ್ರಜ್ಞೆ ಬರಿಸಬಹುದು. ಜೇನುತುಪ್ಪವು ಪ್ರಜ್ಞಾಹೀನ ಸ್ಥಿತಿಯನ್ನು ಕಡಿಮೆಗೊಳಿಸುತ್ತದೆ. ರಕ್ತವನ್ನು ಶುದ್ಧೀಕರಿಸುವ ಹಾಗೂ ಕೆಂಪು ರಕ್ತ ಕಣಗಳನ್ನು ವೃದ್ಧಿಸುವ ಗುಣವನ್ನು ಜೇನುತುಪ್ಪವು ಹೊಂದಿದೆ. ಹಿಮೋಗ್ಲೋಬಿನ್ ಪ್ರಮಾಣವನ್ನು ಹೆಚ್ಚಿಸುತ್ತದೆ.

# ನಮ್ಮ ಪೂರ್ವಜರು ನೀರೊಳಗಿಂದ ಬಂದರೆ?

ರಾಜೇಶ್ ಪಿ.

ಸೌರವ್ಯೂಹದ ಗ್ರಹಗಳಲ್ಲಿ ಒಂದಾದ ಭೂಮಿಯು ಹುಟ್ಟಿ ಸುಮಾರು 4,600 ಮಿಲಿಯ ವರ್ಷಗಳಾದವು. 3,600 ಮಿಲಿಯ ವರ್ಷಗಳ ಹಿಂದೆ ಮೊದಲ ಜೀವಿ ಭೂಮಿಯ ಮೇಲೆ ಕಾಣಿಸಿಕೊಂಡಿತು. ಅಂದಿನಿಂದ ಇಂದಿನವರೆಗೆ ಜೀವ ವಿಕಾಸ ಸಾಗುತ್ತಲೇ ಇದೆ. ಸುಮಾರು 0.011 ಮಿಲಿಯ ವರ್ಷಗಳಿಂದ ಮಾನವನು ಭೂಮಿಯ ತಾರತಮ್ಯವನ್ನು ಹೊಂದಿದ್ದಾನೆ. ಈ ಜೀವ ವಿಕಾಸ ಅಂದರೇನು? ಅದು ಹೇಗಾಯಿತು? ಇತ್ಯಾದಿ ಪ್ರಶ್ನೆಗಳನ್ನು ಉತ್ತರಿಸಲು ಪ್ರಯತ್ನಿಸುವ.

ಭೂಮಿಯ ಮೇಲೆ ಇಂದು ಹಲವು ಮಿಲಿಯ ಜಾತಿಯ ಜೀವಿಗಳಿವೆ. ಈ ಎಲ್ಲಾ ಜೀವಿಗಳು ಜೀವ ವಿಕಾಸದ ಹಾದಿಯಲ್ಲಿ ವಿವಿಧ ಹಂತಗಳನ್ನು ದಾಟಿ ಬಂದಿವೆ. ಭೂಮಿಯ ಮೇಲೆ ಮೊದಲ ಜೀವಿ ಹುಟ್ಟಿ ಮಾನವನವರೆಗಿನ ವಿವಿಧ ಘಟನೆಗಳ ಸ್ಥೂಲ ಪರಿಚಯವನ್ನು ಈಗ ಮಾಡಿಕೊಳ್ಳಿ. ಭೂಮಿಯಲ್ಲಿ ಮೊದಲ ಜೀವಿ ಜನಿಸಿ 2,000 ಮಿಲಿಯ ವರ್ಷಗಳ ನಂತರ ಪ್ರೊಟೊಸೋವಾಗಳು, ಮೃದ್ವಂಗಿಗಳು (molluscs) ಮುಂತಾದ ಸಮುದ್ರ, ವಾಸಿ ಅಕಶೇರುಕ ಜೀವಿಗಳು ಕಾಣಿಸಿಕೊಂಡವು. 1,100 ಮಿಲಿಯ ವರ್ಷಗಳ ಬಳಿಕ ಮೊದಲ ಮೀನು ಕಾಣಿಸಿಕೊಂಡಿತು. ಮುಂದಿನ 75 ಮಿಲಿಯ ವರ್ಷಗಳಲ್ಲಿ ಅವುಗಳ ಸಂಖ್ಯೆ ಜಾಸ್ತಿಯಾತು. ಅನಂತರ 25 ಮಿಲಿಯ ವರ್ಷಗಳಲ್ಲಿ ಉಭಯಜೀವಿಗಳು (amphibians), ಶ್ವಾಸಕೋಶ ಸಹಿತ ಮೀನುಗಳು ಹುಟ್ಟಿಕೊಂಡವು. ಇಂದಿನಿಂದ 320 ಮಿಲಿಯ ವರ್ಷಗಳಲ್ಲಿ ಮೊದಲ ಸರೀಸೃಪಗಳು (reptiles) ಹುಟ್ಟಿಕೊಂಡವು. ಬಳಿಕ 50 ಮಿಲಿಯ ವರ್ಷಗಳಲ್ಲಿ ಮೊದಲ ಡೈನೊಸಾರ್‌ಗಳು (dinosaurs) ಭೂಮಿಯ ಮೇಲೆ ಕಾಣಿಸತೊಡಗಿದವು. ಮೊತ್ತ ಮೊದಲ ಸಸ್ತನಿ ಕಾಣಿಸಬೇಕಾದರೆ ಕ್ರಿಟೇಶಿಯಸ್ ಯುಗ (135 ಮಿಲಿಯ ವರ್ಷಗಳ ಹಿಂದೆ) ಬರಬೇಕಾಯಿತು. 13 ಮಿಲಿಯ ವರ್ಷಗಳ ಹಿಂದೆ ಆಧುನಿಕ ಮಾನವನು ಕಾಣಿಸಿಕೊಂಡನು.

ಈ ಜೀವ ವಿಕಾಸದ ಪಥವನ್ನು ಗಮನಿಸಿದರೆ ಒಂದು ರೀತಿಯ ಏರಿಕೆಯ ಕ್ರಮ ಕಂಡುಬರುತ್ತದೆ. ಕಾಲ ಸರಿದಂತೆ ಸಂಕ್ಲಿಷ್ಟ ದೇಹ ರಚನೆ ಹೊಂದಿರುವ ಜೀವಗಳು ಭೂಮಿಯನ್ನು ಆಳಿದುದು ತಿಳಿಯುತ್ತದೆ. ಈ ಜೀವ ವಿಕಾಸದ ರಹಸ್ಯವನ್ನು ಭೇದಿಸಿದವನೇ ಇಂಗ್ಲಂಡಿನ ಚಾರ್ಲ್ಸ್ ಡಾರ್ವಿನ್ (1909-1882). ಆತನು 1859ರಲ್ಲಿ 'ಒರಿಜನ್ ಆಫ್ ಸ್ಪಿಶೀಸ್' ಎಂಬ ಪುಸ್ತಕದಲ್ಲಿ ಈ ರೀತಿಯ ವಾದವನ್ನು ಮಂಡಿಸಿದ್ದಾನೆ. ಪ್ರತಿಯೊಂದು ಜೀವಿಯೂ ಸಂತಾನೋತ್ಪತ್ತಿ ಮೂಲಕ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸುತ್ತದೆ. ಪ್ರತಿಜೀವಿಯೂ ತನ್ನ ಉಳಿವಿಗಾಗಿ ಹೋರಾಡುತ್ತದೆ. ಈ ಹೋರಾಟ ತನ್ನ ಜಾತಿಯ ಜೀವಿಗಳೊಂದಿಗೆ ಇರಬಹುದು, ಇತರ ಜಾತಿಯ

ಜೀವಿಗಳೊಂದಿಗೂ ಇರಬಹುದು, ಅಥವಾ ವಾತಾವರಣದ ಪರಿಸ್ಥಿತಿಯೊಂದಿಗೆ ಇರಬಹುದು. ಇದು ಆಹಾರ, ಆಶ್ರಯ ಮತ್ತು ಸಂತಾನೋತ್ಪತ್ತಿಗಾಗಿ ನಡೆಯುತ್ತದೆ. ಈ ಹೋರಾಟದಲ್ಲಿ ಪ್ರಬಲಜೀವಿ ಉಳಿಯುತ್ತವೆ. ಆಹಾರ ಮತ್ತು ಆಶ್ರಯ ಪಡಕೊಂಡು ಸಂಗಾತಿಯೊಡನೆ ವಂಶಾಭಿವೃದ್ಧಿ ಮಾಡುತ್ತದೆ. ಈ ಉಳಿವಿನ ಹೋರಾಟಕ್ಕೆ ಪ್ರತಿ ಜೀವಿಯೂ ತನ್ನ ಕೆಲವು ಹೊಂದಾಣಿಕೆಗಳನ್ನು ಮಾಡುತ್ತದೆ. ಉತ್ತಮ ಹೊಂದಾಣಿಕೆ (adaptation) ಮಾಡಿಕೊಂಡಂತಹ ಜೀವಿಯನ್ನು ಪ್ರಕೃತಿ ಆಯ್ಕೆ ಮಾಡುತ್ತದೆ.

ಈ ವಿಕಾಸವಾದವು ಹಲವು ಪುರಾವೆಗಳೊಂದಿಗೆ ಪುಷ್ಟೀಕರಿಸಲ್ಪಡುತ್ತದೆ. ಈಗ ವಿಕಾಸವಾದದ ಪಥದ ಕೆಲವು ಘಟನೆಗಳು ಗಮನಿಸುವ ಭೂಮಿಯು ಪ್ರಾರಂಭದ ಅವಧಿಗಳಲ್ಲಿ ಶೇಕಡಾ ವಾರು ನೀರಿನಿಂದ ಆವೃತವಾಗಿತ್ತಷ್ಟೆ. ಆಗ ನೀರಿನಲ್ಲಿ ವಾಸಿಸಲು ಬೇಕಾದಂತಹ ಹೊಂದಾಣಿಕೆ ಇರುವಂತಹ ಏಕ ಕೋಶ ಜೀವಿಗಳು, ಮೃದ್ವಂಗಿಗಳು ಕಾಣಿಸಿಕೊಂಡವು. ಭೂಭಾಗವು ವಿಸ್ತರಿಸಲು ಆರಂಭಿಸಿದ ನಂತರ ಜಲವಾಸಿಗಳಲ್ಲಿ ಕೆಲವು ಭೂಮಿಯ ಮೇಲೆ ಬರಲಾರಂಭಿಸಿದವು. ಅವುಗಳ ಭೂಮಿಯ ಮೇಲೆ ಸಮರ್ಥವಾಗಿ ಜೀವಿಸಲು ಹಲವು ಹೊಂದಾಣಿಕೆಗಳನ್ನು ಮಾಡಬೇಕಾಯಿತು. ಉದಾಹರಣೆಗೆ: ಗಾಳಿಯನ್ನು ಉಸಿರಾಡಲು ಶ್ವಾಸಕೋಶಗಳ ಬೆಳವಣಿಗೆ, ಜಾಲಪಾದಗಳ ನಶಿಸುವಿಕೆ ಇತ್ಯಾದಿ. ಹೀಗೆ ಭೂ ಮತ್ತು ಜಲಗಳಲ್ಲಿ ಸಮರ್ಥವಾಗಿ ಜೀವಿಸಬಲ್ಲವುಗಳೇ ಉಭಯ ಜೀವಿಗಳು. ಒಟ್ಟಿನಲ್ಲಿ ಹೇಳುವುದಾದರೆ ಮಾನವನಿಗೂ ಮೀನಿನಂತಹ ಜಲಜೀವಿಗಳೇ ಪೂರ್ವಜರು.

ಭೂಮಿಯ ಮೇಲೆ ವಾತಾವರಣದಲ್ಲಿ ಸಾಕಷ್ಟು ಏರುಪೇರುಗಳು ಆಗುತ್ತಿರುತ್ತವೆ. ಉಳಿಯಬೇಕಾದರೆ ಆ ಏರುಪೇರುಗಳ ತಕ್ಕ ಹೊಂದಾಣಿಕೆ ಮಾಡಿಕೊಳ್ಳಬೇಕು. ಮಾಡಿಕೊಳ್ಳದಿದ್ದರೆ ಅವು ಉಳಿಯುವುದಿಲ್ಲ. ಹಾಗೆಯೇ ಅನೇಕ ಜಾತಿಯ ಜೀವಿಗಳು ನಶಿಸಿವೆ. ಅವುಗಳಲ್ಲಿ ಪ್ರಮುಖವಾದದ್ದು 'ಸರೀಸೃಪ' ಪ್ರಾಣಿ ವಂಶಕ್ಕೆ ಸೇರಿದ ಡೈನೋಸಾರ್‌ಗಳು. ಸರೀಸೃಪಗಳಲ್ಲಿ ಕೆಲವು ನಶಿಸಿದಾಗ ಅವುಗಳ ಸ್ಥಾನವನ್ನು ತುಂಬಲು ಪಕ್ಷಿಗಳು ಬಂದವು. ಪಕ್ಷಿಗಳು ಸರೀಸೃಪಗಳಿಂದ ಬಂದವು ಎನ್ನುವುದಕ್ಕೆ ಸಾಕ್ಷಿ ಎಂದರೆ ಆರ್ಕಿಯೊಪ್ಟೆರಿಕ್ಸ್ ಎಂಬ ಸರೀಸೃಪ ಹಕ್ಕಿ.

ಡಾರ್ವಿನ್ ವಿಕಾಸವಾದವನ್ನು ಮಂಡಿಸಿದರೂ ಅದನ್ನು ಆತನ ಜೀವಿತಕಾಲದಲ್ಲಿ ಯಾರೂ ಗಣನೆಗೆ ತೆಗೆದುಕೊಳ್ಳಲಿಲ್ಲ. ಈತನ ಕಾಲದಲ್ಲಿ ಆಲ್ಫ್ರೆಡ್ ರಸೆಲ್ ವ್ಯಾಲೇಸ್ ಎಂಬಾತ ಕೂಡ ಇದೇ ಸಿದ್ಧಾಂತದ ಪ್ರತಿಯನ್ನು ಡಾರ್ವಿನ್ ಕಳಿಸಿದ್ದ (1858). ಡಾರ್ವಿನ್ನನ ವಾದಕ್ಕೆ 20ನೇ ಶತಮಾನದ ಆರಂಭದಲ್ಲಿ ಬೆಲೆ ಬಂದಿತು. ಆ ಬಳಿಕ ಸಾಕಷ್ಟು ಸಂಶೋಧನೆಗಳು ನಡೆದವು. ಜೀವ ವಿಕಾಸಕ್ಕೆ ಸಾಕಷ್ಟು ಪುರಾವೆಗಳು ಲಭಿಸಿದವು.

ಜೀವ ವಿಕಾಸದ ಪುರಾವೆಗಳು ಮೊತ್ತಮೊದಲು ದೊರೆತಿದ್ದು ಜೀವಾವಶೇಷಗಳಿಂದ. ಸಂಶೋಧನೆಗಳು ಮುಂದುವರೆದಂತೆ ಜೀವಿಗಳ ದೇಹರಚನೆಯಲ್ಲಿ ಇರುವ ಸಾಮ್ಯ ಅವಶೇಷದ ಅಂಗಗಳು (Vestigial Organs) ಇರುವಿಕೆ, ಭ್ರೂಣಶಾಸ್ತ್ರ(embryoiogy)ಗಳಿಂದ ಪುರಾವೆಗಳು ದೊರೆಯತೊಡಗಿದವು. ಉದಾಹರಣೆಗೆ: ಕಪ್ಪೆ, ಹಕ್ಕಿ, ತಿಮಿಂಗಲ, ಬೆಕ್ಕು, ಮನುಷ್ಯ ಈ ಜೀವಿಗಳ ಕೈಯ ರಚನೆಯನ್ನು ಗಮನಿಸಿದರೆ ಸಾಮ್ಯ ಕಂಡು ಬರುತ್ತದೆ. ಅವೆಲ್ಲವೂ ಪಂಚಾಂಗುಲೀ (pentadacty) ಕ್ರಮವನ್ನು ಪ್ರದರ್ಶಿಸುತ್ತವೆ. ಅವಶೇಷದ ಅಂಗಗಳ ಬಗ್ಗೆ ಹೇಳುವುದಾದರೆ ಮಾನವನ ಕಣ್ಣಿನ ಪ್ಲಿಕಾಸೆಮಿಲ್ಯುನಾರಿಸ್, ಕಿವಿಯ ಸ್ನಾಯುಗಳು ಶರೀರದ ಕೂದಲುಗಳು, ಗಂಡಸಿನ ಮೊಲೆತೊಟ್ಟು ಅವಶೇಷದ ಅಂಗಗಳಾಗಿವೆ. ಭ್ರೂಣಶಾಸ್ತ್ರವೂ ಜೀವವಿಕಾಸವನ್ನು ಪ್ರಬಲವಾಗಿ ಪುಷ್ಟೀಕರಿಸುತ್ತದೆ. ವಿವಿಧ ಜೀವಿಗಳನ್ನು ಭ್ರೂಣಾವಸ್ಥೆಯಲ್ಲಿ ಪರೀಕ್ಷಿಸಿದರೆ ಅವು ಒಂದೇ ಆಗಿರುತ್ತವೆ. ಬಳಿಕದ ಹಂತಗಳಲ್ಲಿ ವಿವಿಧ ಜೀವಿಗಳಲ್ಲಿ ಬೇರೆ ಬೇರೆ ವಿಶಿಷ್ಟ ಅಂಗಗಳು ಬೆಳೆಯು

ವುದರಿಂದ ಆ ಹಂತಗಳು ಬೇರೆ ಬೇರೆ ಆಗಿರುತ್ತವೆ.

ಜೀವವಿಕಾಸವು ಮ್ಯೂಜಿಕ್‌ನಂತೆ ಒಮ್ಮೆಲೆ ಆಗದು. ಜೀವವಿಕಾಸದ ಪ್ರತಿಯೊಂದು ಹಂತಕ್ಕೂ ಸಾವಿರಾರು ವರ್ಷಗಳ ಕಾಲಾವಕಾಶ ಬೇಕಾಗಬಹುದು. ಈ ವಿಕಾಸ ಹೇಗೆ ನಡೆಯುತ್ತದೆ? ಅದಕ್ಕಾಗಿ ಈ ಘಟನೆಯನ್ನು ಗಮನಿಸಿ ಡಿ.ಡಿ.ಟಿ.ಯನ್ನು ಪ್ರಥಮ ಬಾರಿಗೆ ಉಪಯೋಗಿಸಿದಾಗ ಸೊಳ್ಳೆಗಳು, ಮನೆಯ ನೊಣಗಳು ಸಾಯುತ್ತಿದ್ದವು. ಕಾಲಕ್ರಮೇಣ ಡಿ.ಡಿ.ಟಿ. ಅವುಗಳ ಮುಂದೆ ನಿರುಪಯೋಗ ವಸ್ತು ಆಗಿಬಿಟ್ಟಿತು. ಯಾಕೆ ಹೀಗೆ? ಡಿ.ಡಿ.ಟಿ.ಯನ್ನು ಉಪಯೋಗಿಸಿದಾಗ ಎಲ್ಲ ಸೊಳ್ಳೆಗಳು ಸಾಯುವುದಿಲ್ಲ. ಬದುಕುಳಿದವುಗಳಲ್ಲಿ ಕೆಲವು ಡಿ.ಡಿ.ಟಿ.ಯನ್ನೆದುರಿಸಲು ಬೇಕಾದ ವಂಶವಾಹೀಯ ಬದಲಾವಣೆ (genetic makeup) ಮಾಡಿಕೊಂಡವು. ಅದರ ಪರಿಣಾಮವಾಗಿ ಅವು ಸಂತಾನೋತ್ಪತ್ತಿ ಮಾಡಿ ತಮ್ಮ ಸಂಖ್ಯೆಯನ್ನು ಹೆಚ್ಚಿಸಿಕೊಂಡವು. ವಂಶವಾಹಿ(gene)ಯ ರಚನೆಯಲ್ಲಿ ಆಗುವ ವ್ಯತ್ಯಾಸವೇ ಮ್ಯುಟೇಶನ್ (Mutation).

ಜೀವವಿಕಾಸವನ್ನು ವಿವರಿಸಲು ಪ್ರಯತ್ನಿಸಿದ್ದು ಡಾರ್ವಿನ್ ಒಬ್ಬನೇ ಅಲ್ಲ. ಅವನಿಗಿಂತ ಮುಂಚೆ ಜೀನ್ ಬ್ಯಾಪ್ಟಿಸ್ಟ್ ದಿ ಲೆಮಾರ್ಕ್ (1744-1829) ಎಂಬ ಫ್ರೆಂಚ್ ಜೀವವಿಜ್ಞಾನಿ ಜೀವವಿಕಾಸ...ವನ್ನು ತಿಳಿಸಲು ಪ್ರಯತ್ನಿಸಿದ್ದನು. ಆತನ ಸಿ...ಾಂತವು ಸರಿಯಾದ ಪುರಾವೆಗಳಿಲ್ಲದೆ ಗಮನ ಸೆಳೆಯಲು ವಿಫಲವಾಯಿತು. ಜೀವವಿಕಾಸದ ಆಧುನಿಕ ಸಿದ್ಧಾಂತವೂ ಇದೆ. ಆ ಸಿದ್ಧಾಂತಕ್ಕೆ ನಿಯೋಡಾರ್ವಿನಿಸಂ (NEO - DARWINISM) ಎಂದು ಹೆಸರು. ಅದು ಹಾಲ್ಡೇನ್, ಮುಲ್ಲರ್, ಹಕ್ಸ್ಲೀ ಮುಂತಾದ ವಿಜ್ಞಾನಿಗಳಿಂದ ರೂಪಗೊಂಡಿತು. ಜೀನಿಯ (Genetic) ವಾದವೇ ಅದರ ತಿರುಳು. ಇದು ಇಂದು ಜಗತ್ತಿನಾದ್ಯಂತ ಮನ್ನಣೆ ಪಡೆದಿದೆ. ●

## ಮರೆವು ದಂಪತಿಗಳು

ಗಂಡ: 'ಏನೇ, ಆಸ್ಪತ್ರೆಯಲ್ಲಿ ನನ್ನ ಹೆಲ್‌ಮೆಟ್ ಮರತೆ ಅಂತ ಕಾಣುತ್ತೆ.''

ಹೆಂಡತಿ: ಇಲ್ಲಾರಿ ಡಾಕ್ಟರನ್ನು ಮಾತನಾಡಿಸಿ ಹೊರಟಾಗ ನಾನು ಮೇಜು ಕುರ್ಚಿಯ ಮೇಲೆ ನೋಡಿದೆ. ನೀವು ಆಟೋದಲ್ಲೇ ಮರೆತಿರಬೇಕು.

ಗಂಡ: ಹೋಗುವಾಗ ಆಟೋದಲ್ಲೋ! ಬರುವಾಗ ಆಟೋದಲ್ಲೋ

* * *

ಹಾಸ್ಯ ಚಕ್ರವರ್ತಿ ಎನ್.ಎಸ್.ಕೃಷ್ಣನ್ ಸಿನಿಮಾ ರಂಗದಲ್ಲಿ ಮಾತ್ರವಲ್ಲ ತನ್ನ ಪರಿಚಿತರೊಡನೆ ಮಾತಾಡುವಾಗಲೂ ನಗೆಚಟಾಕಿಯನ್ನು ಸರಾಗವಾಗಿ ಹಾರಿಸುತ್ತಿದ್ದರು.

ಒಬ್ಬರ ಮನೆಯಲ್ಲಿ ''ಏನು ತೆಗೆದುಕೊಳ್ಳುತ್ತೀರ, ಕಾಫಿ ಅಥವಾ ಟೀ.''

ಕೃಷ್ಣನ್ ತಲೀನಾಗಿ ಉತ್ತರಿಸಿದರು ನಗುತ್ತಾ,

''ಟಿ.ಎ. ಮಧುರಂ'' (ಅದು ಅವರ ಪ್ರಶ್ನೆಗೆ ಉತ್ತರವಾದರೂ, ಆ ಉತ್ತರ ಅವರ ಪತ್ನಿಯ ಇನಿಷಿಯಲ್‌ನೊಡನೆ ಹೆಸರೂ ಆಗಿತ್ತು. ಅವರೂ ತನ್ನ ಪತಿಯಂತೆ ಖ್ಯಾತ ಹಾಸ್ಯನಟಿಯೆಂದು ಹೆಸರುಗಳಿಸಿದ್ದರು.

*– ಬಿ.ಎಸ್.ನರೇಂದ್ರನಾಥ್*

# ಶುದ್ಧ ಸಂಗೀತದ ನಿರಂತರ ಯಾತ್ರಿ

ಸುರೇಶ ಕುಲಕರ್ಣಿ



ಅದೊಂದು ಅಪರೂಪದ ಕ್ಷಣ! ಹಿಂದಿ ಚಲನಚಿತ್ರರಂಗದ ಮೈಲುಗಲ್ಲೆಂದೇ ಪರಿಗಣಿಸಲಾದ 'ಬೈಜುಬಾವರಾ' ಚಿತ್ರ ಮುಂಬಯಿ ಬ್ರಾಡ್‌ವೇ ಥೇಟರಿನಲ್ಲಿ ರಜತ ಮಹೋತ್ಸವ ಕಂಡ ದಿನವದು. ಥೇಟರಿಗೆ ಮೈಯ್ಯೆಲ್ಲ ಅಲಂಕಾರ ಮಾಡಲಾಗಿತ್ತು. ಚಿತ್ರದ ನಿರ್ಮಾಪಕ ಶಂಕರ್‌ಭಟ್ ಮತ್ತು ನಿರ್ದೇಶಕ ವಿಜಯಭಟ್ ಆನಂದದಿಂದ ಬೀಗುತ್ತಿದ್ದರು. 'ಬೈಜುಬಾವರಾ' ಚಿತ್ರಕ್ಕೆ ಜೀವ ತುಂಬಿದ ಸಂಗೀತ ನಿರ್ದೇಶಕ ನೌಷಾದ್ ಥೇಟರಿನ ಸೂರಿನ ಮೇಲೆ ಒಬ್ಬರೇ ನಿಂತು ಏನೋ ಯೋಚಿಸುತ್ತಿದ್ದರು.

''ಏನು ಯೋಚಿಸ್ತಿದೀರಿ ನೌಷಾದ್ ಸಾಹಿಬ್?'' ಕೇಳಿದರು ವಿಜಯ್‌ಭಟ್.

''ಏನಿಲ್ಲ, ಈ ಬ್ರಾಡ್‌ವೇ ಥೇಟರಿನೆದುರಿಗಿನ ರಸ್ತೆಯಾಚೆಗೆ ಒಂದು ಫುಟ್‌ಪಾತ್ ಇದೆಯಲ್ಲ? ಅದರ ಮೇಲೆ ಇಪ್ಪತ್ತೈದು ವರ್ಷಗಳ ಹಿಂದೆ ಯುವಕನೊಬ್ಬ ತಲೆಯ ಕೆಳಗೆ ಢೋಲಕ್ ಇಟ್ಟುಕೊಂಡು ಮಲಗಿ ಸಂಗೀತದ ಕನಸು ಕಾಣುತ್ತಿದ್ದ. ಈಗ ಥೇಟರಿನ ಸೂರಿನ ಮೇಲೆ ನಿಂತು ಸಾಕಾರವಾದ ಕನಸನ್ನು ಕಂಡು ಉದ್ವಿಗ್ನನಾಗಿದ್ದಾನೆ. ಆ ಫುಟ್‌ಪಾತಿನಿಂದ ಈ ಫುಟ್‌ಪಾತಿಗೆ ಬರಲು ಇಪ್ಪತ್ತೈದು ವರ್ಷಗಳು ಬೇಕಾದವು!'' ಈ ಮಾತುಗಳು ನೌಷಾದ್ ತಮ್ಮನ್ನು ಕುರಿತು ತಾವು ಆಡಿಕೊಂಡಂಥವಾಗಿದ್ದವು.

ಅವರದು ಹೋರಾಟದ ಬದುಕು. ರಸ್ತೆಯ ಬದಿ ಕುಳಿತು ಢೋಲಕ್ ಬಾರಿಸುತ್ತಿದ್ದ ಯುವಕ ಸತತವಾಗಿ ಐವತ್ತು ವರ್ಷಗಳ ಕಾಲ ಹಿಂದಿ ಚಿತ್ರರಂಗದ ಸಂಗೀತ ಲೋಕದ ಅನಭಿಷಿಕ್ತ ದೊರೆಯಾಗಿ ಮೆರೆಯುತ್ತಿದ್ದಾನೆಂದರೆ, ಆತನ ಧೀಶಕ್ತಿ ಎಂಥದೆಂಬ ಕಲ್ಪನೆ ಯಾರಿಗಾದರೂ ಆದೀತು. ಹಿಂದೂಸ್ತಾನಿ ಸಂಗೀತವನ್ನು ನೌಷಾದರಿಗಿಂತ ಸಮರ್ಥವಾಗಿ ದುಡಿಸಿಕೊಂಡ ಮತ್ತೊಬ್ಬರಿಲ್ಲ. ಹಾಗೆ ಯಶಸ್ಸು ಕಂಡವರೂ ಇಲ್ಲ. ಸಂಗೀತದ ವಿಷಯಕ್ಕೆ ಬಂದರೆ ಅಪ್ಪಟ ಮಡಿವಂತಿಕೆಯಿಂದ ತುಂಬುರು ನಾರದರ ಸೃಷ್ಟಿಯ ಮೂಲ ಜಾಡನ್ನು ಜಪ್ಪಯ್ಯ ಎಂದರೂ

ಬಿಡದ ಈ ಸಂಗೀತದ ನಿರ್ದೇಶಕ ಉಳಿದೆಲ್ಲ ವಿಷಯಗಳಲ್ಲಿ ಅಪ್ಪಟ ವಿವಾದಾತೀತ ವ್ಯಕ್ತಿ!

ಪ್ರತಿಭೆ ಎಲ್ಲಿ ಕಂಡರೂ ಅದರೆಡೆಗೆ ನಾಲ್ಕು ಒಳ್ಳೆಯ ಮಾತನ್ನಾಡಬಲ್ಲ ಸಹೃದಯಿ ನೌಷಾದ್. ಇತ್ತೀಚೆಗೆ ತೆಲುಗಿನ 'ಶಂಕರಾ ಭರಣಂ' ಚಿತ್ರವನ್ನು ಟಿ.ವಿ.ಯಲ್ಲಿ ನೋಡಿದ ವರೇ ಅದರ ಸಂಗೀತ ನಿರ್ದೇಶಕರಿಗೆ ನೌಷಾದ್ ಒಂದು ತಂತಿ ಸಂದೇಶ ಕಳಿಸಿದರಂತೆ.

''ಪ್ರಿಯ ಕೆ.ವಿ.ಮಹದೇವನ್,

ನಿಮ್ಮ ಚಿತ್ರ ಒಂದು ಶ್ರೇಷ್ಠ ಕೃತಿ. ನನಗಾಗಿ ಇಂಥ ಇನ್ನೊಂದು ಚಿತ್ರ ನಿರ್ಮಿಸುವಿರಾ? ಅಬ್ಬಾ! ಎಂಥ ಕಾಣಿಕೆ ನಿಮ್ಮದು.''

ನೌಷಾದ್‌ರ ಈ ಸಂದೇಶ ಕೇವಲ ಅಭಿನಂದ ನೆಯಲ್ಲ. ಹಿಂದೂಸ್ತಾನಿ ತಪಸ್ವಿಯೊಬ್ಬಾತ ಕರ್ನಾಟಕ ಸಂಗೀತದ ನಿರ್ದೇಶಕನಿಗೆ ಎದೆತುಂಬಿ ಹೇಳಿದ ಮಾತು.

ನೌಷಾದರ ಸಂಗೀತದ ಬದುಕು ಚಿತ್ರರಂಗಕ್ಕೆ ಸಂಬಂಧಿಸಿದಂತೆ ಪ್ರಾರಂಭವಾದದ್ದು 1940ರಲ್ಲಿ. ಎಂ.ಭಾವನಾನಿ ನಿರ್ದೇಶಿಸಿದ ಪ್ರೇಮನಗರ್ ಎಂಬ ಸಾಮಾಜಿಕ ಚಿತ್ರಕ್ಕೆ ಮೊದಲ ಬಾರಿಗೆ ಸಂಗೀತ ನೀಡಿದರು ನೌಷಾದ್. ಅಂದಿನಿಂದ ಸತತವಾಗಿ ಐವತ್ತು ವರ್ಷಗಳ ಕಾಲ ತಮ್ಮ ಬೆರಳ ತುದಿಯ ತಾನ್‌ಪುರಾ ಸಂಭಾಳಿಸಿದ ಈ ಸಂಗೀತ ಯೋಗಿಯ ದಾಹ ಚಿರಂತನವಾದದ್ದು. ಅವರು ಹಿಂದೂಸ್ತಾನಿಗೆ ಗಂಟು ಬಿದ್ದರು. ಅದರಲ್ಲೇ ಬಿತ್ತಿ ಬೆಳೆದು ಉಳಿದರು. ಹಣಕ್ಕಾಗಿ, ಬದಲಾ ಗುವ ಕಾಲದ ನೆಪ ಹೇಳಿ ಹಿಂದೂಸ್ತಾನಿಗೆ ಪಾಶ್ಚಾತ್ಯ ಸಂಗೀತದ ವಿಷ ಬೆರೆಸಲಿಲ್ಲ. ಕೇಳುಗರೆ ದೆಯಲ್ಲಿ ಸ್ಥಾಯೀ ಆಗುವಂತಹ ಉಚ್ಚ ಮಟ್ಟದ ಶುದ್ಧ ಸಂಗೀತವನ್ನು ನೀಡಿ ದೇಶದ ಅತಿ ದೊಡ್ಡ ಪ್ರಶಸ್ತಿಗಳನ್ನೂ ತನ್ನ ಕಾಲ ಬಳಿಗೆ ಕೆಡಹಿಕೊಂಡ ಹಿರಿಯ ಚೇತನ ನೌಷಾದ್.

1957ರಲ್ಲಿ ನೌಷಾದ್‌ರ ಮಹತ್ವಾಕಾಂಕ್ಷೆಯ ಚಿತ್ರವಾಗಿದ್ದ 'ಬೈಜೂಬಾವರಾ' ಬಿಡುಗಡೆಯಾ ಯಿತು. ಮೀನಾಕುಮಾರಿ, ಭರತ್‌ಭೂಷಣರ ನಟನೆ ಒಂದು ತೂಕವಾದರೆ ನೌಷಾದ್ ಮಾಡಿದ ಸಾಹಸದ್ದು ಮತ್ತೊಂದು ತೂಕ. ಹಿಂದೂಸ್ತಾನಿ ಸಂಗೀತದ ದಿಗ್ಗಜರಾದ ಉಸ್ತಾದ್ ಅಮೀರ್ ಖಾನ್ ಮತ್ತು ಪಂಡಿತ್ ಡಿ.ವಿ.ಪಲೂಸ್ಕರರನ್ನು ಒಲಿಸಿ, ಹಾಡಿಸಿದ ಯುಗಳ ಗೀತೆ, ''ಆಜ್ ಗವತ್ ಮನ ಮೋರೋ ಝೂಮಕೇ'' ಕೇಳಿ ಇಡೀ ಶ್ರೋತೃ ಸಮೂಹ ಪರವಶವಾಯಿತು. ಈ ಗೀತೆಗೆ ಕಳಶವಿಟ್ಟಂತೆ ಅದರ ಅಂತ್ಯದ ಸಿತಾರ್ ವಾದನ ರಸಿಕರೆದೆ ತಣಿಸಿತು. ಬೈಜೂ ತನ್ನ ಗೀತೆ ಯೊಂದರ ಮೂಲಕ ಕಲ್ಲಿನ ಮೂರ್ತಿಯ ಕಣ್ಣೀರು ಕೆದರುವ ದೃಶ್ಯಕ್ಕೆ ದೇಸಿ ತೋಡಿಯನ್ನಾ ಧರಿಸಿದ ಗೀತೆ ಕೇಳಿಸಿದ ನೌಷಾದ್ ಚಿತ್ರ ಪ್ರೇಮಿ ಗಳ ಮೇಲೆ ತಮ್ಮ ಶಾಶ್ವತ ಛಾಪನ್ನೊತ್ತಿದರು.

ಚಿತ್ರ ಪ್ರಾರಂಭಕ್ಕೆ ಮುನ್ನ ತೋರಿಸುವ ಟೈಟಲ್ ಕಾರ್ಡಿಗೆ ಶಾಸ್ತ್ರೀಯ ಗಾಯನದ ಹಿನ್ನೆಲೆ ನೀಡುವಂಥ ರಿಸ್ಕ್ ಕೇವಲ ನೌಷಾದರಂ ಥವರು ಮಾತ್ರ ತೆಗೆದುಕೊಳ್ಳಲು ಸಾಧ್ಯ. ಅಮೀರ್‌ಖಾನ್ ಹಾಡಿದ ಪೂರಿಯಾ ಧನಾಶ್ರೀ ರಾಗ ಇಡೀ ಟೈಟಲ್ ಕಾರ್ಡನ್ನು ಆವರಿಸಿತ್ತು. ಮುಂದೆ ಇದೇ ಚಿತ್ರದಲ್ಲಿ ತಾನ್‌ಸೇನ್ ಪಾತ್ರದ ಬಾಯಲ್ಲಿ ದರ್ಬಾರಿ ಕಾನಡಾ ರಾಗವನ್ನು ಹಾಡಿಸಿ ಶ್ರೋತೃಗಳಿಗೆ ರೋಮಾಂಚನ ಪೂದಗಿಸಿದರು ನೌಷಾದ್.

ಅವರ ಬದುಕೇ ಹಾಗೆ. ಶ್ರದ್ಧೆಗೆ, ನಿರಂತರ ಕೃಷಿಗೆ ಫಲ ಸಿಕ್ಕದೆ ಹೋಗಲಿಲ್ಲ. 1960ರಲ್ಲಿ ಕೆ.ಆಸೀಫ್‌ರ 'ಮೊಘಲ್-ಎ-ಆಜಂ' ನೌಷಾದ್ ಬದುಕಿನ ಅತಿ ಶ್ರೇಷ್ಠ ಕೊಡುಗೆಯಾಗಿ ಹೊರ ಬಂತು. ಇಡೀ ಹಿಂದೂಸ್ತಾನದಲ್ಲಿ ಅದರ ರೆಕಾ ರ್ಡುಗಳು ಝೇಂಕರಿಸಿದವು. ಈ ಚಿತ್ರದಲ್ಲಿ ನೌಷಾದ್ ಮಾಡಿದ ಮತ್ತೊಂದು ಸಾಹಸವೆಂ ದರೆ ಘಜಲ್ ಮತ್ತು ಠುಮರಿ ಗಾಯಕ ಉಸ್ತಾದ್ ಬಡೆ ಗುಲಾಮ ಅಲಿಖಾನ್‌ರಿಂದ ಸೊಹನಿ ರಾಗ ದಲ್ಲಿ 'ಪ್ರೇಮ ಜೋಗನ ಬನಕೇ' ಹಾಡನ್ನು ಹಾಡಿಸಿದ್ದು. ಮತ್ತೊಂದು ಗೀತೆ 'ಶುಭ ದಿನ ಆಯೆ .....' ರಾಗೇಶ್ರೀ ರಾಗದಲ್ಲಿ ಪುಟಿದು ಬಂತು. ಸಾಲದೆಂಬಂತೆ ಲತಾ ಮಂಗೇಶ್ಕರರಿಂದ

ಗಾರಾ ರಾಗದಲ್ಲಿ 'ಮೋಹೆ ಪನ್‌ಘಟ ಪೇ ನಂದ ಲಾಲ್ .....' ಹಾಡು ತೇಲಿ ಬಂತು! ಒಂದು ಚಿತ್ರ ರಸಿಕರೆದೆಗೆ ಸ್ಥಿರವಾಗಿ ನಾಟುವುದಕ್ಕೆ ಮತ್ತೇನು ಬೇಕು? ಇಂಥ ಗಂಧರ್ವ ಸೃಷ್ಟಿ ನೌಷಾದರಿ ಗಲ್ಲದೆ ಮತ್ಯಾರಿಗೆ ಸಾಧ್ಯ?

ಏಕೆಂದರೆ ನೌಷಾದ್ ಸಂಗೀತವನ್ನು ಒಂದು ಆರಾಧನೆಯಂತ ಕಂಡವರು. ಹುಚ್ಚನಂತೆ ಅನು ಭವಿಸಿದವರು. ನಾರದ ಮತ್ತು ತುಂಬುರರು ಸೃಷ್ಟಿಸಿದ ಸಂಗೀತದ ಮೂಲ ಆರು ರಾಗಗಳಾದ ಭೈರವ್, ಹಿಂಡೋಲ, ಮೇಘ, ಶ್ರೀ, ದೀಪಕ ಮತ್ತು ಮಾಲಕೌಂಸ್‌ಗಳಿಲ್ಲದೆ ಯಾವ ಸಂಗೀತ ಸೃಷ್ಟಿಯೂ ಸಾಧ್ಯವಿಲ್ಲವೆಂದು ನಂಬಿದವರು. ''ಸೂರ್ಯೋದಯದ ಮೊದಲಿನ ಭೈರವ್, ಶಿವಸ್ತುತಿ ಸಮಯದ ಹಿಂಡೋಲ್, ಮಧ್ಯಾಹ್ನದ ಮೇಘ, ಗೋಧೂಳಿ ಸಮಯದ ಶ್ರೀ, ದೀಪ ಹಚ್ಚುವ ಸಮಯದ ದೀಪಕ್, ರಾತ್ರಿಯ ಮಾಲ ಕೌಂಸ್ ..... ಇವೆಲ್ಲ ಹರಿದು ಬಂದರೇನೇ ಅಲ್ಲವೆ ಒಂದು ದಿನ ಅರ್ಥಪೂರ್ಣವಾಗಿ ಸರಿ ಯುವುದು? ಸಂಗೀತ ಪರಂಪರೆಯ ಈ ಸ್ತಂಭಗ ಳಿಲ್ಲದೆ ಸಂಗೀತವಿಲ್ಲ. ಅದಿಲ್ಲದೆ ನಾನಿಲ್ಲ .....'' ಇದು ನೌಷಾದರ ಸಿದ್ಧಾಂತ. ಇದೇ ಸಮೀಕರಣವನ್ನು ಅವರು ವೃತ್ತಿಯಲ್ಲಿ ಚಲಾ ಯಿಸಿದ್ದಾರೆ. ಅದರಂತೆಯೇ ಜೀವಿಸಿದ್ದಾರೆ.

ಕಳೆದ ಐವತ್ತು ವರ್ಷಗಳ ಸರಿದಾಟದಲ್ಲಿ ರಾಕ್ ಅಂಡ್ ರೋಲ್, ಡಿಸ್ಕೋ, ಛಾ ಛಾ ಛಾ, ರುಂಬಾ-ಸಂಬಾದಂತಹ ಅನೇಕ ಪಾಶ್ಚಾತ್ಯ ಹುಚ್ಚಾಟಗಳು ಬಂದವು - ಹೋದವು. ಆದರೆ ಮೂಲ ಆರು ರಾಗಗಳನ್ನು ಹಿಡಿದು ಸಾಧಿಸಿದ ಗೀತೆಗಳು ಮಾತ್ರ ಇಂದಿಗೂ ಬದುಕಿವೆ. ಇವತ್ತಿನ ಆಧುನಿಕ ಸಂಗೀತಕ್ಕೂ ಈ ಮೂಲ ರಾಗಗಳ ಆಧಾರ ಇಲ್ಲದಿಲ್ಲ.

ನೌಷಾದರ ಈ ವಾದಕ್ಕೆ ಇಲ್ಲೊಂದು ಸಷ್ಟನೆ

ುವೆ. ಇತ್ತೀಚೆಗೆ ತಾವು ಸೃಜಿಸಿದ 'ಆವಾಜ್ ದೇ ಕಹಾಂ ಹೈ' ಚಿತ್ರದ ಹಾಡಿನ ಗತಿಯಲ್ಲಿ ಪಹಾಡಿ ರಾಗದಿಂದ ಶುರುವಾಗಿ ತಿಲಾಂಗಕ್ಕೆ ಮುಟ್ಟಿ, ಮುಂದೆ ಭೈರವಿಯಿಂದ ಪೀಲೂವರೆಗೆ ನಡೆಯು ವುದು, ಅಲ್ಲದೇ ಅದೇ ಮಟ್ಟವನ್ನು ಕಾಯ್ದು ಕೊಂಡು ಯಾವುದೇ ಲೋಪವಿಲ್ಲದೆ ಮುಗಿಯು ವುದು. ಈ ಚಿತ್ರದಲ್ಲಿ ನೌಷಾದ್ ಲತಾ ಮಂಗೇಶ್ಕರರ ಬದಲಾಗಿ ಅನೂರಾಧಾ ಪೋದ್ವಾಲರಿಂದ ಹಾಡಿಸಿದ್ದಾರೆ ಎಂಬುದೊಂದೇ ದೊಡ್ಡ ಬದಲಾವಣೆ. ಅಷ್ಟು ಬಿಟ್ಟರೆ ಐವತ್ತು ವರ್ಷಗಳ ಹಿಂದಿನ ಅವರ 'ಶಾಸ್ತ್ರೀಯ'ದ ಮೋಹ ಇನ್ನೂ ಅಳಿದಿಲ್ಲ. ಇಷ್ಟೆಲ್ಲ ಸಾಧಿಸಿದ ಈ ಮಹಾನ್ ಋಷಿಗೆ ಇನ್ನಾದರೂ 'ಪದ್ಮಭೂಷಣ' ಲಭಿಸಿಲ್ಲ. 'ಆದರೇನಂತೆ, ಆದು ನನ್ನ ಗರಡಿಯ ಹುಡುಗಿ ಲತಾಗೆ ಬಂದಿದೆ' ಎಂದು ತಮ್ಮ ಟಿಪಿಕಲ್ ಲಖನವೀ ಶೈಲಿಯಲ್ಲಿ ಹೇಳಿ ನಗುತ್ತಾರೆ ನೌಷಾದ್.

ಆದರೆ ಸಿನಿ ಜಗತ್ತಿನ ಶ್ರೇಷ್ಠ ಪ್ರಶಸ್ತಿಯಾದ 'ಫಾಲ್ಕೆ' ಲತಾಳಿಗಿಂತ ಮುಂಚೆ ನೌಷಾದ್‌ಗೆ ಬಂತು. ಒಂದು ನೋವಿನ ಸಂಗತಿಯೆಂದರೆ ಈಗ ಲತಾ ನೌಷಾದರಿಗಾಗಿ ಹಾಡುವುದಿಲ್ಲ. ''ಅದು ನನ್ನಿಷ್ಟ! ಸಂಗೀತ ನಿರ್ದೇಶಕನೆಂದರೆ ಮಾಲೀಕನೇ ಹೊರತು ಗುಲಾಮನಲ್ಲ. ಸಾರ್ವಜನಿಕ ಬೇಡಿಕೆಗೆ ನಾನು ಬಾಗಲಾರೆ. ಲತಾಳನ್ನು ಬಿಟ್ಟೂ ಸಂಗೀತವಿದೆ. ಅನೂರಾಧಳನ್ನು ನಾನು ಬೆಳೆಸುತ್ತೇನೆ!'' ಎಂಬುದು ನೌಷಾದರ ಸಿಂಹದನಿ. ಇದು ನೂರಕ್ಕೆ ನೂರು ಸತ್ಯ. ಲತಾ ಇಲ್ಲದೆ ನೌಷಾದರ ಸಂಗೀತವಿದೆ. ಆದರೆ ಲತಾಳನ್ನು ಗುರ್ತಿಸುವಾಗ ನೌಷಾದರನ್ನು 'ಕೋಟ್' (Quote) ಮಾಡದೆ ಇರಲಾಗದು. ಉದಾಹರಣೆ ಕೊಡಲು ನಿಂತರೆ ಅದೆಷ್ಟು ಹಾಡುಗಳೋ, ಅದೆಷ್ಟು ರಾಗಗಳೋ! ಪಹಾಡಿ ರಾಗದ 'ತೋಡ್‌ದಿಯಾದಿಲ್ ಮೇರಾ' (ಅಂದಾಜ್), ಯಮನ್ ರಾಗದಲ್ಲಿ ಹಾಡಿಸಿದ 'ಜಾನೆ ವಾಲೋಂಸೆ ಮುಲಾಕಾತ್ ನ ಹೋನೇ ಪಾಯೇ' (ಅಮರ್), ಬಿಹಾಗ್ ರಾಗದ 'ತೇರ ಪ್ಯಾರ್ ಮೆ ದಿಲ್‌ದಾರ್' (ಮೆರೆ ಮೆಹಬೂಬ್), ತಿಲಾಂಗ್ 'ಮೇರೇ ಜೀವನ್ ಸಾಥೀ' (ಸಾಥೀ) ದಂತಹ ಯಾವುದೇ ರಾಗದ ಹೆಸರು ಹೇಳಿ, ನೌಷಾದ್ ಲತಾಳನ್ನು ಆ ರಾಗದಲ್ಲೇ ಸುತ್ತಿಸಿದ್ದಾರೆ. ಈ ತಾಲೀಮು ಮತ್ತ್ಯಾವ ಸಂಗೀತ ನಿರ್ದೇಶಕ ಮಾಡಿದ್ದಾನೆ?

''ಭಾರತೀಯ ಸಂಗೀತವನ್ನು ಚಿತ್ರರಂಗದಲ್ಲಿ ಉಳಿಸುವುದರಲ್ಲಿ ನನ್ನ ಪಾಲೂ ಇದೆಯೆಂದು ಗುರ್ತಿಸಿದರೆ ಅಷ್ಟೇ ಸಾಕು, ನಾನು ಧನ್ಯ'' ಎಂಬ ಮಾತನ್ನು ನೌಷಾದ್ ಮನಃಪೂರ್ತಿಯಾಗಿ ಹೇಳಿದ್ದಾರೆ. ಅದು ಅವರ ಸಭ್ಯತೆಯ ಪರಮಾವಧಿ. ಐವತ್ತು ವರ್ಷಗಳ ಅವಧಿಯಲ್ಲಿ ಮೂರು ತಲೆಮಾರುಗಳ ಗಾಯಕರಿಂದ ಹಾಡಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಪ್ರಾರಂಭದಲ್ಲಿ ಕುಂದನ್‌ಲಾಲ್ ಸೈಗಲ್, ನೂರ್‌ಜಹಾನ್, ಸುರೈಯ್ಯಾ, ಉಮಾದೇವಿ, ಜೋಹ್ರಾಬಾಯಿ ಅಂಬಾಲಾವಾಲಿ ಮುಂತಾದವರು ನೌಷಾದ್ ಗರಡಿಯಲ್ಲಿ ದುಡಿದುದು ಒಂದು ಯುಗ. ಮುಂದೆ ರಫಿ, ತಲತ್, ಮುಕೇಶ್, ಲತಾ, ಆಶಾ, ಸುಮನ್‌ಕಲ್ಯಾಣಪೂರ್ ದುಡಿದುದು ಎರಡನೇ ಯುಗ. ಈಗ ಅನೂರಾಧಾ ಪೋದ್ವಾಲ್-ಹಸನ್ ಕಮಾಲರ ದನಿಗಳು ಪಳಗುತ್ತಿವೆ. ತಮ್ಮ ಎಪ್ಪತ್ತರ ಇಳಿವಯಸ್ಸಿನಲ್ಲೂ ಸ್ಥಿರವಾಗಿ ನಿಂತು ಗುಂಗು ಹಿಡಿಸಬಲ್ಲ ಹಾಡು ಮೂಡಿಸುವ ನೌಷಾದ್‌ರನ್ನು ಈ ವಿಷಯದಲ್ಲಿ ಧಾರಾಳವಾಗಿ ಎಸ್.ಡಿ.ಬರ್ಮನ್‌ರಿಗೆ ಹೋಲಿಸಬಹುದು.

ನೌಷಾದ್‌ರನ್ನು ಟೀಕಿಸಿದವರೂ ಇದ್ದಾರೆ. 'ಜೀನಿಯಸ್' ಅನ್ನಿಸಿಕೊಳ್ಳಬಲ್ಲ ಗಾಯಕರನ್ನು ಹಿಡಿದು ಹಾಡಿಸಿದ ನೌಷಾದ್ ಕಳಪೆ ಗಾಯಕರಿಂದ ಹಾಡಿಸಿ 'ರಿಸ್ಕ್' ತೆಗೆದುಕೊಳ್ಳಲಿಲ್ಲ ಎಂಬುದು ಅತಿ ದೊಡ್ಡ ಟೀಕೆ. ಅದು ನಿಜವೂ ಹೌದು. ಕಿಶೋರ್ ಕುಮಾರನನ್ನು ನೌಷಾದ್ ಒಬ್ಬ ಶ್ರೇಷ್ಠ ಗಾಯಕನೆಂದು ಪರಿಗಣಿಸಲೇ ಇಲ್ಲ. 'ಸೋಹನಿ ಮಹಿವಾಲ್'ನಲ್ಲಿ ಮಹೇಂದ್ರ ಕಪೂರರನ್ನು ಪರಿಚಯಿಸಿದರಾದರೂ ಅಲ್ಲಿಗೇ ಕೈ ಬಿಟ್ಟರು. ಆಶಾ ಭೋಸ್ಲೆ, ಉಷಾ ಎಲ್ಲರೂ ಒಂದೆರಡು ಬಾರಿ ದನಿಯೆತ್ತಿದರು ಅಷ್ಟೆ. ನೌಷಾ

ದರು ಅತಿ ಹೆಚ್ಚು ದುಡಿಸಿಕೊಂಡದ್ದು ಲತಾಳನ್ನು ಮಾತ್ರ. ಲತಾಗಿಂತ ಶಾಶ್ವತವಾಗಿ ಉಳಿದ ಗಾಯಕ ಮಹ್ಮದ್ ರಫಿ.

ಅದೊಂದು 'ಫಾರ್ಮುಲಾ' ಇತ್ತು. ಶಕೀಲ್ ಬದಾಯುನಿ ಮತ್ತು ಮಜರೂಹ್ ಸುಲ್ತಾನ್ ಪುರಿಯಂಥ ಕವಿಗಳ ಗೀತೆಗಳು, ದಿಲೀಪ್ ವೈಜಯಂತಿ ಥರದ ನಟನಟಿಯರು, ಅಸೀಫ್, ಮೆಹಬೂಬ್‌ರಂಥ ನಿರ್ಮಾಪಕ ನಿರ್ದೇಶಕರು, ಲತಾ-ರಫಿಯಂಥ ಗಾಯಕರು ಇದಕ್ಕೆ ಕಳಶಪ್ರಾಯರಾಗಿ ನೌಷಾದ್ ..... ಹೇಳಿ ಇಂಥ ಟೀಮಿಗಿಂತ ಮತ್ತೇನಾದರೂ ಬೇಕೆ?

ಇಂಥದೇ 'ಫಾರ್ಮುಲಾಗಳು' ರಾಜ್ ಕಪೂರ್, ದೇವ್‌ಆನಂದ್, ಗುರುದತ್, ಶಾಂತಾರಾಂ, ಬಿಮಲ್‌ರಾಯ್‌ರ ಯೂನಿಟ್ಟುಗಳಲ್ಲೂ ಇದ್ದವು. ಆದರೆ ನೌಷಾದ್ ಕಂಡ ಗೆಲವು ಮತ್ಯಾರೂ ಕಾಣಲಿಲ್ಲ. ರಫಿಯಂತಹ ಗಾಯಕನನ್ನು ಕಟೆದು ನಿಲ್ಲಿಸಿದವರೇ ನೌಷಾದ್ ಎನ್ನುವವರಿದ್ದಾರೆ. ರಫಿ ಅಷ್ಟು ಒಳ್ಳೆ ಹಾಡುಕೊಟ್ಟನೋ ಅಥವಾ ನೌಷಾದ್ ಅಷ್ಟು ಚೆನ್ನಾಗಿ ಪಳಗಿಸಿಕೊಂಡರೋ ಗೊತ್ತಿಲ್ಲ. ಆದರೆ ಮತ್ಯಾರೂ ರಫಿಯ ಮಟ್ಟಕ್ಕೇರಲಿಲ್ಲ.

ಈ ಐವತ್ತು ವರ್ಷಗಳಲ್ಲಿ ನೌಷಾದರ ಕಣ್ಣೆದುರಿನಲ್ಲೇ ನೂರಾರು ಜನ ಸಂಗೀತ ನಿರ್ದೇಶಕರು ಬಂದು-ನಿಂತು-ಮರೆತೂ ಹೋಗಿದ್ದಾರೆ. ಆದರೆ ಸಚಿನ್‌ದೇವ್ ಬರ್ಮನ್, ಶಂಕರ್ ಜೈಕಿಶನ್, ಸಿ.ರಾಮಚಂದ್ರ, ಎಸ್.ಎನ್.ತ್ರಿಪಾಠಿ ಮತ್ತು ಓ.ಪಿ.ನಯ್ಯರ್ ಬಿಟ್ಟರೆ ಮತ್ಯಾರೂ ನೌಷಾದರ ಆಜೂಬಾಜು ಸುಳಿಯುವಷ್ಟು ಕೂಡ ಅರ್ಹರಾಗಿ ಕಾಣಲಿಲ್ಲ. ಸಚಿನ್‌ದೇವ್ ಬರ್ಮನ್‌ರ ಸಂಗೀತಕ್ಕೆ ಪಹಾಡಿ ಸೊಗಡಿದೆ. ಜಾನಪದ ಮಿಶ್ರಣಗಳ ಛಾಪಿದೆ. ಶಂಕರ್ ಜೈಕಿಶನ್ ಜೋಡಿ ಸೃಜಿಸಿದ್ದು ಜನಪ್ರಿಯ ಸಂಗೀತ ಮತ್ತು ಶಾಸ್ತ್ರೀಯ ಎರವಲು. (ಉದಾಹರಣೆಗೆ 'ಬಸಂತ್ ಬಹಾರ್' ಚಿತ್ರ ಸಂಗೀತ) ಇನ್ನು ಮದನ್ ಮೋಹನ್ ಗಜಲುಗಳಿಗೇ ತಮ್ಮನ್ನು ಸೀಮಿತ ಮಾಡಿಕೊಂಡರು. ಸಿ.ರಾಮಚಂದ್ರ




ರದು ಪಾಶ್ಚಿಮಾತ್ಯ ಮಸಾಲಾ ಮಿಶ್ರಣ. ಓ.ಪಿ.ನಯ್ಯರ್‌ರಿಗೆ ಪಂಜಾಬಿ 'ಟಚ್' ವಿಪರೀತವಾಗಿತ್ತು. ಈ ಎಲ್ಲ ನಿರ್ದೇಶಕರೂ ನಿರ್ಮಾಪಕರ ಬೇಡಿಕೆಗಳಿಗೆ ಅನುಗುಣವಾಗಿ ವಾದ್ಯ, ಶೈಲಿ, ಧಾಟಿಗಳನ್ನು ಬದಲಿಸಿದರು. ಆದರೆ ಒಬ್ಬ ನೌಷಾದ್ ಮಾತ್ರ ಅದೇ ಪುರಾತನ ಶಾಸ್ತ್ರೀಯ ಸಂಗೀತಕ್ಕೆ ಅಂಕಿತವಾಗಿ ಉಳಿದರು. ಇವರಷ್ಟೇ ನಿಷ್ಣಾತ ನಿರ್ದೇಶಕರಾದ ಎಸ್.ಎನ್.ತ್ರಿಪಾಠಿ ಇಡೀ ಚಿತ್ರವನ್ನು ಯಶಸ್ವಿಗೊಳಿಸುವ ಗತ್ತಿಲ್ಲದೆ ಸೋತರೆಂಬುದು ಸತ್ಯ. ಎಷ್ಟೋ ಚಿತ್ರಗಳು ನಟ, ನಟಿ, ನಿರ್ದೇಶಕರನ್ನೂ ಮೀರಿ ಕೇವಲ ನೌಷಾದರ ಗಾನ ಸೃಷ್ಟಿಯ ಬಲದಿಂದಲೇ ಓಡಿದವು. ರಾಜೇಂದ್ರಕುಮಾರ್ ನಟಿಸಿದ 'ಸಾಥಿ'ಯಂತಹ ಕಳಪೆ ಚಿತ್ರ ಕೂಡ ಸಿಲ್ವರ್ ಜುಬಿಲಿ ಕಂಡದ್ದು ನೌಷಾದರ ಸಂಗೀತದ ಕೃಪೆಯಿಂದ!

ತಮ್ಮ ಐವತ್ತು ವರ್ಷಗಳ ಸುದೀರ್ಘ ಸಿನೆಮಾ ಬದುಕಿನಲ್ಲಿ ನೌಷಾದ್ ಐವತ್ತಕ್ಕಿಂತ ಹೆಚ್ಚು ಚಿತ್ರಗಳಿಗೆ ಸಂಗೀತ ನೀಡಿಲ್ಲವೆಂಬುದು ಅಚ್ಚರಿಯ ಸಂಗತಿ. ಆದರೆ ಆ ಐವತ್ತರಲ್ಲಿ ಇಪ್ಪ

ತ್ತೈದು ಚಿತ್ರಗಳು ಸಿಲ್ವರ್ ಜುಬಿಲಿ ಕಂಡವು. ಒಂಬತ್ತು ಗೋಲ್ಡನ್ ಜುಬಿಲಿ ಓಡಿದರೆ ಎರಡು ಡೈಮಂಡ್ ಜುಬಿಲಿ ಸಾಧಿಸಿದವು! ಸಾಲದೆ ಒಬ್ಬ ವ್ಯಕ್ತಿಯ ಸಾಧನೆಗೆ ಇಷ್ಟು ಕಿರೀಟಗಳು? ನೌಷಾದರ ಜಾಗದಲ್ಲಿ ಮತ್ತೊಬ್ಬನಿದ್ದಿದ್ದರೆ ಎರಡು ಸಾವಿರ ಚಿತ್ರಗಳನ್ನು ಮಾಡಿ ತೋಪೆದ್ದು ಹೋಗುತ್ತಿದ್ದನೇನೋ.

ಒಂದು ಕಾಲಕ್ಕೆ ಪ್ರಖ್ಯಾತ ಎಚ್.ಎಂ.ವಿ. ಕಂಪೆನಿ ನಡೆದದ್ದೇ ನೌಷಾದರ ಸಂಗೀತದಿಂದ. ಕೇವಲ ಹಾಡುಗಳಲ್ಲ, ಬರೀ ಹಿನ್ನೆಲೆ ಸಂಗೀತವನ್ನೇ 'ಡಿಸ್ಕ್'ಗಳನ್ನಾಗಿ ಮಾಡಿ ಮಾರಿದ ಕೀರ್ತಿ ನೌಷಾದರಿಗೆ ಸಲ್ಲುತ್ತದೆ.

ದಿಲೀಪ್‌ಕುಮಾರ್ ಮತ್ತು ನೌಷಾದರ ಮಧ್ಯೆ ಒಂದು ಅನನ್ಯ ಸಂಬಂಧವಿದೆ. ನೌಷಾದ್ ಸಂಗೀತ ಯಶಸ್ಸು ಕಾಣಬೇಕಾದರೆ ನಟನೆಗೆ ದಿಲೀಪ್ ಇರಲೇಬೇಕು ಎಂದು ವಾದಿಸುವ ಕಾಲವೂ ಇತ್ತು. ಅದನ್ನೆಲ್ಲ ಸುಳ್ಳಾಗಿಸಿ ರಾಜೇಂದ್ರಕುಮಾರ್ ನಟಿಸಿದ 'ಮೇರೆ ಮೆಹಬೂಬ್' ಚಿತ್ರಕ್ಕೆ ಸಂಗೀತ ನೀಡಿ ಟೀಕಿಸಿದವರನ್ನು ನಿಬ್ಬೆರಗಾಗಿಸಿದರು ನೌಷಾದ್. ಇಷ್ಟಾದರೂ ದಿಲೀಪ್-ನೌಷಾದ್‌ರಲ್ಲಿ ಹೋಲಿಕೆಗಳಿವೆ. ಇಬ್ಬರೂ ಕಳೆದು ಐವತ್ತು ವರ್ಷಗಳಿಂದ ಚಿತ್ರರಂಗದಲ್ಲಿ ನೆಲೆ ನಿಂತಿದ್ದಾರೆ. ಇಬ್ಬರೂ 'ವರ್ಷಕ್ಕೊಂದೇ ಚಿತ್ರ'ವೆಂಬ ಕರಾರಿಗೆ ಬದ್ಧರಾಗಿದ್ದಾರೆ. ಮತ್ತು ಇದೇ ದಿಲೀಪ್-ನೌಷಾದ್ ಜೋಡಿ 1964ರಿಂದ 1968ರ ತನಕ ಸೃಜಿಸಿದ ಚಿತ್ರಗಳು ಸಾಲಾಗಿ ನೆಲ ಕಚ್ಚಿದವು. ದಿಲ್ ದಿಯಾ ದರ್ದ್ ಲಿಯಾ, ಆದ್ಮಿ ಮತ್ತು ಸಂಘರ್ಷ್ ಚಿತ್ರಗಳ ನಂತರ ನೌಷಾದರ ಮೇಲೆ ಸೋಲಿನ ಛಾಯೆ ಬಿತ್ತು. ಇನ್ನಾದರೂ ಶಾಸ್ತ್ರೀಯ ಗುಂಗು ಬಿಡಿರೆಂದು ಎಲ್ಲರೂ ಒತ್ತಾಯಿಸಿದರು. ಸರಿ, 'ಸಾಥಿ' ಚಿತ್ರಕ್ಕೆ ಸ್ವಲ್ಪ ಭಿನ್ನವಾದ ಸಂಗೀತ ನೀಡಿದರು ನೌಷಾದ್. ಅದೂ ನೆಲ ಕಚ್ಚಿತು! ಮತ್ತೆ ಹಳೆಯ ಮನೆಗೇ ಮರಳಿದ ನೌಷಾದ್ ಶಾಸ್ತ್ರೀಯ ಸಂಗೀತದಲ್ಲಿ ಸ್ಥಿರವಾದರು.

ನೌಷಾದರು ಲತಾಳನ್ನು ಪಳಗಿಸುವುದಕ್ಕಿಂತ ಮುಂಚೆ ಶಂಷಾದ್ ಬೇಗಂ ಅವರ ಮುಖ್ಯ ಗಾಯಕಿಯಾಗಿದ್ದಳು. ಆಕೆಯ ಪ್ರಕಾರ, ನೌಷಾದರ ವಿಶೇಷವೆಂದರೆ ರೆಕಾರ್ಡಿಂಗ್‌ಗೆ ಮುಂಚೆ ಶಬ್ದದ ಮತ್ತು ಸಾಲುಗಳ ನಡುವಿನ 'ಮ್ಯೂಸಿಕಲ್ ಪೀಸ್' ಹಾಗೂ 'ಪಿಚ್' ತಿಳಿಯುತ್ತಿರಲಿಲ್ಲ. ಆದರೆ ಸ್ಟುಡಿಯೋದಲ್ಲಿ ನೌಷಾದ್ ಹಾರ್ಮೋನಿಯಂ ಹಿಡಿದು ಕೂತರೆ ಸಾಕು, ಎಲ್ಲವೂ ಹಾರ್ಮೋನಿಯಂ ಮೇಲೆ ತಯಾರಿರುತ್ತಿತ್ತು! ಕೇವಲ ಶಬ್ದ ಜೋಡಿಸಿ ಹಾಡಿ ಬಿಟ್ಟರೆ ಅಲ್ಲಿಗೆ ಗಾಯಕಿಯ ಕೆಲಸ ಮುಗಿಯಿತು. ಇಂಥ ಅಚ್ಚುಕಟ್ಟುತನ ಮತ್ಯಾರಿಗಿದೆ? 'ಅಂದಾಜ್' ಚಿತ್ರದ ''ಹಮ್ ಆಜ್ ಕಹೀ ದಿಲ್ ಖೋ ಬೈಠೇ .....'' ಗೀತೆಯ ರಿಹರ್ಸಲ್‌ಗಾಗಿ ಮುಕೇಶ್ ಮೂವತ್ತು ಸಲ ನೌಷಾದರ ಮನೆಗೆ ಹೋಗಿದ್ದರಂತೆ! ರಫಿ ಪ್ರತಿನಿತ್ಯ ಬರುತ್ತಿದ್ದರಂತೆ. ಸೈಗಲ್ ಕೂಡ ನೌಷಾದರ ಮಾತಿಗೆ ಪಿಟ್ಟೆನ್ನದೆ ರಿಹರ್ಸಲ್ಲಿಗೆ (ಕುಡಿಯದೆ!) ಕೂಡುತ್ತಿದ್ದರಂತೆ. ಅಂತೆಯೇ ಮೂರು ನಿಮಿಷಗಳ ಗೀತೆಯಾದ 'ಚಾಹೆ ಬರ್‌ಬಾದ್ ಕರೇಂಗೆ .....' ಗೀತೆ ಬಾಗೇಶ್ರೀ ರಾಗದಲ್ಲಿ ಅಮೋಘವಾಗಿ ಮೂಡಿ ಬರಲು ಸಾಧ್ಯವಾಯಿತು. ಈಗಿನ ನಿರ್ದೇಶಕರಿಗೂ, ಗಾಯಕರಿಗೂ ಇಂಥ ಶ್ರದ್ಧೆ ಎಲ್ಲಿದೆ? ಅದಕ್ಕೆಂದೇ ಹಾಡುಗಳು ಜೀವ ಕಳೆದುಕೊಂಡು 'ಏಕ್ ದೋ ತೀನ್ ಚಾರ್' ಆಗಿ ಹೋಗಿವೆ.

ಇವತ್ತು ತಮ್ಮ ಎಪ್ಪತ್ತನೆಯ ವಯಸ್ಸಿನಲ್ಲಿ ನೌಷಾದ್ ದೂರದರ್ಶನ ಧಾರಾವಾಹಿಯಾದ 'ಟೀಪೂ'ಗೆ ತಯಾರಿಸಿರುವ ಆ ಇಂಪೀರಿಯಲ್ ಸಂಗೀತ ಕೇಳಿ ನೋಡಿ ...... ಅದೇ ಹಳೆಯ ಠೀವಿ, ರಾಜತ್ವ ಮತ್ತು ಗಾಂಭೀರ್ಯಗಳ ಸಂಕಲನ ಅಲ್ಲಿ ಮೂರ್ತಿವೆತ್ತು ನಿಂತಿದೆ. ಅಂದಿನ ಜೋಹ್ರಾಬಾಯಿ ಅಂಬಾಲಾವಾಲಿಯಿಂದ ಇವತ್ತಿನ ಅನೂರಾಧಾ ಪೋಡ್ವಾಲ್ ತನಕ ನೌಷಾದರ ಶುದ್ಧ ಸಂಗೀತದ ತೀರ್ಥಯಾತ್ರೆ ಸಾಗಿ ಬಂದಿದೆ.

1919ರಲ್ಲಿ ಲಖನೌದ ಸಾಂಪ್ರದಾಯಿಕ ಮನೆಯೊಂದರಲ್ಲಿ ಜನಿಸಿದ ನೌಷಾದ್ ಬಾಲ್ಯದಲ್ಲಿ ಕದ್ದು ಸಿನಮಾ ನೋಡಿದವರು. ಮನೆಯ

ಲ್ಯಾರೂ ಸಂಗೀತ ಬಲ್ಲವರಿಲ್ಲ. ಅವತ್ತಿನ ಸಿನೆಮಾಗಳಲ್ಲಿ ಹಾಡಿನ ದೃಶ್ಯದ ಜೊತೆಗೆ ಬ್ಯಾಂಡ್ ಬಾರಿಸುವವರ ಮೇಳವೂ ಕಾಣುತ್ತಿತ್ತು. ಆ ಮೇಳಕ್ಕೂ, ಗಾಯಕರಿಗೂ ನಡುವೆ ಹೊಂದಾಣಿಕೆ ಹೇಗೆ ಸಾಧ್ಯ ಎಂಬುದೇ ನೌಷಾದರ ಅತಿ ದೊಡ್ಡ ಪ್ರಶ್ನೆ ಮತ್ತು ಆಕರ್ಷಣೆಯಾಯಿತು. ಮುಂದೆ ಸಂಗೀತವಾದ್ಯ ಮಾರುವ ಅಂಗಡಿಯೊಂದರಲ್ಲಿ ಕೆಲಸಕ್ಕೆ ಸೇರಿಕೊಂಡರು ನೌಷಾದ್. ನಾಟಕದ ಗೀಳು ಶುರುವಾಯಿತು. ಅದರ ಆರ್ಕೆಸ್ಟ್ರಾದಲ್ಲಿ ಸೇರಿಕೊಂಡು ಊರೂರು ಅಲೆದು ದಿವಾಳಿಯಾಗಿ ಊರಿಗೆ ಮರಳಿ ಬಂದರು. ಮುಂದೆ 1937ರಲ್ಲಿ ಮುಂಬಯಿಗೆ ಬಂದು ಹೆಡ್ಮಾಸ್ತರರೊಬ್ಬರ ಮನೆಯಲ್ಲಿ ಉಳಿದುಕೊಂಡರು. ಈ ಮಧ್ಯೆ ಅವರು ಹ್ಯಾರಿ ಡರೋಟಿಸ್‌ರವರ ಚಿತ್ರ ನಿರ್ಮಾಣ ತಂಡಕ್ಕೆ ಕಾಲಿಟ್ಟು ನಲವತ್ತು ರೂಪಾಯಿಗಳ ಸಂಬಳದ ಮೇಲೆ ಬದುಕು ಪ್ರಾರಂಭಿಸಿದ್ದರು. 1940ರಲ್ಲಿ ಸ್ವತಂತ್ರವಾಗಿ ಎಂ. ಭಾವನಾನಿಯವರ 'ಪ್ರೇಮನಗರ್' ಚಿತ್ರಕ್ಕೆ ಸಂಗೀತ ನೀಡುವ ಯೋಗ ಬಂತು. ಮತ್ತೆ ನೌಷಾದ್ ತಿರುಗಿ ನೋಡಲಿಲ್ಲ. ಕೆಲ ಕಾಲ ಸುರಯ್ಯಾಳನ್ನು ತಮ್ಮ ರಾಗಗಳ ಮೇಲೆ ಪ್ರಯೋಗಿಸಿ ನೋಡಿದರು. ಯಶಸ್ಸು ಅವರ ಬೆನ್ನು ಬಿತ್ತು. ರತನ್, ಬೈಜೂಬಾವರಾ, ಅನೋಖಿ ಅದಾ, ಮದರ್ ಇಂಡಿಯಾ, ದೀದಾರ್, ಸನ್ ಆಫ್ ಇಂಡಿಯಾ, ದಿಲ್ಲಗಿ, ದಾಸ್ತಾನ್, ಶಬಾಬ್ ..... ಒಂದೇ ಎರಡೇ! 1943ರಿಂದ 1957ರ ನಡುವಿನ ಕಾಲವನ್ನು ನೌಷಾದರ ಬದುಕಿನ ವಸಂತ ಋತುವೆನ್ನಬಹುದು. ಜುಬಿಲಿಗಳ ಸಾಲೇ ಅವರನ್ನು ಮೆರೆಸಿತು. ಮುಂದೆ 1960ರ ತನಕ ಅನಾರೋಗ್ಯ ಕಾಡಿತ್ತು. ಅದರಿಂದ ಚೇತರಿಸಿಕೊಂಡು ಫೀನಿಕ್ಸ್ ಹಕ್ಕಿಯಂತೆ ಪುನರ್ಜನ್ಮ ಪಡೆದ ನೌಷಾದ್ ಮತ್ತೆ ಅಮೋಘ ಸಂಗೀತ ನೀಡಿದರು. ಆದರೆ ಕವಿ ಶಕೀಲ್ ಬದಾಯುನಿ ಸಾವು ಅವರನ್ನು ಕಂಗೆಡಿಸಿತು. ಪತ್ನಿಯ ಮರಣದ ಹೊಡೆತವೂ ನೌಷಾದರನ್ನು ತೊಂದರೆಗೀಡು ಮಾಡಿತು. ಆದರೆ ಐದು ದಶಕಗಳ ಕಾಲ ನೌಷಾದ್ ಸೃಷ್ಟಿಸಿದ ಸಂಗೀತ ಒಂದು ಸುದೀರ್ಘ ಆಲಾಪವಾಗಿ, ಮಾನವೀಯ ಪ್ರೇಮ - ಆವೇಗಗಳ ಸಂಕಲನವಾಗಿ ಕಂಗೊಳಿಸಿದೆ ಎಂಬುದು ಅಪ್ಪಟ ಸತ್ಯ.

●





# ಹುಟ್ಟಿನಿಂದಲೇ ವೃದ್ಧರು ..!

ಎಮ್. ಎನ್. ಕಂಬಳಿ

ಆತ ರಬ್ಬರು ಗೊಂಬೆಗೆ ಪ್ರಾಣ ಬಂದರೆ ಹೇಗಿರುತ್ತದೋ ಹಾಗಿರುತ್ತಾನೆ. ಹುಟ್ಟಿದಾಗಿನಿಂದಲೂ ಕೂದಲುಗಳಿಲ್ಲ. ಮೂಗು ಸೊಟ್ಟ ತಿರುಗಿರುತ್ತದೆ. ಮುಂದಿನ ಹಲ್ಲುಗಳಿಲ್ಲ. ಕಣ್ಣಿನ ಹುಬ್ಬುಗಳಿಲ್ಲ. ಕಣ್ಣಿನ ರೆಪ್ಪೆಗಳಿಗೂ ಕೂದಲುಗಳಿಲ್ಲ. ಇಲಿ ಕಿವಿಗಳಂತೆ ಸೆಟೆದು ನಿಂತಿರುವ ಕಿವಿಗಳು, ಸೊಟ್ಟ ತಿರುಗಿದ ಕಾಲುಗಳು. ಅತ್ಯಂತ ಬಲಹೀನವಾದ ಶರೀರ. ಗಾಳಿಗೆ ಹಾರಿ ಹೋಗುವ ಆಕೃತಿಯುಳ್ಳ ವ್ಯಕ್ತಿ ಹೆಸರು ಜೇಸನ್ ಎಲ್ಲಿಸನ್. ಇಂತಹ ವ್ಯಕ್ತಿಗಳು ಪ್ರಪಂಚದಲ್ಲಿ ಇದ್ದಾರೆಯೇ ಎಂದು ಆಶ್ಚರ್ಯವಾಗುತ್ತದೆ.

'ಪ್ರೊಜೇರಿಯಾ' ಎಂಬುದು ಒಂದು ವಿಚಿತ್ರ ವ್ಯಾಧಿಯ ಹೆಸರು. ಇದು ಸೋಕಿದವರಿಗೆ ನೂರು ವರ್ಷ ಜೀವನ ಅನುಭವಿಸಿದ ಶರೀರದಲ್ಲಾಗುವ ಬದಲಾವಣೆಗಳು ಅತಿ ಚಿಕ್ಕ ವಯಸ್ಸಿನಲ್ಲಿಯೇ ಉಂಟಾಗುತ್ತವೆ. ಪ್ರಪಂಚದಲ್ಲಿ ಈ ವ್ಯಾಧಿಯಿಂದ ಬದುಕಿದವರು ಹದಿನೈದು ಜನರಿಗಿಂತಲೂ ಹೆಚ್ಚಿಗೆ ಇಲ್ಲ. ಈ ವ್ಯಾಧಿಯುಳ್ಳವರು ಹನ್ನೆರಡು ವರ್ಷಕ್ಕಿಂತ ಜಾಸ್ತಿ ಬದುಕಿದ ದಾಖಲೆ ಇಲ್ಲ. ಜೇಸನ್ ಎಲ್ಲಿಸನ್ನನ ವಯಸ್ಸು 15 ವರ್ಷಗಳು. ಈತನೊಬ್ಬನೇ ಬದುಕುಳಿದು ಎಲ್ಲರನ್ನೂ ಆಶ್ಚರ್ಯಗೊಳಿಸುತ್ತಿದ್ದಾನೆ. ನೂರು ವರ್ಷ

ಗಳು ದಾಟಿ ಬದುಕುತ್ತಿರುವ ವ್ಯಕ್ತಿಗಳು ಕಾಣಸಿಗುವುದು ಅಪರೂಪ. ಅದರಂತೆ ಪ್ರೊಜೇರಿಯಾ ವ್ಯಾಧಿಯಿಂದ ನರಳುತ್ತಿರುವವರು ಕೂಡಾ 12 ವರ್ಷಗಳಿಗಿಂತಲೂ ದಾಟಿ ಬದುಕಿರುವುದು ಅಪರೂಪವಾದ ವಿಷಯ.

ನಾಲ್ಕು ಅಡಿಗಳ ಎತ್ತರವುಳ್ಳ ಜೇಸನ್ ತೂಕ 20 ಕಿ.ಗ್ರಾಂ. ಜೇಸನ್ ತಾಯಿ ಕೇಥಿ ಎಲ್ಲಿಸನ್. ಆಕೆಗೆ ಮೊದಲ ಗಂಡನಿಂದ ಇಬ್ಬರು, ಎರಡನೆ ಗಂಡನಿಂದ ಅವಳಿ ಮಕ್ಕಳಿದ್ದಾರೆ. ಜೇಸನ್ನನ ತಂದೆ ತೀರಿಕೊಂಡಿದ್ದಾನೆ. ಸಾಕು ತಂದೆ, ಜನ್ಮ ನೀಡಿದ ತಾಯಿ ಇದ್ದಾರೆ. ನೂರು ವರ್ಷ ಆಯಸ್ಸು ಹೊತ್ತು ಹುಟ್ಟಿದ ಜೇಸನ್ನನಿಂದ ಆತನಿಗೆ ನೌಕರಿ ಕೊಟ್ಟ 'ಫ್ಯೂಚರ್ ಲಿಡರ್ಸ್' ಎಂಬ ವಿಕ್ರಯ ಶಾಲೆ ಒಳ್ಳೆ ಲಾಭಗಳನ್ನು ಗಳಿಸಿತು. ವಿಚಿತ್ರವಾದ ಮನುಷ್ಯ ಅಂಗಡಿಯ ಮುಂದೆ ಇರುವುದರಿಂದ ರಸ್ತೆಯಲ್ಲಿ ಹೋಗುತ್ತಿರುವವರು ಆಕರ್ಷಿತರಾಗಿ ಅಂಗಡಿಗೆ ಬರುವುದು, ಅಲ್ಲಿಂದ ವಸ್ತುಗಳನ್ನು ಖರೀದಿಸುವುದು ಜರುಗುತ್ತದೆ. ಆ ಕಂಪನಿ ಜೇಸನ್‌ಗೆ 'ಉತ್ತಮ ವಿಕ್ರಯದಾರ' ಎಂಬ ಅವಾರ್ಡು ನೀಡಿ ಸತ್ಕರಿಸಿತು.

ಜೇಸನ್‌ಗೆ ಆನಂದವನ್ನುಂಟು ಮಾಡುವ ವಿಷಯ ಒಂದಿದೆ. ವರ್ಷದಲ್ಲಿ ಒಂದು ವಾರ ಕಾಲ ತನ್ನಂತೆ 'ಪ್ರೊಜೇರಿಯಾ' ಬಂದವರೊಡನೆ ಸಮುದ್ರ ತೀರಗಳಲ್ಲಿ ವಿಹರಿಸುತ್ತಾನೆ. 1982ರಲ್ಲಿ ಫಿಲಡೆಲ್ಫಿಯಾಗೆ ಸೇರಿದ 'ಸನ್‌ಷೈನ್ ಫೌಂಡೇಷನ್' ಪ್ರಪಂಚದಲ್ಲಿರುವ ಪ್ರೊಜೇರಿಯಾ ಇದ್ದವರನ್ನೆಲ್ಲಾ ಒಂದೆಡೆ ಸೇರಿಸಿ ಅವರ ಖರ್ಚನ್ನು ಭರಿಸುತ್ತದೆ. ಆತನನ್ನು ತಮಾಷೆ ಮಾಡುವವರು ಹೆಚ್ಚು. ಒಮ್ಮೆ ಒಬ್ಬ ವ್ಯಕ್ತಿ "ನೀನು ಯಾವಾಗ ಸಾಯುತ್ತಿ?" ಎಂದು ಜೇಸನ್ನನ್ನು ಪ್ರಶ್ನಿಸಿದ. ಹಾಗೆ ಪ್ರಶ್ನಿಸುವುದು ಅಮಾನುಷ. ಆದರೂ ಜೇಸನ್ನ ಕೂಡಲೇ "ನೀನು ಯಾವಾಗ ಸಾಯುತ್ತಿ?" ಎಂದು ಮರು ಪ್ರಶ್ನೆ ಹಾಕಿದನಂತೆ. ಈ ವ್ಯಾಧಿ ಸೋಕಿದವರಿಗೆ ಶರೀರದಲ್ಲಿ ಬರುವ ಬದಲಾವಣೆಗಳು ಇರುವುದಿಲ್ಲ. ಜೀವನದಲ್ಲಿ ಆಸೆ, ಸಾಧಿಸಬೇಕೆಂಬ ಛಲ ಇವರಿಗೆ ಇರುವುದಿಲ್ಲ. ಮಾನಸಿಕವಾಗಿ ಇವರಿಗೆ ತಾವು ಬಹಳ ಕಾಲ ಬದುಕುವುದಿಲ್ಲ ಎಂದು ತಿಳಿದುಬಿಡುತ್ತದೆ.



ಜೇಸನ್ನನ ವಯಸ್ಸು ಹದಿನೈದು ದಾಟಿದೆ. ಬಗ್ಗುವುದು ಆಗುವುದಿಲ್ಲ. ಶರೀರ ಬಗ್ಗಲು ಅನುಕೂಲವಾಗದಂತೆ ಗಟ್ಟಿಯಾಗಿದೆ. ಗಿಟಾರ್ ಬಾರಿಸುವುದು. ಕ್ಯಾಸೆಟ್ ಕೇಳುವುದು ಅಭಿರುಚಿ. ಶಾಲೆಯಿಂದ ಅಂಗಡಿಗೆ! ಸಂಪಾದನೆ ಹಣದಿಂದ ತನಗೆ ಬೇಕಾದ ವಸ್ತುಗಳನ್ನು ಖರೀದಿಸಿದ್ದಾನೆ. ಒಂದು ದಿನ ಎಲ್ಲರೂ ಊಟಕ್ಕೆ ಕುಳಿತಾಗ ಇದ್ದಕ್ಕಿದ್ದಂತೆ "ನಾನು ಸತ್ತ ಮೇಲೆ ಇಲ್ಲೇ ಆ ಸೇಬುಹಣ್ಣುಗಳ ಮರಗಳ ನಡುವೆ ಸಮಾಧಿ ಮಾಡಿರಿ. ನಿಮಗೆ ಹತ್ತಿರದಲ್ಲೇ ಇರುತ್ತೇನೆ" ಎಂದ. ಆತನಿಗೂ ಗೊತ್ತು ತಾನು ಬಹಳ ದಿನ ಬದುಕುವುದಿಲ್ಲ. ಎಂದು. ಆದರೂ ಇನ್ನೂ 13 ವರ್ಷ ಬದುಕಬೇಕೆಂಬ ಆಸೆ. ಹಾಗೆ ಜಾಗತಿಕ ದಾಖಲೆ ಮಾಡಬೇಕೆಂಬುದು ಆತನ ಆಸೆ. ಆ ಆಸೆ ಈಡೇರುತ್ತದೋ ಇಲ್ಲವೋ ಕಾಲವೇ ನಿರ್ಣಯಿಸುತ್ತದೆ. ●

# ಸೀರೆ v/s ಸಲ್ವಾರ್ ಖಮೀಜ್




'ಪ್ರಭಾ'

ನಿಮ್ಮ ಹೆಂಡತಿ, ಎರಡು ಮಕ್ಕಳ ತಾಯಿ ಹಿಂದಿ ಸಿನಿಮಾ ನೋಡಿಕೊಂಡು ಬಂದ ಮೇಲೆ 'ರೀ ಸಲ್ವಾರ್ ಖಮೀಜ್ ಹೊಲಿಸ್ಕೋತಿನಿ' ಎಂದರೆ ನೀವು ಏನು ಉತ್ತರ ಕೊಡ್ತೀರಿ? ನಾನೂ ನನ್ನ ಹೆಂಡತಿಗೆ ಅದೇ ಉತ್ತರ ಕೊಟ್ಟೆ. 'ಸಲ್ವಾರ್ ಖಮೀಜು ಮಕ್ಕಳ ತಾಯಂದಿರಿಗೆ ಸರಿ ಹೋಗುಲ್ಲ ಬೇಡ' ಎಂದೆ. ಹಿಂದಿ ಸಿನೆಮಾದಲ್ಲಿ ಹೀರೋಯಿನ್ನು ಸಲ್ವಾರ್ ಖಮೀಜ್ ಹಾಕಿಕೊಂ

ಡಿದ್ದನ್ನು ನೆನಪಿಸಿದಳು. 'ಹೀರೋಯಿನ್ನು ಮದುವೆಗೆ ಮೊದಲು ಅದನ್ನು ಹಾಕಿಕೊಂಡಿದ್ದು. ಆಮೇಲೆ ಅಂದರೆ ಮದುವೆ ಆದ ನಂತರ ಅವಳು ಸೀರೇನೇ ಅಲ್ಲವೇ ಉಟ್ಟುಕೊಂಡಿದ್ದು?' ಎಂದೆ.

ಇಂತಹ ಸಮಯದಲ್ಲಿ ಮಾಮೂಲಾಗಿ ಆಗುವಂತೆ 'ರೀಸನಿಂಗು' ಹಿಂದಿನ ಬೆಂಚಿಗೆ ಹೋಯಿತು; ಡಿಮ್ಯಾಂಡು ಮುಂದಿನ ಬೆಂಚಿಗೆ ಬಂದಿತು. ಮುಂದಿನ ಬೆಂಚೇನು ಎದುರಿನ ಟೇಬಲ್ಲಿನ ಮೇಲೇ ಬಂದು ಕೂತಿತು. ನಾನು ನನ್ನ ಖುರ್ಚಿ ಮೇಲೆ, ಈ ಡಿಮ್ಯಾಂಡು ನನ್ನ ಎದುರಿನ ಟೇಬಲ್ಲಿನ ಮೇಲೆ ಹೀಗಾಯಿತು. ಟೇಬಲ್ಲಿನ ಈ ಕಡೆ ಖುರ್ಚಿ ಮೇಲೆ ಕುಳಿತಿದ್ದ ನನಗೆ ಅದರ ಅನುಭವ ಶುರು ಆಯಿತು. ಅನ್ನ ಬೆಂದಿರಲಿಲ್ಲ, ಹುಳಿ ಪೂರ್ತಿ ಹಸಿಮೆಣಸಿನಪುಡಿ ಘಾಟು, ಪಲ್ಯಕ್ಕೆ ಖಾರ ಜಾಸ್ತಿ, ಮೊಸರು ಹೆರ್ತಿರಲಿಲ್ಲ; ಇದರೊಂದಿಗೆ 'ನಾನು ಕೇಳಿದ್ದು ಐದು ಪೈಸೇದು ಯಾವತ್ತಾದರೂ ನೀವು ಕೊಡಿಸಿದ್ದೀರಾ?' ಎನ್ನುವ ಚುಚ್ಚು ಮಾತು. ಇಂತಹ ಚುಚ್ಚು ಮಾತುಗಳು ಗಂಡಸರ ಹೃದಯ ಕತ್ತರಿಸುತ್ತವೆ.

'ಐದು ಪೈಸೆಗೆ ಏನು ಸಿಗುತ್ತೆ ಅಂತ ನಾನು ನಿನಗೆ ಕೊಡಿಸಿಲ್ಲ?' ಎಂದೆ. 'ಐದು ಪೈಸೇದೇ ಕೊಡಿಸಕ್ಕೆ ಆಗದೇ ಇದ್ದವರು ಬೇರೆ ಇನ್ನೇನು ತಾನೇ ಕೊಡಿಸ್ತೀರೀ?' ಎಂದು ತಿರುಗಿ ಕೇಳಿದ್ದಳು.

'ಎಪ್ಪತ್ತು ಸಾವಿರ ಸಾಲ ಮಾಡಿ ಒಂದೂವರೆ ಲಕ್ಷದ ಮನೆ ಕಟ್ಟಿಸಿ ಮನೆ ಮುಂದೆ ನಿನ್ನ ಹೆಸರೇ ಕಲ್ಲಿನಲ್ಲಿ ಕೆತ್ತಿಸಿ ಹಾಕಿಲ್ಲವೇ?' ಎಂದೆ.

'ಮನೆ ನನಗೆ ಅಂತಲೇನೂ ಕಟ್ಟಿಸಲಿಲ್ಲ. ನಿಮಗೇ ಬೇಕಾಗಿತ್ತು, ಕಟ್ಟಿಸಿಕೊಂಡ್ರಿ..' ಎಂದು ಮೊಂಡುವಾದ ಹೂಡಿದಳು. ಈ ವಾದಗಳಿಂದ ನನ್ನ ಬಾಯಿ 'ಬಂದ್' ಆದ ನಂತರ ಎಲ್ಲ ಗಂಡಂದಿರೂ ಮಾಡುವಂತೆಯೇ ಮಾಡಿದೆ. ಸಲ್ವಾರ್ ಖಮೀಜ್‌ಗೆ 'ಪರ್ಮಿಷನ್' ಕೊಟ್ಟೆ. ಅಂದರೆ ನಾನು ಸೋತೆ!

ನಾನೂರೂ ಚಿಲ್ರೆ ಸಾಲ ಮಾಡಿ ಹೆಂಡತಿಯನ್ನು ಅಂಗಡಿಗೆ ಕರೆದುಕೊಂಡು ಹೋಗಿ ಮೂರು ದಿವಸ ಪೂರ್ತಿ ಬಟ್ಟೆ ಹುಡುಕಿದೆ. ನಾಲ್ಕನೇ ದಿವಸ ಸಿಕ್ಕಿದ ''ಆರಿಸಲಾದ'' ಬಟ್ಟೆಯನ್ನು ಕಮರ್ಷಿಯಲ್ ಸ್ಟ್ರೀಟ್‌ನಲ್ಲಿರೋ ಟೈಲರ್ ಹತ್ತಿರ ಹೊಲಿಯಲು ಹಾಕಲು ಹೋದೆವು. ಟೈಲರು ಇವಳ ಅಳತೆ ತೆಗೆದುಕೊಳ್ಳಲು ಟೇಪನ್ನು ಎಲ್ಲೆಲ್ಲೋ ತೂರಿಸಿ ಇವಳ ದೇಹವನ್ನು ಎಲ್ಲೆಲ್ಲೋ ಮುಟ್ಟುತ್ತಿರಬೇಕಾದರೆ ಇಂತಹ ಪಾಡು ಬೇರೆ ಯಾವ ಗಂಡಸಿಗೂ ಬರದೇ ಇರಲಿ ಅಂತ ಬೇರೆ ಗಂಡಸರಿಗೆ ಶುಭ ಹಾರೈಸಿದೆ. ನಾನಾದರೂ ಟೈಲರು ಆಗಬಾರದಿತ್ತೇ ಅಂತ ಹಲಬಾರಿ ಅನಿಸಿದ್ದೂ ಉಂಟು.

ನೂರಾಎಂಬತ್ತು ಕೂಲಿ ಕೊಟ್ಟು ಸಲ್ವಾರ್ ಖಮೀಜನ್ನು ಹೆಂಡತಿ ಹೊತ್ತು ಮನೆಗೆ ತಂದಳು. 'ಹಾಕ್ಕೋಬಾರದಾ?' ಎಂದೆ, ಅದು ಒಂದು ವಾರ ಆದರೂ ಬೀರೂನಲ್ಲೇ ಇದ್ದದ್ದು ನೋಡಿ. 'ಆರನೇ ತಾರೀಖು ಹಾಕ್ಕೋತೀನ್ರೀ ....' ಎಂದಳು. ಆರನೇ ತಾರೀಖು ಏನು ಮುಹೂರ್ತ ಅಂತ ಪಂಚಾಂಗ ಹುಡುಕಿದೆ. ಏನೂ ತಿಳೀಲಿಲ್ಲ. ಅವಳನ್ನೇ ಕೇಳಿದೆ. '..ಡೇಟು ಸರಿ ಇದ್ರೆ ಅವತ್ತು ನನ್ನ ಐನೀರು ...' ಎಂದಳು ಕೋಪಿಸಿಕೊಂಡು. ಸರಿ ಅಂತ ತೆಪ್ಪಗಾದೆ.

ಆರನೇ ತಾರೀಖು ಬಂದಿತು. ಬೆಳಿಗ್ಗೆ ಎದ್ದು ಕೆಲಸಕ್ಕೆ ಹೋದೆ. ಸಂಜೆ ಮನೆಗೆ ಬಂದೆ. ಯಾಕೋ ಕ್ಯಾಲೆಂಡರ್ ಕಡೆ ನೋಡಿದಾಗ ಆರನೇ ತಾರೀಖಿನ ಮೇಲೆ ನಾನೇ ಎಳೆದಿದ್ದ ರೆಡ್ ಮಾರ್ಕು ಕಾಣಿಸಿತು. ಹೆಂಡತಿ ಇನ್ನೂ ಸೀರೇಲೇ ಇದ್ದಳು.

'ಇವತ್ತು ಆರನೇ ತಾರೀಖು..' ಎಂದೆ. 'ನಿನ್ನೆ ಐದು, ನಾಳೆ ಏಳು.' ಅಂತ ಕ್ರಾಸ್ ವರ್ಡ್ ಫಜಲ್ ಮಾದರಿ ಉತ್ತರ ಬಂದಿತು.

'ಅಲ್ಲಾ ನಾನು ಕೇಳಿದ್ದು .....'

'.. ನೀವು ಕೇಳಿದ್ದಲ್ಲಾ ಹೇಳ್ತಿರೋದೂ ...' ಎಂದು ತಿದ್ದಿದಳು. ಸರಿ, ಹೆಂಡತಿಯೇ ಮೊದಲ ಗುರು ಅಂತ ಅದ್ಯಾರೋ ಪುಣ್ಯಾತ್ಮ ಹೇಳಿದ್ದಾನಂತೆ. ತಪ್ಪು ತಿದ್ದಿಕೊಂಡು ಹೇಳಿದೆ. 'ಇವತ್ತು ಆರನೇ ತಾರೀಖು. ನೀನು ಸಲ್ವಾರ್ ಖಮೀಜನ್ನು

## ಕತ್ತಲು

**ನನ್ನ ಹೊರಕತ್ತಲು ಈ ಥಳ ಥಳ ಹೊಳೆಯುವ ಚುಕ್ಕಿ ಚಂದ್ರಾಮ ವಿದ್ಯುತ್ ಬೆಳಕಿನ ಬಲದಿಂದ ಅಳಿಸಿ ಹಾಕಲು ಬಹುದು ಆದರೆ ನನ್ನ ಒಳಕತ್ತಲನ್ನು ಯಾವ ಸೂರ್ಯ ಶಕ್ತಿಯಿಂದ ಅಳಿಸಿ ಹಾಕಲುಬಹುದು ಹೇಳು ಗೆಳತಿ**

**● ಚೆನ್ನಣ್ಣ ವಾಲೀಕಾರ**

ಧರಿಸಬೇಕಾದ ದಿವಸ ....'

'ರಾತ್ರಿ ಹಾಕ್ಕೋತೀನಿ ...'

'ರಾತ್ರಿ ಹಾಕ್ಕೊಳ್ಳೋಕ್ಕೆ ನೈಟ್ ಗೌನ್ ಸಾಕು. ನೂರಾಎಂಬತ್ತು ಕೂಲಿ ಕೊಟ್ಟು ನಾನ್ನೂರು ರೂ ಬೆಲೆ, ಬಟ್ಟೆ ತಂದು ಅದನ್ನ ರಾತ್ರಿ ಹಾಕ್ಕೋಳ್ಳೋದು ಅಂದರೆ? ಅಷ್ಟು ದುಡ್ಡಿಗೆ ಆರುನೂರು ಬೈ ಮೂವತ್ತು ಅಂದರೆ ಇಪ್ಪತ್ತು ನೈಟ್ ಗೌನ್ ಬರ್ತಿತ್ತು ..' ಅಂದೆ. ನನಗೇನು ಜಗಳ ಕಾಯಲು ಬರೋಲ್ವೇ?

'ಮಕ್ಕಳು ಮಲಗಲೀ ರೀ. ರಾತ್ರಿ ಹಾಕ್ಕೊಂಡು ಸರಿಯಾಗಿದೆಯಾ ನೋಡ್ತೀನಿ..' ಹೆಂಡತಿ ಮೂಡು ಚೆನ್ನಾಗಿತ್ತು, ರೇಗಲ್ಲಿಲ್ಲ!

ಚೆಲ್ಲಿರೋ ಹಾಲು ಇದು. ದುಃಖಪಡಬಾರದು ಅಂತ ವೈರಾಗ್ಯ ತಂದುಕೊಂಡೆ. ರಾತ್ರಿ, ಮಕ್ಕಳು ಮಲಗಿದ ನಂತರ ಹೆಂಡತಿ ಒಂದು ಘಂಟೆ ಕಷ್ಟಪಟ್ಟು ಸಲ್ವಾರ್ ಖಮೀಜು ಧರಿಸಿದಳು. 'ಚೆನ್ನಾಗಿದೆಯಾ?' ಎಂದಳು. 'ಭೇಷಾಗಿದೆ' ಎಂದೆ. 'ಇಲ್ಲಿ ಸ್ವಲ್ಪ ಟೈಟು ಅನಿಸೋಲ್ಲವಾ?' ಅಂತ ಬೆನ್ನಿನ ಗುಂಡಿ ಹಾಕೋ ಕಡೆ ತೋರಿಸಿದಳು. 'ಇಲ್ಲ ಸರಿಯಾಗಿದೆ' ಎಂದೆ. 'ಇಲ್ರೀ ಇಲ್ಲಿ ಟೈಟು..' ಅಂತ ಬೆನ್ನಿನ ಭಾಗ ತೋರಿಸಿದಳು. 'ಇಲ್ಲಿ ಹಿಡಿಯುತ್ತೆ ..' ಅಂತ ಕಂಕುಳ ತೋರಿಸಿದಳು. 'ಇಲ್ಲಿ ಕೊರೆಯುತ್ತೆ..' ಅಂತ ತೊಡೆ ಹತ್ತಿರ ಸವರಿಕೊಂಡಳು. 'ಇಲ್ಲಿ ಗಾಳಿನೇ ಓಡಾಡೋಲ್ಲ' ಎಂದು ಎದೆ ಭಾಗ ತೋರಿಸಿದಳು.

'ಸರಿ ನಾಳೆ ಹೋಗಿ ಟೈಲರ್ ಹತ್ತಿರ ರಿಪೇರಿ ಮಾಡಿಸು ..'

'ಟೈಲರ್ ಯಾಕೆ? ನಾನೇ ಒಂದೆರಡು ಹೊಲಿಗೆ ಬಿಚ್ಚಿ ಹಾಕ್ಕೋತೀನಿ ..'

ಮತ್ತೆ ಒಂದೆರಡುವಾರ ಹೊಲಿಗೆ ಬಿಚ್ಚೋದು, ಹೊಲಿಗೆ ಹಾಕೋದೂ ಇವೇ ಕೆಲಸಗಳು ನಡೆದವು. ಆಮೇಲೆ ಒಂದು ದಿವಸ ಸಲ್ವಾರ್ ಖಮೀಜ್ ಧರಿಸಿ ಕನ್ನಡಿ ಮುಂದೆ ನಿಂತು ತನ್ನನ್ನೇ ತೃಪ್ತಿಯಿಂದ ನೋಡಿಕೊಂಡಳು. 'ಈಗ ಸರಿ ಇದೆ' ಅಂತ ತೃಪ್ತಿಯ ನಗೆ ನಕ್ಕಳು. ಸಲ್ವಾರ್ ಖಮೀಜಿನಲ್ಲಿ ಹೆಂಡತಿಯನ್ನ - ನನ್ನ ಹೆಂಡತಿಯನ್ನು - ಎಲ್ಲರೂ ದೃಷ್ಟಿಸುವುದು ನೆನೆದು ನಾನು ಭಾರವಾದ ನಿಟ್ಟುಸಿರುಬಿಟ್ಟೆ.

'ನಿಮ್ಮ ಅಣ್ಣನ ಮಗಳ ಮದುವೆಗೆ ನಾನು ಇದನ್ನೇ ಹಾಕ್ಕೊಳ್ಳೋದೂ ..' ಅಂತ ಒಂದು ಬಾಂಬು ಎಸೆದಳು. ಬಾಂಬ್ ದಾಳಿಯಿಂದ ನಿಧಾನಕ್ಕೆ ಚೇತರಿಸಿಕೊಂಡೆ. 'ಅದಕ್ಕೆ ಮೊದಲೇ ಒಂದೆರಡು ದಿವಸ ಮನೇಲೇ ಹಾಕಿಕೊಂಡು ಅಭ್ಯಾಸ ಮಾಡಿಕೋ ...' 'ನಿಮ್ಮನ್ನ ಮದುವೆ ಆಗೋಕ್ಕೆ ಮೊದಲು ಇದನ್ನೇರೀ ನಾನು ಹಾಕಿಕೊಳ್ತಾ ಇದ್ದದ್ದು. ಅದಕ್ಕೆ ಅಭ್ಯಾಸ ಯಾಕೆ?' ಎಂದು ದಬಾಯಿಸಿಬಿಟ್ಟಳು; ತೆಪ್ಪಗಾದೆ.

ಪೇಪರಿನಲ್ಲಿ ಯಾವುದೋ ದೇಶದವರು ಸೀರೆ ನಿಷೇಧ ಮಾಡಿರೋದು ಓದಿದೆ. ಹೆಂಡತೀನ ಕೂರಿಸಿಕೊಂಡು ಸಲ್ವಾರ್ ಖಮೀಜಿನಲ್ಲಿರುವ ತೊಂದರೆಗಳು, ಸೀರೆಯಲ್ಲಿರುವ ಪ್ಲಸ್ ಪಾಯಿಂಟುಗಳು ಇವುಗಳನ್ನು ಕುರಿತು ಹೇಳಿದೆ. ಟಾಯ್ಲೆಟ್‌ಗೆ ಹೋಗೋದರಿಂದ ಹಿಡಿದು ಮಗೂಗೆ ಹಾಲು ಕುಡಿಸುವವರೆಗೆ ಇರೋ ತೊಂದರೆಗಳನ್ನು ವಿವರಿಸಿದೆ. 'ಮದುವೆ ಮನೆಗೆ ಎರಡು ಮಕ್ಕಳ ತಾಯಿ ಸಲ್ವಾರ್ ಖಮೀಜ್ ಧರಿಸಿ ಹೋಗೋದೂಂದರೆ ಎಲ್ಲರೂ ತಮಾಷೆ ಮಾಡ್ತಾರೆ' ಎಂದೆಲ್ಲಾ ಹೇಳಿದೆ. ಹೆಂಡತಿ ಯಾವುದಕ್ಕೂ ಜಪ್ಪಯ್ಯ ಅನ್ನಲಿಲ್ಲ. 'ಮದುವೆ ಮನೆಗೆ ನಾನು ಬರಬೇಕು ಅಂತ ನಿಮಗೆ ಇಷ್ಟ ಇದ್ದರೆ ನಾನು ಈ ಡ್ರೆಸ್ಸಲ್ಲೇ ಬರೋದು ರೀ ...' ಎಂದುಬಿಟ್ಟಳು. ಮದುವೆ ಮನೆಗೆ ಇವಳನ್ನು ಈ ಡ್ರೆಸ್ಸಿನಲ್ಲಿ ಕರೆದುಕೊಂಡು ಹೋಗಿ ಅಲ್ಲಿಗೆ ಬಂದಿರೋ ಮುದುಕರ ಎದುರಿಗೆ ಛಡಾಯಿಸಿ

ಕೊಳ್ಳುವ ಸ್ಥಿತಿಯಲ್ಲಿ ನಾನು ಇರಲಿಲ್ಲ. ಸರಿ ಆ ಸಮಯಕ್ಕೆ ಯಾವುದಾದರೂ ಐಡಿಯಾ ಹೊಳಿಬ ಹುದು ಅಂತ ಕಾದೆ. ನಿಧಾನವೇ ಪ್ರಧಾನ ಅಂತ ಅದ್ಯಾರೋ ಹೇಳಿದರಂತೆ. ಸ್ಲೋ ಅಂಡ್ ಸ್ಟಡಿ ವಿನ್ ದಿ ರೇಸ್ ಅಂತ ಒಂದು ಇಂಗ್ಲೀಷ್ ಗಾದೆ ಯಿದೆ. ಅದೇ ರೀತಿ ಹೂ ಲಾಫ್ಸ್ ಲಾಸ್ಟ್ ಲಾಫ್ಸ್ ಮೋರ್ ಅಂತ ಮತ್ತೂ ಒಂದು ಇಂಗ್ಲೀಷ್ ಗಾದೆ ಇದೆಯಂತೆ.

ಮದುವೆಗೆ ಮೂರು ದಿವಸ ಮೊದಲೇ ಬಾ ಅಂತ ಆಹ್ವಾನ ಬಂದಿತು. ಹೆಂಡತಿ ಸಲ್ವಾರ್ ಖಮೀಜನ್ನು ಜೋಪಾನವಾಗಿ ಟ್ರಂಕಿನಲ್ಲಿಟ್ಟು ಕೊಂಡು ಮದುವೆ ಮನೆಗೆ ಬಂದಳು.

ವರಪೂಜೆ ದಿವಸ ಸಲ್ವಾರ್ ಖಮೀಜು ಆಚೆ ತೆಗೆದಳು. 'ಈಗ ಬೇಡ ನಾಳೆ ಹಾಕ್ಕೋ .. ಎಲ್ಲರೂ ಬಂದಿರ್ತಾರೆ. ಈಗಲೇ ಹಾಕಿಕೊಂಡರೆ ಬೆಳಿಗ್ಗೆಗೆ ಮುದುರುತ್ತೆ, ಕೊಳೆ ಆಗುತ್ತೆ ..' ಅಂತ ಕನ್‌ವಿನ್ಸ್ ಮಾಡಿ ಸೀರೆ ಉಟ್ಟುಕೊಳ್ಳುವಂತೆ ಮನ ಒಲಿಸುವಲ್ಲಿ ಯಶಸ್ವಿಯಾದೆ. ಬೀಸೋ ದೊಣ್ಣೆ ತಪ್ಪಿದರೆ ಸಾವಿರ ವರ್ಷ ಆಯಸ್ಸಂತೆ..

ರಾತ್ರಿ ಮಲಗಿದಾಗ ಈ ಸಲ್ವಾರ್ ಖಮೀಜು ತಪ್ಪಿಸಲು ಏನು ಮಾಡಬೇಕು ಅಂತ ಯೋಚಿಸಿದೆ. ಉಪಾಯ ಹೊಳೀಲಿಲ್ಲ. ಬದಲಿಗೆ ನಿದ್ದೆ ಕೂಡ ತಪ್ಪಿತು. ಅಪ್ಪಿತಪ್ಪಿ ಮಂಪರು ಹತ್ತಿದಾಗ ಊರಿನಲ್ಲಿರೋ ಮುದುಕರೆಲ್ಲಾ ಸೇರಿ ನನ್ನನ್ನು ಛುಡಾಯಿಸುತ್ತಿರುವ ಭಯಂಕರ ಕನಸು ಬಿದ್ದು ಎಚ್ಚರವೂ ಆಯಿತು. ನಿದ್ದೆ ಮತ್ತೆ ಹತ್ತಿರ ಸುಳಿಯದೆ ತಲೆ ಭಾರ ಆಯಿತು. ತಲೆ ನೋವೂ ಶುರು ಆಯಿತು. ಬೆಳಗಿನ ಜಾವ ಎದ್ದೆ. ತಲೆ ಸಿಡಿತ ಜಾಸ್ತಿಯಾಗಿತ್ತು. ಮದುವೆ ಮನೆಗೆ ಬರಬೇಕಾದರೇ ತಂದಿದ್ದ ತಲೆನೋವಿನ ಮಾತ್ರೆ ಎಲ್ಲಿ ಅಂತ ಆಗಲೇ ಎದ್ದು ಸ್ನಾನಕ್ಕೆ ರೆಡಿ ಆಗುತ್ತಿದ್ದ ಹೆಂಡತಿಯನ್ನು ಕರೆದು ಕೇಳಿದೆ. 'ಟ್ರಂಕ್‌ನಲ್ಲಿದೆ ತಗೊಳ್ಳಿ' ಅಂತ ಬೀಗದ ಕೈ ಕೊಟ್ಟಳು.

ಬೀಗದ ಕೈ ತೆಗೆದುಕೊಂಡು ಟ್ರಂಕ್ ಬಾಗಿಲು ತೆರೆದೆ. ಪೆಟ್ಟಿಗೆಯ ಮೇಲ್ಭಾಗದಲ್ಲೇ ಕಡು ಕೆಂಪು ಬಣ್ಣದ ಸಲ್ವಾರ್ ಖಮೀಜು ನನ್ನನ್ನು ಕಂಡು ಮೊದಲು ಕಿಸಿಕಿಸಿ ಅಂತ ನಂತರ ಗಹಗಹಿಸಿ ನಕ್ಕಿತು. ಇರು ಇರು ಅಂತ ಹೇಳುತ್ತಾ ಮಾತ್ರೆ ಹುಡುಕಿ ತೆಗೆದೆ. ಅಲ್ಲೇ ಓಡಾಡುತ್ತಿದ್ದ ಅಣ್ಣನ ಎರಡನೇ ಮಗಳು ಮೈತ್ರಿಯನ್ನು ಕರೆದೆ. 'ಸ್ವಲ್ಪ ನೀರು ತರ್ತೀಯಾ?' ಎಂದೆ. 'ಯಾಕೆ ಬಟ್ಟೆ ಒಗೀಬೇಕಾ?' ಮೈತ್ರಿ ಕೇಳಿತು. 'ಅಲ್ಲ ಮರಿ ಕುಡಿಯೋಕ್ಕೆ. ಮಾತ್ರೆ ತಗೋಬೇಕು ..' ಅಂದೆ.

ಕ್ರೈಸಿಸ್‌ಗಳ ಸಮಯದಲ್ಲಿ ಗಂಡಸಿನ ಮೆದುಳು ಭಾರೀ ಚುರುಕಾಗಿರುತ್ತೆ ಅಂತ ಅದ್ಯಾರೋ ಹೇಳಿದ್ದರು. 'ಬಟ್ಟೆ ಒಗೀಬೇಕಾ?' ಅಂತ ಮೈತ್ರಿ ಕೇಳಿದ್ದು ತಲೆಯಲ್ಲಿ ಹೊಕ್ಕಿತ್ತು. ಮೈತ್ರಿ ಒಂದು ಲೋಟದಲ್ಲಿ ನೀರು ಮತ್ತೊಂದು ಲೋಟದಲ್ಲಿ ಕಾಫಿ ತಂದಳು. ನೀರು ಎಡಗೈಲಿ ಕಾಫಿ ಬಲಗೈಲಿ ತೆಗೆದುಕೊಳ್ಳಲು ಕೈಚಾಚಿದೆ. ತೆರೆದಿದ್ದ ಪೆಟ್ಟಿಗೆಯ ಬಾಗಿಲಿನ ಆಚೆ ಮೈತ್ರಿ ನಿಂತು ಕಾಫಿ ಲೋಟ ನೀಡಿದಳು. ಕಾಫಿ ತೆಗೆದುಕೊಳ್ಳುತ್ತಾ ಕೈ ಜಾರಿಸಿದೆ. ಮುಕ್ಕಾಲು ಲೋಟ ಕಾಫಿ ಸಲ್ವಾರ್ ಖಮೀಜ್ ಮೇಲೆ ಚೆಲ್ಲಿತು. 'ಅಯ್ಯಯ್ಯೋ .... ಕಾಫಿ ಕಲೆ ಹೋಗುಲ್ಲ ..' ಅಂತ ಮೈತ್ರಿ ಸಲ್ವಾರ್ ಖಮೀಜು ತೆಗೆಯಿತು. 'ಅದನ್ನ ನೀರಲ್ಲಿ ನೆನೆಸು, ಚೆನ್ನಾಗಿ ನೆನೆಸು, ಕಲೆ ಉಳಿಯೋಲ್ಲ ..' ಎಂದೆ. ಮೈತ್ರಿ ಅದನ್ನು ತೆಗೆದುಕೊಂಡು 'ಬಕೀಟ್ನಲ್ಲಿ ನೆನೆಸ್ತೀನಿ' ಅಂತ ರೂಮಿನಿಂದ ಆಚೆ ನಡೆದಳು.

ಮತ್ತೊಂದು ಲೋಟ ಕಾಫಿ ಇಸಿದುಕೊಂಡು ಕುಡಿದೆ. ತಲೆನೋವು ಮಾಯ ಆಗಿಬಿಟ್ಟಿತ್ತು. ನನ್ನ ತಲೆ ಬಗ್ಗೆ ವ್ಹಾ ಅನಿಸಿತು.

ಹೆಂಡತಿ ಸ್ನಾನ ಮುಗಿಸಿ ಬರ್ತಾಳೆ. ಸಲ್ವಾರ್ ಖಮೀಜಿಗೆ ಈ ರೀತಿ ಆಯಿತು ಅಂತ ನಾನೇ ಹೇಳಿದರೆ ಭೂಮಿ ಆಕಾಶ ಒಂದು ಮಾಡ್ತಾಳೆ ಎನಿಸಿತು. ಮೆಲ್ಲಗೆ ಮೈತ್ರಿಯನ್ನು ಕರೆದೆ. 'ಇಲ್ಲೇ ಕೂತಿರು ಚಿಕ್ಕಮ್ಮ ಬಟ್ಟೆ ಹಾಕ್ಕೊಳ್ಳೋದಿಕ್ಕೆ ಈಗ ಬರ್ತಾಳೆ ..' ಎಂದು ಹೇಳಿ ಮೆಲ್ಲಗೆ ಆಚೆ ಸರಿದೆ; ಶಶಿ ಕೈಲಿ ಬೀಗದ ಕೈಕೊಟ್ಟು ಕೈಕೊಡವಿಕೊಂಡೆ. ಸೀರೆ-ಸಲ್ವಾರ್ ಖಮೀಜ್ ಯುದ್ಧದಲ್ಲಿ ಸೀರೆಗೆ ಜಯ ಸಿಕ್ಕಿತ್ತು!! ●

ಪಿ. ಲಂಕೇಶ್

# ಸಿದ್ಧತೆ

ನೀಲಾಂಜನ

(ಲಲಿತ ಪ್ರವೇಶ. ಮಧ್ಯ ವಯಸ್ಕಳಾದ ಈಕೆ ಬದುಕಿನಲ್ಲಿ ಕಷ್ಟ ಅನುಭವಿಸಿದಾಕೆ. ಈಗ ಮನೆಯನ್ನು ಓರಣಗೊಳಿಸುತ್ತಿದ್ದಾಳೆ. ಕೆಲಸ ಮಾಡುತ್ತಲೇ ಅನ್ನುವಳು. ''ರಾಮು, ಅಪ್ಪ ಹೊರಗಡೆ ಟ್ರಂಕ್ ಇಟ್ಟಿದ್ದಾರೆ, ಒಳಗೆ ತಂದಿಡು.'' ರಾಮು ನಾಲ್ಕು ಟ್ರಂಕುಗಳನ್ನು ಒಂದೊಂದಾಗಿ ಒಳಗೆ ತಂದಿಡುವನು. ರಾಮು ಸುಮಾರು ಹದಿನೆಂಟು ವರ್ಷದ ಹುಡುಗ; full of anger and tensions. ಲಲಿತ ನಿಷ್ಕ್ರಮಣ, ರಾಮು ಹಿಂಬಾಲಿಸುವನು.)

(ಮೌನ)

(ರಂಗಪ್ಪನ ಪ್ರವೇಶ, ಈತ ಅರವತ್ತು ಮುಟ್ಟುತ್ತಿರುವ ಮನುಷ್ಯ. ಮರೆವು. ಒತ್ತಿಟ್ಟ ಆಶೆಗಳು, ಅವುಗಳ ಗುಂಗಿನಲ್ಲಿ ಇವನ ಚಟುವಟಿಕೆಗಳು)

ರಂಗಪ್ಪ: ಲೇ (ಎಂದು ಹೊತ್ತು ತಂದ ಹಲವು ಪ್ಯಾಕೆಟ್ಟುಗಳಲ್ಲಿ ಕೆಲವನ್ನು ನೆಲಕ್ಕೆ ಧಪ್ ಎಂದು ಬೀಳಿಸುವನು)

ಲಲಿತ: ಯಾರು? (ಪ್ರವೇಶ) ಏನು, ಏನದು ಬಿದ್ದಿದ್ದು, ಏನಿದೆಲ್ಲ?

ರಂ: ಜನ್ಮಾಂತರದ ಕರ್ಮ. ತಗೋ (ಒಂದೊಂದಾಗಿ ಕೊಡುವನು)

ಲ: ಕರ್ಮ? ಸರಿ.

ರಂ: (ಕೊಡುತ್ತಾ) ಮಣಿಪುರಿ.

ಲ: ಎಂಥ ಮಣಿಪುರಿ? ಏನಿದೆಲ್ಲ?

ರಂ: ಮಣಿಪುರಿ ಅಂದರೆ ಡಾನ್ಸ್. ಇದು ಭರತ ನಾಟ್ಯ.

ಲ: ಡಾನ್ಸ್ ಅಂದ್ರೆ ಮೈ ನಡುಗುತ್ತೆ.

ರಂ: ಡಾನ್ಸ್ ಅಂದ್ರೆ ಮೈ ನಡುಗೋಲ್ಲ. ಕುಣಿಯುತ್ತೆ. ನೆನಪಿದೆಯಾ? ಮದುವೆಯಾದ ಮೊದಲ ವರ್ಷವೆ ನನ್ನ ಚೊಚ್ಚಲು ಅಭ್ಯಾಸ. ಆಮೇಲೆ ನಿತ್ಯದ ಪ್ರಾಕ್ಟೀಸು, ಇದ್ದಕ್ಕಿದ್ದ ಹಾಗೇ ನಿಂತುಹೋಗಿದ್ದು -

ಲ: (ಲಕ್ಷಿಸದೇ) ಇವತ್ತು ರಾಮು ಹುಟ್ಟಿದ ಹಬ್ಬ.

ರಂ: ಛೆ?

ಲ: ರಾಮು ಹುಟ್ಟಿದ ಹಬ್ಬ.

ರಂ: ಸುಳ್ಳು.

ಲ: ಹ್ಯಾಗೆ ಸುಳ್ಳು.

ರಂ: ಸುಳ್ಳು.

ಲ: ಯಾಕೆ? ಹ್ಯಾಗೆ?

ರಂ: ತಾರೀಖೆಷ್ಟು?

ಲ: ಡಿಸೆಂಬರ್ ಇಪ್ಪತ್ತು.

ರಂ: ಸರಿ.

ಲ: ನೆನಪಾಯ್ತು?

ರಂ: ಹಾಗಾದ್ರೆ ಸರಿ.

ಲ: ನನಗೆ ಗೊತ್ತಿತ್ತು.

ರಂ: ಹಾಗಾದ್ರೆ ಸರಿ.

ಮೇ 1970ರ ಸಂಚಿಕೆಯಿಂದ

ಲ: ನನಗೆ ನಿಮ್ಮ ಡಾನ್ಸ್ ಅಂದ್ರೆ ಮೈ ನಡುಗುತ್ತೆ.
ರಂ: (ಕೇಳಿಸಿಕೊಳ್ಳದೆ) ಹಾಗಾದ್ರೆ ಸರಿ.
ಲ: ನಾನು ಹೇಳಿದ್ದು ನಿಮಗೆ ಕೇಳಿಸಲೇ ಇಲ್ಲ.
ರಂ: (ಶೂಸ್ ಬಿಚ್ಚುತ್ತಾ) ಹಾಗಾದ್ರೆ ಸರಿ.
ಲ: ಏನು ಯೋಚಿಸ್ತಿದೀರ. ಕೋಟು ತೆಗೀರಿ.
ರಂ: (ತೆಗೆಯುವನು) ನಾನು ತೆಗೀತಿದ್ದೆ.
ಲ: ತೆಗೆದಾಯ್ತಲ್ಲ. ಕೂತ್ಕೊಳ್ಳಿ.
ರಂ: ನನಗೆ ಆರ್ಡರ್ ಮಾಡಬೇಡ.
ಲ: ಆರ್ಡರ್? ಏನು ಹಾಗಂದ್ರೆ?
ರಂ: ಕೋಟು ತೆಗೀ ಅಂತ ಆರ್ಡರ್ ಮಾಡಲಿಲ್ಲವಾ?




ಲ: ಇಲ್ಲ.
ರಂ: ಸರಿ ಹಾಗಾದ್ರೆ (ಕೂತುಕೊಳ್ಳುವನು).
ಲ: ತಿಂಡಿ ತರ್ತೇನೆ (ಹೋಗುವಳು).

(ಲಲಿತ ಪ್ರವೇಶ)

ರಂ: ಇದು ಡಿಸೆಂಬರ್, ಲಲಿತ.
ಲ: ಹೌದು; ಉಪ್ಪಿಟ್ಟು ಚೆನ್ನಾಗಿದೆಯಾ?
ರಂ: ಚೆನ್ನಾಗಿದೆ. ಡಿಸೆಂಬರನಲ್ಲಿ ಡಾನ್ಸ್ ಶುರುವಾಗುತ್ತೆ.
ಲ: ಡಿಸೆಂಬರಲ್ಲಿ birthday. ರವೆ ಸ್ಪೆಷಲ್ಲಾಗಿ ಮಾಡಿದ್ದು.
ರಂ: ಚೆನ್ನಾಗಿದೆ.ಜಯ ಇನ್ನೂ ಬರಲಿಲ್ಲ.
ಲ: ರೈಲು ಲೇಟಂತ ಕಾಣುತ್ತೆ.
ರಂ: ಬರೋ ಇಷ್ಟ ಇದ್ರ ರೈಲೇನು ಮಾಡುತ್ತೆ?
ಲ: ರೆಕ್ಕೆ ಕಟ್ಟಿಕೊಂಡು ಹಾರಿ ಬರೋಕಾಗುತ್ತಾ? ಮಕ್ಕಳು, ಮರಿ.
ರಂ: ಜಯಾ ಬುದ್ಧಿ ನೆಟ್ಟಗಿಲ್ವೆ. ಮಕ್ಕಳು, ಮರೀದೂ ಅಷ್ಟೆ.
ಲ: ನಿತ್ಯ ಅದೇ ಮಾತಾಡ್ತೀರ.
ರಂ: ಹೌದು. ಹತ್ತು ವರ್ಷದ ಹಿಂದೆ ಹೀಗೇ ಅಂದಿದ್ದೆ. ಅವತ್ತು ಅರ್ಜಂಟಾಗಿ ಹೊರಟಿದ್ದೆ. ಎಲ್ಲ ರೆಡಿಯಾಗಿತ್ತು. ಅವಳು ಬರಲಿಲ್ಲ. ಯಾವಾಗಲೂ ಕಾಯಿಸೋದೆ ಜಯಾ ಕೆಲಸ.
ಲ: ರೈಲು ಲೇಟಂತ ಕಾಣುತ್ತೆ. ಯಾರೇನು ಮಾಡೋಕಾಗುತ್ತೆ.
ರಂ: ಬರೋ ಇಷ್ಟ ಇದ. ರೈಲೇನು ಮಾಡುತ್ತೆ.
ಲ: ರೆಕ್ಕೆ ಕಟ್ಟಿಕೊಂಡು ಬರೋಕಾಗುತ್ತಾ? ಮಕ್ಕಳು, ಮರಿ
ರಂ: ಮಕ್ಕಳಿಲ್ಲದಿದ್ರೆ, ರೆಕ್ಕೆ ಕಟ್ಟಿಕೊಂಡು ಬರ್ತಿದ್ಲ?
ಲ: ಮಾತಿಗಂದೆ ಅಷ್ಟು ಬೇಗ ಬರೋಕಾಗೋಲ್ಲ.
ರಂ: (ಧ್ವನಿಯೆತ್ತರಿಸಿ) ಯಾಕೆ ಬರೋಕಾಗಲ್ಲ ಅಂತ?
ಲ: ಹಾಳು ರೈಲು.
ರಂ: ರೈಲೇನು ಮಾಡುತ್ತೆ?
ಲ: ರೈಲಿಲ್ಲದೆ ಬರೋದು ಹ್ಯಾಗೆ? ನೀರು ಕುಡೀರಿ.
ರಂ: ನೀರು ಕುಡಿಯೋಲ್ಲ.
ಲ: ತುಂಬ ಚಳಿ. ಸ್ವೆಟರ್ ಹಾಕ್ಕೊಳ್ಳಿ.
ರಂ: ನನಗೆ ಚಳಿ ಇಲ್ಲ.
ಲ: ಯಾಕೆ ಅಷ್ಟು ಅವಸರವಾಗಿ ತಿಂತೀರ.
ರಂ: ನನಗೆ ಹೊತ್ತಾಗುತ್ತೆ.
ಲ: ಯಾಕೋ ಒಂಥರ ಇದೀರ.
ರಂ: ನನ್ನ ಬಾಯನ್ನೇ ನೋಡ್ತಾ ಕೂತ್ಕೋಬೇಡ.
ಲ: ನೋಡಿದರೆ ಏನಾಗುತ್ತೆ.
ರಂ: ನನಗೆ ಹೊತ್ತಾಗುತ್ತೆ. ಕಾಡಿಸಬೇಡ.
ಲ: ಇನ್ನೊಂದಿಷ್ಟು ಉಪ್ಪಿಟ್ಟು ತರಲಾ.
ರಂ: ಬ್ಯಾಡ.
ಲ: ಸ್ಪೆಷಲ್ಲಾಗಿ ಮಾಡಿದ್ದು.
ರಂ: ನೀನೇ ಸ್ಪೆಷಲ್ಲಾಗಿ ತಿನ್ನು. ನನಗೆ ಹೊತ್ತಾ

ಗುತ್ತೆ. ರಾಮು ಎಲ್ಲಿ? (ಏಳುವನು).
ಲ: ಒಳಗಿದಾನೆ.
ರಂ: ಯಾಕೆ ಒಳಗೇ ಇರ್ತಾನೆ. ಅವನ್ನ ಮುದ್ದು ಮಾಡಿ ಹಾಳುಮಾಡ್ತಿ.
ಲ: ಹಾಳಾಗೋಕೆ ಅವನೇನು ಚಿಕ್ಕ ಮಗು ಅಲ್ಲ.
ರಂ: ಓ ಅಂದ್ರೆ ಠೋ ಅನ್ನೋಕೆ ಬರೋಲ್ಲ.
ಲ: ಬರುತ್ತೆ. ರಾಮು, ರಾಮು,
ರಾ: (ಪ್ರವೇಶಿಸಿ) ಏನು?
ರಂ: ನಾನು ಹೇಳಿದ್ದೆಲ್ಲ ಮಾಡಿದೆಯಾ!
ರಾ: ಅಳ ಸಿಂಗ್ರಾಚಾರ್ರು ಮನೇಲಿರಲಿಲ್ಲ.
ರಂ: ಸುಳ್ಳು.
ಲ: ಹ್ಯಾಗೆ ಸುಳ್ಳು?
ರಂ: ನಾನು ಹೋಗಿದ್ದೆ. ಅವರು ಇದ್ರು.
ಲ: ಇವತ್ತು ಜಗಳ ಆಡಬೇಡಿ ಅವನ ಹುಟ್ಟಿದ ಹಬ್ಬ.
ರಂ: ಸರಿ, ಇನ್ನು ಸುಳ್ಳು ಹೇಳಿದ್ರೆ ಎಲುಬು ಮುರೀತೇನೆ ಗೊತ್ತೇನೋ ಇವತ್ತು ನಿನ್ನ ಹುಟ್ಟಿದ ಹಬ್ಬ.
ರಾ: ಗೊತ್ತಿಲ್ಲ.
ರಂ: ನನಗೆ ಗೊತ್ತು, ಇವತ್ತು ನಿನ್ನ birthday.
ರಾ: ಸರಿ.
ರಂ: ಎಷ್ಟಾಯಿತು ವಯಸ್ಸು. ಐವತ್ತಿರ ಬಹುದೋ?
ರಾ: ಅರವತ್ತು.
ರಂ: ನಿನ್ನ ವಯಸ್ಸು ಕೇಳ್ತಿರೋದು.
ರಾ: ಅದನ್ನೇ ಹೇಳ್ತಿರೋದು.
ರಂ: ಏನು ನೀನು ಹೇಳ್ತಿರೋದು?
ರಾ: ನನ್ನ ವಯಸ್ಸು-ಅರವತ್ತು-ಅರವತ್ತು ವರ್ಷ.
ರಂ: ಅರವತ್ತು ತಿಂಗಳು-ಬುದ್ಧೀಲಿ.
ರಾ: ಅಲ್ಲ, ವರ್ಷ.
ರಂ: ನಿನಗೆ ಹುಚ್ಚು.
ರಾ: ಹೌದು.
ರಂ: ನಿನಗೆ ಹುಚ್ಚು ಅಂದೆ.
ರಾ: ಹೌದು ಅಂದೆ.
ರಂ: ಇವತ್ತು ಕ್ಲಾಸಿಗೆ ಹೋಗಿದ್ದೆಯಾ? ನಿ
ವತ್ತು ಪಾಠ?
ರಾ: Roast pig.
ರಂ: ಹೋದ ವರ್ಷಾನೂ ಹೀಗೇ ಹೇಳಿದ್ದೆ.
ರಾ: ಹೌದು Roast pig.
ರಂ: ಪ್ರತಿ ವರ್ಷ ಹೀಗೇ ಹೇಳ್ತಿ.
ರಾ: ಹೌದು. Roast pig.
ಲಲಿತ: ಅವನು ಫೇಲಾಗಿದಾನೆ. ನೆನಪಿಲ್ಲವಾ?
ರಂ: ಆದರೆ birthday ಮಾತ್ರ ಫೇಲಾಗೋಲ್ಲ.
ಲ: ಇವತ್ತು ಅವನ್ನ ಅಣಕಿಸಬೇಡಿ.
ರಂ: ಅಣಕಿಸೋಲ್ಲವೇ ನೋಡು, ಅವನ birthday ಮಾತ್ರ ಫೇಲಾಗೋಲ್ಲ.
ಲ: ನಿಮಗಾಗಿ ಸೂರ್ಯ-ಚಂದ್ರ ಒಂದು ಕಡೆ ನಿಲ್ಲೋಲ್ಲ.
ರಂ: good. ಇನ್ನೊಂದು ಸಲ ಹೇಳು.
ಲ: ನಿಮಗೆ ಕೇಳಿಸಿದೆ.
ರಂ: ಹೇಳು, ಪರವಾಗಿಲ್ಲ. ಹೇಳು.
ಲ: ಯಾರಿಗಾಗಿಯೂ ಸೂರ್ಯ-ಚಂದ್ರ ಒಂದು ಕಡೆ ನಿಲ್ಲೋಲ್ಲ. birthday ಬಂದೇ ಬರುತ್ತೆ.
ರಂ: ಸರಿ. ಇದು ಹ್ಯಾಗೆ ಗೊತ್ತಾಯ್ತು?
ಲ: ಬುದ್ಧಿ ಇದ್ರೆ ಎಲ್ಲಾ ಗೊತ್ತಾಗುತ್ತೆ.
ರಂ: ನಿನ್ನ ಮಗನ ಬುದ್ಧಿ ಮಾತ್ರ ನಿಂತೇ ಇರುತ್ತೆ.
ಲ: ಅವನ ಬುದ್ಧಿ ಹಾಗೇ ಇರಲಿ.
ರಂ: ಕತ್ತೆ ಬೆಳೆದ ಹಾಗೆ ಬೆಳೆದಿದಾನೆ.
ರಾ: ಅದು ಪಿತ್ರಾರ್ಜಿತ ಆಸ್ತಿ.
ರಂ: ಕೊಬ್ಬು ಜಾಸ್ತಿ ಆಗ್ತಿದೆ.
ರಾ: ಆಸ್ತಿ ಕೆಲವು ಸಲ ಬೆಳೆಯುತ್ತೆ.
ರಂ: Shut up!
(ಮೌನ)
ಹೇಳಿದ್ದು ಕೇಳಿಕೊಂಡು ಬಿದ್ದಿರಬೇಕು. ಗೊತ್ತಾಯ್ತೆ?
(ಮೌನ)
ಗೊತ್ತಾಯ್ತೇನೋ?
ರಾ: ಗೊತ್ತಾಯ್ತು.
ರಂ: ಏನು ಗೊತ್ತಾಯ್ತು?
ರಾ: ಹೇಳಿದ್ದು ಕೇಳಿಕೊಂಡು ಬಿದ್ದಿರಬೇಕು.

ಲ: ಯಾಕೋ ಒಂಥರಾ ಇದೀರ. ಕೂತ್ಕೊಳ್ಳಿ.

ರಾ: ನನಗೆ ನಿಲ್ಲೋಕಿಷ್ಟ. ನನಗೆ ಹೊತ್ತಾಗುತ್ತೆ.

ಲ: ಹೊತ್ತಾಗುತ್ತೆ. ಹೊತ್ತಾಗುತ್ತೆ - ಯಾತಕ್ಕೆ ಹೊತ್ತಾಗುತ್ತೆ! ಕೂತ್ಕೊಳ್ಳಿ.

ರಂ: ಯಾತಕ್ಕೆ, ಯಾತಕ್ಕೆ! ಈ ಟ್ರಂಕು ನೋಡಿದ್ರೆ ಗೊತ್ತಾಗೊಲ್ವ?

ಲ: ರೇಗಬೇಡಿ. ನಿಮ್ಮ ಒಳ್ಳೆಯದಕ್ಕೇ ಹೇಳಿದ್ದು.

ರಂ: (ರೇಗಿ) ಹೌದು. ನನ್ನ ಒಳ್ಳೆಯದಕ್ಕೇ ಎಲ್ಲಾ.

ಲ: ಯಾಕೆ ರೇಗ್ತೀರಾ ...

ರಂ: (ಧ್ವನಿ ಎತ್ತರಿಸಿ) ನನ್ನ ಒಳ್ಳೇದಕ್ಕೆ ಎಲ್ಲಾ. ಮೂವತ್ತೈದು ವರ್ಷ ಆಫೀಸಲಿ ಕೂತದ್ದು, ಸೊಣ ಹೊಡೀತ ಬಿದ್ದದ್ದು, ಫೈಲ್ ನೋಡ್ತಾ ಆಕಳಿಸಿದ್ದು, ಫೈಲಲ್ಲೆ ಉತ್ತು, ಬಿತ್ತಿ, ಬೆಳೆ ತೆಗೆದದ್ದು, ಮಕ್ಕಳು ಮರಿ ಮಾಡಿದ್ದು, ರಿಟೈರ್ ಆದದ್ದು ಎಲ್ಲಾ ಒಳ್ಳೆಯದಕ್ಕೇ.

ಲ: ದೇವರ ದಯದಿಂದ ಎಲ್ಲಾ ಸುಖವಾಗಿದೆ.

ರಂ: ಹೌದು.

ಲ: ಮರ್ಯಾದೆಯಿಂದ ಬದುಕಿದ್ದೇವೆ.

ರಂ: ಹೌದು, ಎಲ್ಲರ ಥರ ಟಿಫನ್ ಕ್ಯಾರಿಯರ್ ತಗೊಂಡು ಆಫೀಸಿಗೆ ಹೋದೆ - ಕೆಲಸ ಮಾಡಿದೆ. ಮಕ್ಕಳಾದವು. ವಿದ್ಯಾಭ್ಯಾಸ ಆಯಿತು. ಜಯಾ ಮದುವೆ ಆಯ್ತು. ನನ್ನ ರಿಟೈರ್ ಆಯ್ತು. ಪ್ರಾವಿಡೆಂಟ್ ಫಂಡ್ ಬಂತು. ಇನ್ಷ್ಯುರೆನ್ಸ್ ದುಡ್ಡು ಬಂತು.

ಲ: ಮತ್ತೆ, ಮತ್ತೆ ಅದೇ ಹೇಳ್ತೀರಾ?

ರಂ: (ಪ್ಯಾಕೆಟ್ಟಿನಿಂದ ಒಂದು ವರ್ಣರಂಜಿತ ಬಟ್ಟೆ ತೆಗೆದು ನೋಡುತ್ತ) ಲಲಿತ, ಆ ಡಿಸೆಂಬರ್ ಹದಿನೈದನೇ ತಾರೀಖು-ನೆನಪಿದೆಯೇ ನಿನಗೆ?

ಲ: ಆ ಅಯ್ಯರ್ ಬಂದಿದ್ರಲ್ಲ- ಆ ಹೊತ್ತು.

ರಂ: ಅಯ್ಯರ್ ಜೊತೆಗೆ ಒಬ್ಬರಿದ್ರು-ಯಾರು ಹೇಳು.

ಲ: ಅವಳ ಸುದ್ದಿ ಎತ್ತಬೇಡಿ. ನನ್ನ ಹತ್ರ-

ರಂ: ಡಾನ್ಸರ್.

ಲ: ಹೌದು. ನಿಮಗೆ ಡಾನ್ಸ್ ಹುಚ್ಚು ಹಿಡೀತು. ಮೂರು ಹೊತ್ತು ಡಾನ್ಸ ಡಾನ್ಸ್ ಅಂತ ಕುಣೀತಿದ್ರಿ. ಅದನ್ನೇ ಕನವರಿಸತಿದ್ರಿ. ಆದರೆ ನನಗೆ ಗೊತ್ತಿತ್ತು.

ರಂ: ಏನು?

ಲ: ನಿಮಗೆ ಹಿಡಿದಿದ್ದು ಸರೋಜ ಹುಚ್ಚು!

ರಂ: ಸರಿ. ನನ್ನ ಸ್ನೇಹಿತರು ಕಂಡ್ರೆ ನಿನಗೆ ಹೊಟ್ಟೆ ಕಿಚ್ಚು. ನನ್ನ ಪುಸ್ತಕ ಕಂಡ್ರೆ ಹೊಟ್ಟೆ ಕಿಚ್ಚು. ನನ್ನ ಆಶೆ ಕಂಡ್ರೆ-

ಲ: ಅದೆಲ್ಲ ಈಗೇಕೇ?

ರಂ: ಹೋಗಲೀ ಕೇಳು: ಅವಳ ಕಣ್ಣು ಚೆನ್ನಾಗಿದ್ವು, ಅಲ್ವ?

ಲ: ನನಗದೆಲ್ಲ ಹೇಳಬೇಡಿ.

ರಂ: ಮೈ ಅಚ್ಚುಕಟ್ಟಾಗಿತ್ತು. ಡಾನ್ಸಿಗೆ ಹೇಳಿ ಮಾಡಿಸಿದ ಹಾಗಿತ್ತು.

ಲ: ಸರಿ. ಶುರುವಾಯ್ತು; ರಾಮು, ಒಳಗೆ ಹೋಗೋ.

ರಾ: ಪರವಾಗಿಲ್ಲಮ್ಮ ನನಗೂ ಡಾನ್ಸ್ ಅಷ್ಟು ಇಷ್ಟ.

ರಂ: ಭೇಷ್, ತಕ್ಕ ಮಗ. ನಿನ್ನ ಹಾಗಿದ್ದಾಗ ನಾನು ಏನ್ಮಾಡ್ತಿದ್ದೆ ಹೇಳು?

ರಾ: ನಿಮ್ಮಪ್ಪ, ನಿಮಗೆ ಹೀಗೆ ಹೇಳೋದನ್ನ ಕೇಳ್ತಿದ್ರಿ.

ರಂ: ಅಲ್ಲ.

ರಾ: ನಿಮ್ಮಪ್ಪನಿಗೂ ಇದನ್ನ ಹೇಳ್ತಿದ್ರಿ.

ಲ: ಮಗ್ನೂ ಹತ್ರ ಕೊಳಕನ್ನೆಲ್ಲಾ-

ರಾ: ಪರವಾಗಿಲ್ಲ - ಬಿಡಮ್ಮ.

ರಂ: ಕೊಳಕು? ನೃತ್ಯಕ್ಕೆ ಬಗ್ಗಿದ ಮೈ ಕೊಳಕಿಲ್ಲ ಲಲಿತ. ಆ ಡಿಸೆಂಬರ್ ಚಳಿಯಲ್ಲಿ ನನ್ನ ಹೃದಯ ಕುಣೀತಿತ್ತು. ಜಗತ್ತು ನನ್ನ ಕರೀತಿತ್ತು ನಾನು ಹೋಗಲಿಲ್ಲ.

ಲ: ಅವತ್ತು ಜಯ ಹುಟ್ಟಿದ್ದು.

ರಂ: ಅದಕ್ಕೇ ಹೋಗಲಿಲ್ಲ

ಲ: ಸರಿ, ನನಗೆ ತುಂಬಾ ಕೆಲಸ ಇದೆ. (ಹೋಗುತ್ತಿದ್ದಾಗ)

ರಂ: ನಿಲ್ಲು, ನೀನೀಗ ನಿಂತ ಹಾಗೆ ನಿಂತೆ. ಟೇಬಲ್ ಎದುರು ಕೂತು ಬರೆದೆ. ಫೈಲ್ ನೆಲ್ಲ ಮುಗಿಸಿದೆ. ಆದರೆ ಇವತ್ತು.

ಲ: ಇವತ್ತು?

ರಂ: ನಿಲ್ಲೋ ಅಲ್ಲಿ, ಸರೋಜ ಕಾಯ್ತಿದಾಳೇ. ನನಗೆ ಗೊತ್ತು ಕಾಯ್ತಿದಾಳೇ. (ಪಾರ್ಸಲ್ ಬಿಚ್ಚುತ್ತಾ) ಇದು ನೃತ್ಯಕ್ಕೆ ಡ್ರೆಸ್ಸು, ರಾಮು. ಬಾ, ಇಲ್ಲಿ (ಅವನಿಗೆ ಹಿಡಿದು) ಹ್ಯಾಗಿದೇ?

ಲ: ಇದೆಲ್ಲ ಎಂಥ ಹುಚ್ಚು.

ರಂ: ಗೊತ್ತಾಗುತ್ತೆ ರಾಮು. ಹೋಗಿ ಅಯ್ಯರ್ ಕರಕೊಂಡು ಬಾ. (ಅಂಗಿ ತೆಗೆದು) ಅರ್ಜೆಂಟಾಗಿ ಬರಬೇಕಂತೆ ಅಂತ ಹೇಳು.

ಲ: ಇದೇನು, ಅಯ್ಯರ್ ತೀರಿಕೊಂಡ್ರು ಅಲ್ವ?

ರಂ: ಅವನಲ್ಲ, ಇನ್ನೊಬ್ಬ ಅಯ್ಯರ್.

ಲ: ಅಯ್ಯರೇ ಆಗಬೇಕೇ? ಯಾಕೀಗ ಅಯ್ಯರ್?

ರಂ: (ನಕ್ಕು) ಅಯ್ಯರ್. ಇತರರಿಗಿಂತ ಕೊಂಚ ಹೈಯರ್.

ರಾಮು: ಅವರ ಮನೆ ನಂಗೊತ್ತಿಲ್ಲ.

ರಂ: ಹೇಳ್ತೇನೆ. ನಿನ್ನ ಕಾಲೇಜ್ ಎಲ್ಲಿದೇ, ಹೇಳು.

ರಾ: ರಾಮನಾಥಪುರ tenth cross.

ರಂ: ಅಲ್ಲಿ, ಅನ್ನಪೂರ್ಣ ಹೋಟೆಲ್ ಗೊತ್ತ?

ರಾ: ಯಾವ ಕ್ರಾಸಲ್ಲಿ.

ರಂ: ಕ್ರಾಸ್ ಗೀಸ್ ಕೇಳಬೇಡ, ಸರಸ್ವತಿ ಬ್ಯಾಂಕಿಂದ ಅರ್ಧ ಫರ್ಲಾಂಗ್ ಹೋಗಿ ಎಡಕ್ಕೆ ತಿರುಗಿ ನಾಲ್ಕು ಹೆಜ್ಜೆ ಹೋದರೆ-

ರಾ: ನಾಲ್ಕು ಹೆಜ್ಜೆ ಹೋದರೆ-

ರಂ: ತೆಪ್ಪಗೆ ಕೇಳು, ಅಲ್ಲಿ ಅನ್ನಪೂರ್ಣ ಸಿಗುತ್ತೆ. ಅದರ ಎದುರು ನಿಂತು ಮುಂದೆ ನೋಡಿದರೆ ಬಿನ್ನಿ ಷೋ ರೂಂ ಕಾಣುತ್ತೆ. ಅದರ ಎದುರು ನಿಂತು, ಎಡಕ್ಕೆ ತಿರುಗಿದರೆ-

ರಾ: ಎಡಕ್ಕೆ ತಿರುಗಿದರೆ-

ಲ: ಸುಮ್ಮನೇ ಕೇಳೋ-

ರಂ: ಎಡಕ್ಕೆ ತಿರುಗಿದರೆ ಒಂದು ಗಲ್ಲಿ ಸಿಗುತ್ತೆ. ಅದರಲ್ಲಿ ಹೋಗಿ ಬಲಕ್ಕೆ ತಿರುಗಿ ನೋಡಿದರೆ-

ರಾ: ಗಲ್ಲೀಲಿ ಎಷ್ಟು ದೂರ ಹೋಗಬೇಕು?

ರಂ: ಇಪ್ಪತ್ತು ಗಜ.

ರಾ; ಸರಿ.

ರಂ: ಸರಿ. ಈಗ ಹೇಳು.

ರಾ: ಮೊದಲು ಬ್ಯಾಂಕ್, ಆಮೇಲೆ ಹೋಟೆಲ್, ಆಮೇಲೆ ಬಿನ್ನಿ ಷೋರೂಂ, ಆಮೇಲೆ ಗಲ್ಲಿ.

ರಂ: ಹ್ಞೂ ಹ್ಞೂ, ದೂರ?

ರಾ: ನಾಲ್ಕು ಹೆಜ್ಜೆ, ಎಡ, ಬಲ ಅರ್ಧ ಫರ್ಲಾಂಗ್-

ರಂ: ಅಲ್ಲ ಪುಸ್ತಕ ಕೊಡು, ಬರೆದುಕೊಡ್ತೇನೆ. ಇದು ಸರಸ್ವತಿ ಬ್ಯಾಂಕ್- ಇಲ್ಲಿಂದ ಈ ಕಡೆ ದಕ್ಷಿಣಕ್ಕೆ-

ರಾ: ಅದು ದಕ್ಷಿಣ ಅಲ್ಲ. ಉತ್ತರ-

ರಂ: ಸುಮ್ಮನೆ ಕೇಳು. ಇದು ಅನ್ನಪೂರ್ಣ ಹೋಟೆಲ್, ಇದು ರಸ್ತೆ. ಇದು ಬಿನ್ನಿ ಷೋರೂಂ, ಇದು ಗಲ್ಲಿ-

ರಾ: ಆ ಟ್ಯಾಂಗಲ್ ಸರೀನಾ-

ರಂ: ಇದು ಟ್ಯಾಂಗಲ್ ಅಲ್ಲ. ಟ್ರ್ಯಾಂಗಲ್-

ರಾ: ಅಲ್ಲಿ ಒಟ್ಟು four angles, ಅದಕ್ಕೇ ಇದು ರೆಕ್ಟಾಂಗಲ್.

ರಂ: ಥತ್. ಇದು ಕ್ವಾಡ್ರಾಂಗಲ್.

ಲ: ಜಗಳ ಸಾಕು. ಮುಂದೆ ಎಲ್ಲಿದೆ ಹೇಳಿ.

ರಂ: ಎಲ್ಲಿದೆ ಎಲ್ಲಿದೆ? ಎಲ್ಲಿರುತ್ತೆ? ಭೂಮಿ ಮೇಲಿದೆ.

ಲ: ಹೌದಾ ಭೂಮಿ ಮೇಲಿದ್ಯಾ!

ರಂ: ಹೌದು ಇಲ್ಲೀ ಥರನೇ ಭೂಮಿ. ಅದರ ಮೇಲೆ ರಸ್ತೆ, ಅದರ ಪಕ್ಕಕ್ಕೆ ಮನೆ.

ಲ: ಹಾಗಾದರೆ ನಿಮ್ಮ ಅಯ್ಯರ್ ಮನೇಲೇ ಇದಾರೆಯೇ?

ರಂ: ಹೌದು. ಭೂಲೋಕದಲ್ಲೇ.

ಲ: ಹಾಗಾದ್ರೆ phone ಮಾಡಬಹುದು.

ರಂ: ಹೌದು. ಭೂಮೀಲಿ phone ಇದೆ.

ಲ: phone ಇದೆ

ರಂ: ಅಂಗಡೀಲಿ phone ಇರುತ್ತೆ.

ಲ: phone ಮಾಡಿ ಬಾ.

ರಂ: ನಿನಗೆ ಗೊತ್ತಾಗೊಲ್ಲ. ಎದುರಿನ ಅಂಗಡಿಗೆ ಹೋಗಿ ಫೋನ್ ಮಾಡು, ನಂಬರ್ 267945.

ರಾ: ಸರಿ (ಹೋಗಲಿರುವನು)

ರಂ: ಹೇಳು, ಏನಂತ ಮಾಡ್ತಿ?

ರಾ: ಅರ್ಜೆಂಟಾಗಿ ಬರಬೇಕಂತೆ ಅಂತ -

ರಂ: ನಂಬರ್ ಎಷ್ಟು ಹೇಳು?

ರಾ: ಡಬಲ್ ಸಿಕ್ಸ್ 7495.

ರಂ: ಅಲ್ಲ, 276495.

ಲ: ಅಲ್ಲ, 26794.

ರಾ: ಅಲ್ಲಮ್ಮ. 667495.

ರಂ: ನನಗೇ ಮರೆತು ಹೋಯ್ತು ಇದು (ಜ್ಞಾಪಿಸಿಕೊಳ್ಳುತ್ತಾ) ಉಂಹುಂ. ನಿನಗೆ ಹೇಳಲೇ ಬಾರದಿತ್ತು. -

ಲ: ಅವನ್ಯಾಕೆ ಬೈಯ್ತೀರಿ, ಏನಾದದ್ದೀಗ.

ರಂ: ಏನಾಗಿಲ್ಲ ಹಾಳಾಗಲಿ; ನಾನೇ ಹೋಗಿ ಬಿಡ್ತೇನೆ-

ರಾ: ನಿಮಗೂ ನಂಬರ್ ಗೊತ್ತಿಲ್ಲ.

ರಂ: ಡೈರಕ್ಟರೀ ನೋಡ್ತೇನೆ.

ರಾ: ಅವರು ಎಂಥ ಅಯ್ಯರು-

ರಂ: ಎಲ್ಲಾ ಅಯ್ಯರ್‌ಗಳಿಗೆ ಫೋನ್ ಮಾಡಿದರಾಯ್ತು.

ರಾ: ಅಯ್ಯರ್‌ಗಳು ತುಂಬಾ ಜನ ಇದ್ದಾರೆ.

ರಂ: ನಿನಗ್ಯಾಕೇ ತೆಪ್ಪಗಿರು. ನನಗೆ ಹೊತ್ತಾಗುತ್ತೆ. ಲಲಿತಾ, ನನ್ನ ಸಾಮಾನೆಲ್ಲಾ ಟ್ರಂಕಲ್ಲಿ ಹಾಕು. ಐದಾರು ಟ್ರಂಕಿವೆ ತಾನೇ? ಎಲ್ಲಾ ರೆಡಿ ಆಗಬೇಕು. ನಾನು ಬರೋವಷ್ಟರಲ್ಲಿ.

ಲ: ಬಟ್ಟೆಬರೆ ಎಲ್ಲಾ-

ರಂ: ಎಲ್ಲ ಅಂದ್ರೆ ಎಲ್ಲಾ-

ಲ: ಶೇವಿಂಗ್ ಸೆಟ್?

ರಂ: ಟವಲ್, ಪುಸ್ತಕ, ಬೆಲ್ಲೊಪಿಂಟರ್, ಟಾಟ್ನ್ಯಾಮ್, ರೂಸ್ಕೋ-

ಲ: ಗೊತ್ತಾಯ್ತು ಎಲ್ಲಾ-

ರಂ: ಹೊತ್ತಾಗುತ್ತೆ, ಬೇಗ ಬಂದ್ಬಿಡ್ತೇನೆ (ಹೋಗುವನು).

(ತಾಯಿ ಮತ್ತು ಮಗ ಪ್ಯಾಕೆಟ್‌ಗಳನ್ನು ಬಿಚ್ಚಿ ಟ್ರಂಕ್‌ಗಳಲ್ಲಿ ಸಾಮಾನು ಹಾಕುವರು. ಹಾಕುವಾಗ ಬಟ್ಟೆ, ಪುಸ್ತಕ, ಕೀರೀಟ, ಕತ್ತಿ ಇತ್ಯಾದಿಗಳನ್ನು ನೋಡುವರು. ರಾಮು ಶೂಸ್ ಮುಂತಾದವನ್ನು ಪೇಪರಲ್ಲಿ ಕಟ್ಟಿ ಟ್ರಂಕಿಗೆ ಹಾಕುವನು. ಒಂದೊಂದು ಟ್ರಂಕ್ ತುಂಬಿದಂತೆಯೂ, ದೊಡ್ಡ ಬೀಗ ಹಾಕಿ ಭದ್ರ ಮಾಡುವರು, ಜೊತೆಗೇ ಮಾತು ಸಾಗಿದೆ.)

ರಾಮು: (ದೊಡ್ಡದೊಂದು ಡಾನ್ಸ್ ಬಟ್ಟೆ ತೆಗೆದು ನೋಡುತ್ತಾ) ಡಾನ್ಸು ಬಟ್ಟೇಲಿದೆಯ?

ಲ: ಬಟ್ಟೇನೂ ಬೇಕು

ರಾ: ಡಾನ್ಸು ಕಾಲಲ್ಲಿದೆಯೇ?

ಲ: ಡಾನ್ಸಿಗೆ ಕಾಲೂ ಬೇಕು?

ರಾ: ಎಲ್ಲ ವಿಚಿತ್ರವಾಗಿದೆ. _

ಲ: ನಿನಗೆ ಹೊಟ್ಟೆಕಿಚ್ಚು.

ರಾ: ಯಾಕೆ?

ಲ: ಹೋಗಲಿ ಬಿಡು;

ರಾ; ನನಗೆ ಯಾಕೆ ಹೊಟ್ಟೆಕಿಚ್ಚಾಗಬೇಕು?

ಲ: ಸರಿ, ಆ ಬಟ್ಟೆ ಹಾಕ್ಕೋ.

ರಾ: (ಹಾಕಿಕೊಂಡು) ಕತ್ತಿ ಕೊಡು.

ಲ: ಮಾತಾಡು.

ರಾ: ''ಚಂಡಿ ಚಾಮುಂಡಿ ಪೇಳ್‌ಬೇಕಾದುದೇನು?''

ಲ: ಗೊತ್ತಾಯ್ತು? ಶೌರ್ಯ ಎಲ್ಲಿದೆ? ಶಕ್ತಿ ಯಲ್ಲಿದೆಯಾ?

ರಾ: ''ಚಂಡಿ ಚಾಮುಂಡಿ ಪೇಳ್‌ಬೇಕಾದುದೇನು?''

ಲ: ಬರೀ ಮಾತಲ್ಲಿದೆಯಾ ಶೌರ್ಯ?

ರಾ: ''ಚಂಡಿ ಚಾಮುಂಡಿ ಪೇಳ್‌ಬೇಕಾದುದೇನು?''

ಲ: ಈಗ ಗೊತ್ತಾಯ್ತ?

ರಾ: ಏನು?

ಲ: ಶೌರ್ಯ ಬಟ್ಟೇಲಿಲ್ಲ. ಕತ್ತೀಲಿಲ್ಲ. ಬರೀ ಮಾತಲ್ಲೂ ಇಲ್ಲ.

ರಾ: ಎಲ್ಲಿದೆ?

ಲ: ಗೊತ್ತಿಲ್ಲ.

ರಾ: ಗೊತ್ತಿಲ್ಲ. ಗೊತ್ತಿಲ್ಲ. ಆದರೂ ಗೊತ್ತಿರೋಥರ ಮಾತಾಡ್ತಿ.

ಲ: ಹೌದು, ಬೀಗ ಹಾಕು.

(ಬೀಗ ಹಾಕುವನು)

ರಾ: ಗೊತ್ತಾಯ್ತು? ಗೊತ್ತಿರೋಥರ ಮಾತಾಡ್ತಿ.

(ಮೌನ)

ರಾ: ಅಮ್ಮ!

(ಮೌನ)

ರಾ: ಅಮ್ಮ!

(ಮೌನ)

ರಾ: ನಿನ್ನನ್ನೇ ನಾನು ಕೇಳ್ತೀರೋದು. ಇಲ್ಲಿ ಎಲ್ಲ ಗೊತ್ತಿರೋಥರ ಇದೆ.ಯಾವುದೂ ಗೊತ್ತಿಲ್ಲ. ಅಪ್ಪ ಹೋಗ್ತೇನೆ ಅಂತಿದಾರೆ, ಯಾಕೆ ಗೊತ್ತಿಲ್ಲ. ಮೂವತ್ತು ವರ್ಷದಿಂದ ಮಾತಾಡ್ತಿದೀರ, ಏನೂ ಗೊತ್ತಾಗಿಲ್ಲ. ನಾನು ಫೇಲಾಗಿದೇನೆ ಅಂತ ಬೈತೀರ ನೀವು ಯಾವ ಪರೀಕ್ಷೆಯೂ ಪಾಸಾಗಿಲ್ಲ.

ಲ: ಸುಮ್ನಿರು ಇವತ್ತು ನಿನ್ನ ಹುಟ್ಟುಹಬ್ಬ.

ರಾ: ಅದಕ್ಕೆ ನಾನು ಜವಾಬ್ದಾರನಲ್ಲ.

ಲ: ಸರಿ.

ರಾ: ನಿಮ್ಮ ಥರಾನೇ ಯಾವ ಪರೀಕ್ಷೇಲೂ ಪಾಸಾಗೋಲ್ಲ. ಇನ್ನು ಕ್ಲಾಸಿಗೆ ಹೋಗೋಲ್ಲ.

ಲ: ಯಾಕೆ?

ರಾ: ನನಗೆ ನಂಬಿಕೆ ಇಲ್ಲ.

ಲ: ಹಾಗಂದರೆ ಹೇಗೆ ?

ರಾ: ಬಾಗಿಲು ಹಾಕ್ತೇನೆ.

ಲ: ಏನಂದೆ?

ರಾ: ಬಾಗಿಲು ತೆಗೀತೇನೆ.

ಲ: ಏನೋ ಅದು ನೀನು ಹೇಳ್ತಿರೋದು?

ರಾ: ಬಾಗಿಲು ಹಾಕ್ತೇನೆ.

ಲ: ಹುಚ್ಚು ಹಿಡಿಯುತ್ತೆ.

ರಾ: ಬಾಗಿಲು ತೆಗೀತೇನೆ.
ಲ: ಹಾಗಂದ್ರೇನು ಬೋಗಳೋ.
ರಾ: ನನಗೆ ಆಶ್ಚರ್ಯ, ಗೊತ್ತ, ಆಶ್ಚರ್ಯ.
ಲ: ಓಹೋ.
ರಾ: ಯಾಕೆ? ನನಗೆ ಆಶ್ಚರ್ಯ ಕೂಡ ಆಗಬೇಡವೇ?
ಲ: ಯಾಕೆ ಆಶ್ಚರ್ಯ?
ರಾ: ನಾನಿನ್ನೂ ಚಿಕ್ಕ ಮಗು ಅಲ್ಲ.
ಲ: ಅದಕ್ಕೇ ತೆಪ್ಪಗಿರು ಅಂದದ್ದು.
ರಾ: ಅದಕ್ಕೇ ತೆಪ್ಪಗಿರೋಲ್ಲ.
ಲ: ಹೇಳು. ಹೇಳೊದ್ನೆಲ್ಲ ಹೇಳಿಬಿಡು.
ರಾ: ಇಂಥ ಪರಿಸ್ಥಿತಿಯಲ್ಲಿ ಒಂದೇ solution.
ಲ: ಏನು, ಏನು ಸಲೂಷನ್? ಯಾತಕ್ಕೆ ಸಲೂಷನ್?
ರಾ: ಅಪ್ಪ ಹೋಗ್ತೇನೆ ಅಂತಾರೆ, ಹೋಗೋಲ್ಲ. ಹೀಗೆ ಎಷ್ಟು ಸಲ ನೋಡೋದು. ಇವತ್ತು ಗೊತ್ತಾಗಿಬಿಡುತ್ತೆ. ನಾನು ಹೇಳ್ತೇನೆ.
ಲ: ಹ್ಯಾಗೆ?
ರಾ: ಕಾಯಿನ್ ಹಾರಿಸೋಣ. ಹೋಗೋದಾದ್ರೆ ಹೆಡ್, ಇಲ್ದಿದ್ರೆ ಟೇಲ್-
ಲ: ಅದೆಲ್ಲ ಆಗೋಲ್ಲ.
ರಾ: ಎಲ್ಲಾ ಆಗುತ್ತೆ. (ಹಾರಿಸುವನು) ಹೆಡ್!
ಲ: ಅವರು ಹೋಗೋಲ್ಲ. ನನಗ್ಗೊತ್ತು ಹೋಗೋಲ್ಲ.
ರಾ: ಹೆಡ್ ಬಿದ್ದಿದೆ. ಹೋಗ್ತಾರೆ. ಮತ್ತೆ ನೋಡೋಣ (ಹಾರಿಸಿ) ಹೆಡ್!
ಲ: ಇನ್ನೊಂದು ಸಲ ಹಾರ್ಸು.
ರಾ: (ಹಾರಿಸಿ) ಹೆಡ್!
ಲ: ಅದೆಲ್ಲ ಸುಳ್ಳು. ನನಗೆ ನಂಬಿಕೆ ಇಲ್ಲ.
ರಾ: ನನಗಿಲ್ಲ ಅಂತೀರಾ? ಆದ್ರೆ ಕಾಯಿನ್‌ಗೆ ಹೆಡ್ ಇದೆ.
ಲ: ನನಗಿಷ್ಟವಿಲ್ಲ. ಮಾತಾಡಬೇಡ.
ರಾ: ಇಷ್ಟದ ಪ್ರಶ್ನೆ ಅಲ್ಲ. ಕಾಯಿನ್‌ಗೆ ಹೆಡ್ ಇದೆ.
ಲ: ತೆಪ್ಪಗಿರು.
ರಾ: ಇದ್ದದ್ದು ಇದ್ದ ಹಾಗೆ ಹೇಳಿದೆ.
ಲ: ಮಾತಾಡಬೇಡ.

(ರಂಗಪ್ಪನ ಪ್ರವೇಶ)

ರಾ: ಫೋನ್ ಮಾಡಿದ್ದೇನಪ್ಪ?

(ಮೌನ)

ಲ: ಯಾಕೆ? ಏನಾಯ್ತು?
ರಂ: ರಾಮನಾಥ ಅಯ್ಯರ್ ಅಂದ ಫೋನ್‌ನಲ್ಲಿ ನೀನೊಬ್ಬ ಫೂಲ್ ಅಂದ.
ಲ: ಯಾಕೆ?
ರಂ: ಜಗನ್ನಾಥ ಅಯ್ಯರ್ ಹೇಳಿದ. ರಾಂಗ್ ನಂಬರ್ ಅಂತ.
ಲ: ಆಮೇಲೆ?
ರಂ: ಎಂ.ಕೆ.ಐಯ್ಯರ್ ಅಂದ. ಇದು ಬ್ರೋಕರ್ ಶಾಪ್.
ಲ: ನಿಮ್ಮಯ್ಯರ್ ಸಿಕ್ಕಲಿಲ್ಲವಾ?
ರಂ: ವಿಶ್ವನಾಥ ಅಯ್ಯರ್ ಸಿಕ್ಕ. ಅವನು ಕಂಟ್ರಾಕ್ಟರ್ ಅಂತೆ.
ರಾ: ರಾಮಲಿಂಗ್ಯೆಯರ್.
ರಂ: ಅವನ್ಯಾರು?
ರಾ: ಗೊತ್ತಿಲ್ಲ.
ಲ: ಹಾಗಾದ್ರೆ ಸಿಕ್ಕಲಿಲ್ಲ?
ರಂ: ರಾಜಯ್ಯರ್ ಸಿಕ್ಕ. ಅವನಿಗೆ ಫ್ಲೂ ಅಂತೆ.
ಲಲಿತ: ನಿಮ್ಮಯ್ಯರ್ ಸಿಕ್ಕಲಿಲ್ಲ?
ರಂ: ಅವನ ಮನೆಗೆ ಬೆಂಕಿ ಬಿತ್ತು. ಸುವ್ವರ್ ನನ್ಮಗ. ಈಚೀಚೆಗೆ ನನಗೆ ಅಯ್ಯರ್‌ಗಳಲ್ಲಿ ನಂಬಿಕೆ ಹೋಗ್ತಿದೆ. ಎಲ್ಲರೂ ಅವರ ಗುರ್ತಿದೆ ಅಂತ ತಿಳ್ಕೊಂಡಿದಾರೆ. ಎಲ್ಲಾ ಹಾಕಿದ್ರಾ? ರೆಡಿ. ಜಯ ಇನ್ನೂ ಬರಲಿಲ್ಲ.
ಲ: ರೈಲು ಲೇಟಂತ ಕಾಣುತ್ತೆ.
ರಂ: ಬರೋ ಇಷ್ಟ ಇದ್ರೆ ರೈಲೇನು ಮಾಡುತ್ತೆ?
ಲ: ಮತ್ತೆ ಅದೇ ಮಾತಾಡಬೇಡಿ.
ರಂ: ನಾನಲ್ಲ ನೀನು ಮಾತಾಡೋದು. ಅವತ್ತು ಹೊರಟು ನಿಂತಾಗ ನಾನು ಹೇಳಿದ್ದೆ. ನಾನಿನ್ನು ಹೋಗಿಬಿಟ್ಟು ಬರ್ತೇನೆ ಲಲಿತಾ.
ಲ: ನನಗ್ಯಾಕೋ ತಲೇನೋವು, ಅಂದಿದ್ದೆ.
ರಂ: ತಲೆ ಇರೋವರೆಗೂ ತಲೇನೋವಿರುತ್ತೆ.
ಲ: ಹೃದಯ ಇದ್ರೆ ತಲೆನೋವು ಏನೂಂತ

ಗೊತ್ತಾಗುತ್ತೆ.

ರಂ: ಹೃದಯ ಇದ್ರೆ ಡಾನ್ಸ್ ಅಂದ್ರೇನೂಂತ ಗೊತ್ತಾಗುತ್ತೆ.

ಲ: ಮತ್ತೆ ಮತ್ತೆ ಅದನ್ನೇ ಹೇಳಬೇಡಿ.

ರಂ. ಆಮೇಲೆ ಡಿಸೆಂಬರದಲ್ಲಿ ಹೊರಟಿದ್ದೆ.

ಲ: ಅಯ್ಯೋ, ನನ್ನ ಎದೆಯೆಲ್ಲ ಉರಿಯುತ್ತೆ,

ರಂ: ಔಷಧ ಸಿಗುತ್ತೆ ಕಣೆ.

ರಾ: ಡಾಕ್ಟರ್ ಕರೆತನ್ನಿ ಹಾಗಾದ್ರೆ.

ರಂ: ನನಗೆ ಹೊತ್ತಾಯ್ತು, ಜಯ ಬರಲಿಲ್ಲ ನೋಡು.

ಲ: ಹಾಳು ರೈಲು.

ರಂ: ರೈಲೇನು ಮಾಡುತ್ತೆ?

ಲ: ರೆಕ್ಕೆ ಕಟ್ಟಿಕೊಂಡು ಹಾರಿ ಬರ್ತಾಳಾ?

ರಂ: ನಿನಗೆ ಬುದ್ಧಿ ನೆಟ್ಟಗಿಲ್ಲ ಕಣೆ. ಕೋಟ್ ಕೊಡು. ರೆಡಿ ಆಗಬೇಕು.

ಲ. ಎಲ್ಲ ಟ್ರಂಕಲ್ಲಿವೆ. ರಾಮು, ಬೀಗದ ಕೈ ಕೊಡು.

ರಾ: ನನಗ್ಗೊತ್ತಿಲ್ಲ.

ಲ: ಇಲ್ಲ. ಅಲ್ಲೆಲ್ಲೋ ಇರಬೇಕು.

(ಹುಡುಕುವಳು)

ರಂ: ಮಕ್ಕಳು ಅಂದ್ರೆ ಹೇಗಿರಬೇಕು. ದರಿದ್ರಗಳು.

ಲ: ಎರಡು ಸಲ ಟೆಲಿಗ್ರಾಂ ಕೊಟ್ರೆ, ಎರಡು ಸಲಾನೂ ಹೋಗಲಿಲ್ಲ.

ರಂ: ಹೋಗಲಿಲ್ಲ ಅಲ್ವೆ. ಜಯ ಬರಲಿಲ್ಲ.

ಲ: ನೀವು ಹೋಗಲಿಲ್ಲ.

ರಂ: ಅಲ್ವೇ ನೀನು ಬಿಡಲಿಲ್ಲ.

ಲಲಿತ: ಸಿಕ್ತಾ ಇಲ್ಲ.

ರಂ: ನೀನು ನೋಡಿದಿಯೇನೋ?

ರಾ: (ಸುಮ್ಮನಿರುವನು)

ಲ: (ಟ್ರಂಕಿನ ಸುತ್ತ ನೋಡುತ್ತ) ಎಲ್ಲಿ ಹೋಯ್ತು-ಇಲ್ಲೇ ಇತ್ತಲ್ಲ.

ರಂ: ಇಲ್ಲೇ ಇತ್ತು! ಇಲ್ಲೇ ಇತ್ತು! ಎಲ್ಲಿತ್ತು (ಟ್ರಂಕನ್ನು ಒದ್ದು ಸುತ್ತ ನೋಡುತ್ತ) ಈ ಮನೇಲಿ ಇಲ್ಲೇ ಇರುತ್ತೆ. ಎಲ್ಲೂ ಇರೋಲ್ಲ. (ಟ್ರಂಕನ್ನು ಎತ್ತಿ ಕುಟ್ಟುವನು; ಒಂದು ಬೀಗ ಹಾಕದ ಟ್ರಂಕನ್ನು ಒದ್ದು) ಇದಕ್ಕೆ ಯಾಕೆ ಬೀಗ ಹಾಕಿಲ್ಲ?

ಲ: ಅದಕ್ಕೆ ಹಾಕೋಕೆ ಬೀಗ ಇಲ್ಲ.

ರಂ: ಇದರಲ್ಲಿ ಯಾಕೆ ನನ್ನ ಬಟ್ಟೆ ಇಡಲಿಲ್ಲ?

ಲ: ಕೀ ಕಳೆಯುತ್ತೇ ಅಂತ ಕನಸು ಬಿದ್ದಿರಲಿಲ್ಲ.

ರಂ: (ಆ ಟ್ರಂಕಿನಿಂದ ಟವಲು, ನಿಕ್ಕರು ಬ್ರಷ್ಟು, ಗ್ಲಾಸುಗಳನ್ನು ಕಿತ್ತು ಎಸೆದು ನೋಡುವನು, ಕ್ಷಣ ಕಾಲ ಇವುಗಳ ಸದ್ದೇ ಕೇಳಿಸುವುದು ಕೀ ಇಲ್ಲ.)

ರಂ: ಹಣ ಎಲ್ಲಿ?

ಲ: ಎಲ್ಲ ಟ್ರಂಕಲ್ಲಿದೆ.

(ಮೌನ)

ರಂ: ಮಸ್ಕಿರಿ ಮಾಡಬೇಡ. ಹೇಳು, ಕೀ ಎಲ್ಲಿಟ್ಟಿದ್ದೀಯಾ? ಹೇಳು.

ಲ: ನಿಮ್ಮಾಣೆ ಸುಳ್ಳು ಹೇಳ್ತಿಲ್ಲ.

ರಂ: ಹಾಗಾದ್ರೆ ಎಲ್ಲಿ ಹೋಯ್ತು? ಎಲ್ಲಿ ಹಾಳಾಗಿ ಹೋಯ್ತು?

ಲ: (ದೂರ ಸರಿದು ಬಾಯಿಗೆ ಸೆರಗಿಟ್ಟುಕೊಂಡು ಅಳುವಳು)

ರಂ: ಹೋಗಬೇಡ ಅಂತ ಧೈರ್ಯವಾಗಿ ಹೇಳು.

(ಮೌನ)

ರಂ: ಒಂದು ಸಲ ಹೊರಟಾಗ ತಲೆ ನೋವು ಅಂದೆ. ಇನ್ನೊಂದು ಸಲ ಹೊಟ್ಟೆನೋವು ಅಂದೆ. ಸಾವಿರ ನೆಪ ಹೇಳಿ ನನ್ನ ಕಟ್ಟಿ ಹಾಕಿದೆ. ಓವಲ್ಟೀನ್, ಬೋರ್ನ್ವಿಟಾ, ಟಾನಿಕ್ಕು, ಕಾಫಿ, ಆಫೀಸು ಸಾಕು. ಪಿಕ್‌ನಿಕ್‌ನಲ್ಲಿ ನನ್ನ ಸಿಕ್ಕಿಸಿ ರಕ್ತ ಹೀರಿದೆ.

ಲ: ನನ್ನ ಕೊಂದು ಬಿಡಿ, ಹಾಗೆಲ್ಲ ಮಾತಾಡಬೇಡಿ.

ರಂ: ನನ್ನನ್ನ ಕೊಂದಾಗಿದೆ.

ಲ: ಸುಮ್ಮನಿದ್ರೆ ಮನಸ್ಸಿಗೆ ಬಂದ ಹಾಗೆ ಮಾತಾಡ್ತೀರ.

ರಂ: ನಾನಲ್ಲ. ನನಗೆ ಹೊತ್ತಾಗುತ್ತೇ, ಬೀಗ ಒಡೀಬೇಕು, ಹಾರೆ ತಗೊಂಡು ಬಾ.

ಲ: ಹಾರೆ ಪಕ್ಕದ ಮನೇಲಿ ತಗೊಂಡು ಹೋಗಿದ್ದಾರೆ.

ರಂ: ಹಾರೆ ಇಲ್ವ?
ಲ: ಇಲ್ಲ.
ರಂ: (ಟ್ರಂಕಿಗೆ ಒದ್ದು) ಏನೂ ಇಲ್ಲ. ಎಂಥದೂ ಇಲ್ಲ. ಈ ಮನೇಲಿದ್ದ ದುಡ್ಡು, ಬಟ್ಟೆ, ಎಲ್ಲ ಟ್ರಂಕು ಸೇರುತ್ತೆ. ಬೀಗದ ಕೈ ಕಳೆಯುತ್ತೆ, ಹೊರಟು ನಿಂತಾಗ ಇದ್ದಕ್ಕಿದ್ದ ಹಾಗೆ ಕಾಹಿಲೆ ಆಗುತ್ತೆ. ಪ್ರೇಮದ ಹೆಸರಿನಲ್ಲಿ ಕನಸುಗಳ ಕೊಲೆ ಆಗುತ್ತೆ. ತಿಂಡಿಯ ಹೆಸರಿನಲ್ಲಿ ಬೊಜ್ಜು ಬೆಳೆಯುತ್ತೆ. ಸಭ್ಯತೆಯ ಹೆಸರಲ್ಲಿ ವರಗಳು ಸತ್ತು ಹೆಣ ತೇಲುತ್ತೆ.
ಲಲಿತ: ಸಾಕು. ನಾನು ಹೇಳೋದನ್ನೂ ಕೊಂಚ ಕೇಳಿ, ನನಗೆ ಹಾಡು ಬರ್ತಿತ್ತು. ಕಸೂತಿ ಬರ್ತಿತ್ತು. ಓದಬೇಕು ಅಂತ ಆಶೆ ಇತ್ತು. ಮದುವೆ ಆದ್ರೆ ಓದೋಕೇನು ತೊಂದ್ರೆ ಅಂತ ಮದುವೆ ಆದ್ರಿ. ಪುಸ್ತಕ ಎತ್ತಿಕೊಳ್ಳೋದ್ರಲ್ಲೇ ಜಯ ಹುಟ್ಟಿದ್ಲು. ನಿಮ್ಮ ಕನಸು ಹೆಚ್ಚಾದವು. ದೇಹ ಒಂದು ಕಡೆ ಮನಸ್ಸು ಇನ್ನೊಂದು ಕಡೆ. ನೀವು ಹೇಳೋದು ಒಂದು, ನಿಮ್ಮ ಆಶೆಯೇ ಇನ್ನೊಂದು. ಕಲೆ ಅಂತ ಇದ್ರಿ, ಹೆಂಗಸರನ್ನು ಬೆನ್ನು ಹತ್ತಿದ್ರಿ-
ರಂ: ಹೆಂಗಸಲ್ಲ ನನಗೆ ಬೇಕಾದ್ದು ನನ್ನ ಕನಸು.
ಲ: ಆದ್ರೆ ಡಿಸೆಂಬರ್‌ನಲ್ಲಿ ನೀವು ಬೆನ್ನು ಹತ್ತಿದ್ದು ಕನಸನ್ನಲ್ಲ, ಹೆಂಗಸನ್ನ.
ರಂ: ಕೆಲವು ಸಲ ನಿಂತ ಜೀವ ನೃತ್ಯವಾಗಿ ಕಾಣುತ್ತೆ. ಇನ್ನು ಕೆಲವೊಮ್ಮೆ ನೃತ್ಯ ಶವವಾಗಿ ರುತ್ತೆ.
ಲ: ಹೆಣ್ಣು ಹಲ್ಕಾ ಆದಷ್ಟು ಅವಳ ಮೈ ನರ್ತಿಸುತ್ತೆ.
ರಂ: ಹಾಗಾದ್ರೆ, ಭೂಮಿ ಹಲ್ಕಾ, ಹರಿಯೋ ಹೊಳೆ ಹಲ್ಕಾ, ಮೋಡಗಳು ಹಲ್ಕಾ, ಉಕ್ಕುವ ಸಮುದ್ರ ಹಲ್ಕಾ.
ಲ: ನನಗದೆಲ್ಲಾ ಗೊತ್ತಾಗೋಲ್ಲಾ.
ರಂ: ಅದಕ್ಕೇ ಈಗ ಹೊರಟಿರೋದು.
ಲ: ಹೋಗಿ.
ರಂ: ಎಲ್ಲಿದೆ ಹೇಳು.
ಲ: ಗೊತ್ತಿಲ್ಲ.
ರಂ: ಸುಳ್ಳು ಹೇಳ್ತಿ.
ಲ: (ಸಿಟ್ಟಿನಿಂದ) ನೀವು ಸುಳ್ಳು ಹೇಳ್ತಿ ರೋದು. ನಿಮಗೆ ಬಟ್ಟೆ ಯಾಕೆ ಬೇಕು? ಮಕ್ಕಳು ಯಾಕೆ? ಹಣ ಯಾಕೆ? ಭೂಮಿಗೆ ಬಟ್ಟೆ ಇದೆಯೇ? ಮೋಡಕ್ಕೆ ಬಟ್ಟೆ ಇದೆಯೇ? ಸಮುದ್ರಕ್ಕೆ ಬಟ್ಟೆ ಇದೆಯೇ?
ರಂ: ಈ ರೀತಿಯ ತರ್ಕ ನನ್ನನ್ನ ಹಿಡಿದು ನಿಲ್ಲಿ ಸೋಲ್ಲ.
ಲ: ಗೊತ್ತು.
ರಂ: ರಾಮು! (ರಾಮು ಸುಮ್ಮನಿರುವನು) ರಾಮು! ಕಿವಿ ಹಾಳಾಗಿದೆಯೇ?
ರಾ: ಹೇಳಿ.
ರಂ: ಕಲ್ಲು ತಗೊಂಡು ಬಾ.
ರಾ: ತರೋಲ್ಲ.
ರಂ: ಹೇಳಿದ್ದು ಕೇಳಬೇಕು.
ರಾ: ಕೇಳೋಲ್ಲ.
ರಂ: ಇಂಥ ಉತ್ತರದಿಂದ ಏನಾಗುತ್ತೆ ಗೊತ್ತ?
ರಾ: ಪರವಾಗಿಲ್ಲ.
ರಂ: ನಾನು ಏನ್ಮಾಡಬಲ್ಲೆ ಅಂತ ಗೊತ್ತಾ?
ರಾ: ಗೊತ್ತಿಲ್ಲ.
ರಂ: (ರೇಗುತ್ತಾ) ಏನು ಗೊತ್ತಿಲ್ಲ? (ಮೌನ) ನಿನಗೆ ಏನು ಗೊತ್ತಿಲ್ಲ? (ಮೌನ) ಬಾಯ್ಬಿಟ್ಟು ಮಾತಾಡು. ಏನು ಗೊತ್ತಿಲ್ಲ?
ರಾ: ನನಗೆ ಏನು ಗೊತ್ತಿಲ್ಲ ಅಂತ ಗೊತ್ತಿಲ್ಲ.
ರಂ: ಹೀಗೆ ಮಾತಾಡಿದ್ರೆ-
ರಾ: ನಿಮಗೆ ಹೊತ್ತಾಗುತ್ತೆ.
ರಂ: ಹೊತ್ತಾಗುತ್ತೆ? ಯಾತಕ್ಕೆ ಹೊತ್ತಾಗುತ್ತೆ ಹೇಳು?
ರಾ: ಹೊರಟವರಿಗೆ ಗೊತ್ತಿರಬೇಕು.
ರಂ: ಸರಿಯಾಗಿ ಹೇಳು, ಬಾಯಿ ಬಿಟ್ಟು ಸರಿಯಾಗಿ ಮಾತಾಡು. ನಿನ್ನ ನಾಲಿಗೆ ಸೀದು ಹೋಗಿದೆಯಾ? ಏನು ರೋಗ ಬಂದಿದೆ ನಿನಗೆ?
ರಾ: ನಿಮಗೇನಾಗಿದೆ?
ರಂ: ಹ್ಞು. ಈ ಮಟ್ಟಕ್ಕೆ ಬಂದೆಯಾ? ತೋರಿಸ್ತೇನೆ, ಏನಾಗಿದೆ ಅಂತ ತೋರಿಸ್ತೇನೆ. ಕಲ್ಲು

ಬಂದು ಈ ಟ್ರಂಕು ಒಡೆದು ಚೂರು ಚೂರು ಮಾಡ್ತೇನೆ. ಈ ಮನೆನೆಲ್ಲ ಸುಟ್ಟು ಭಸ್ಮ ಮಾಡ್ತೇನೆ. ಆಗ ಗೊತ್ತಾಗುತ್ತೆ, ನನ್ನ ಹೊಟ್ಟೆಯಿಂದ ಹುಟ್ಟಿದ ಪಿಳ್ಳೆ ಎದುರು ಆಡ್ತೀಯಾ? ನನ್ನ ಮುಖ ನೋಡಿ ನಿಂತೆ. ಹೊರಟುಹೋಗಬೇಕು ಅಂತ ಇದ್ದೋನು ತೆಪ್ಪಗೆ ನಿಂತೆ. ನಿನಗೆ ಕಾಯಿಲೆ ಆದ್ರೆ ಪರದಾಟ ಡಾಕ್ಟರು, ಔಷಧಿ ಇಂಜೆಕ್ಷನ್ ನೀನು ನಕ್ಕರೆ ಅದೇನು ಸಂಭ್ರಮ. ಅಬ್ಬಾ, ಹುಟ್ಟಿದ ಹಬ್ಬ, ಮಿಠಾಯಿ, ಉಡುಗೊರೆ; ನೀನು ಮಾತಾಡಿದ್ರೆ ಅದೇನು ಖುಷಿ—

ಲ: ಇವತ್ತೇನಾಗಿದೆ ನಿಮಗೆ. ಯಾಕೆ ಹೀಗೆ ಮಾತಾಡ್ತಿದೀರ?

ರಂ: ಇವರಿಂದೆಲ್ಲ ಒಂದಿನ ಒಳ್ಳೇದಾಗುತ್ತೆ ಅಂತ ತಿಳಿದಿದ್ದೆ. ಈ ಕಷ್ಟದಲ್ಲಿ, ಈ ದುಃಖ, ನಿಟ್ಟುಸಿರು, ಹುಡುಗಾಟ, ನಗೆ, ಚಪ್ಪಾಳೆಯಲ್ಲಿ ಕೊನೆಗೆ ಸತ್ಯ ಕಾಣಬಹುದು ಅಂತ ಮಾಡಿದ್ದೆ. ನಾನೆಲ್ಲಿಗೂ ಹೋಗೋಕೇ ಆಗ್ಲಿಲ್ಲ.

ಲ. ಎಲ್ಲಿಗೆ ಹೋಗಬೇಕು ಅಂತ ಗೊತ್ತಿರಬೇಡವೆ?

ರಂ: ಈ ಮಗನ್ನ ಕೇಳು ಗೊತ್ತಾಗುತ್ತೆ. ನನ್ನ ಬೀಗದ ಕೈ ತಗೊಂಡಿದಾನೆ. ತಗೊಂಡಿಲ್ಲ ಅಂತ ಸುಳ್ಳು ಬೊಗಳ್ತಿದಾನೆ.

ರಾ: ನಿಮ್ಮ ಭ್ರಮೆ ಅಷ್ಟೆ.

ರಂ: ಎಲ್ಲ ಭ್ರಮೆ ಕಣೋ ನಿನಗೆ. ಮುದುಕರ ಮುಖದ ಸುಕ್ಕು ನೋಡಿ ನಿನಗೆ ಆಶ್ಚರ್ಯ ಆಗುತ್ತೆ. ಆದರೆ ಒಂದೊಂದು ಸುಕ್ಕಿನಲ್ಲಿ ಒಂದೊಂದು ಆಶೆಯ ಹೆಣ ಬಿದ್ದಿರುತ್ತೆ. ಕೋಲು ಹಿಡಿದು ನಡೀತ ಈ ಮುದುಕ ಏನನ್ನ ಸಾಧಿಸಬೇಕಾಗಿದೆ ಅಂತ ಆಶ್ಚರ್ಯಪಡ್ತಿ. ಆದ್ರೆ, ಮುದುಕನ ಕೋಲು ಕೆಲವು ಸಲ ಮಂತ್ರ, ದಂಡ ಆಗುತ್ತೆ. ಇವನು ಯಾಕಿದಾನೆ, ಈ ಮುದುಕ ಇವನ ಜೀವನದಿಂದ ಯಾರಿಗೇನು ಉಪಯೋಗ ಅಂತಿ, ಅವನ ಮಾತೆಲ್ಲ ವಿಚಿತ್ರವಾಗಿ ನಿನಗೆ ಕಾಣುತ್ತೆ.

ಲ: (ಅವನನ್ನು ಸುಮ್ಮನಿರಿಸಲು) ಸಾಕು ಅಂದ್ರೆ, ಮಾತು; ರಾಮು ತಪ್ಪು ಮಾಡಿದ್ರೆ ನಾನು ವಿಚಾರಿಸ್ಕೊಳ್ತೇನೆ.

ರಂ: ವಿಚಾರ, ಆಹಾ, ವಿಚಾರ. (ಕುಳಿತುಕೊಳ್ಳುವನು)

ಲ: ವಿಚಾರ ಅಲ್ಲ, ವಿಚಾರಣೆ ಅಲ್ಲ, ವಿಚಾರಿಸ್ಕೋತೇನೆ, ಬೀಗದ ಕೈ ಅವನು ಹೇಗೆ ಕೊಡೋಲ್ಲವೋ ನೋಡ್ತೇನೆ.

ರಂ: (ಗಂಭೀರವಾಗಿ ಕುಳಿತು ನೆಲದ ಮೇಲೆ ದೃಷ್ಟಿ ನೆಟ್ಟಿರುವನು. ದೃಶ್ಯ ಮುಂದುವರಿದಂತೆ ಅವನ ಮಾತು ಯಾಂತ್ರಿಕವಾಗುತ್ತಾ ಹೋಗಿ ನಿಂತುಹೋಗುವುದು.)

ಲ: ರಾಮು, ಯಾಕೋ ಹೀಗೆ ಹಠ ಮಾಡ್ತಿ. ದೊಡ್ಡೋರನ್ನ ಗೋಳಾಡಿಸಿದ್ರೆ ಏನೋ ನಿನಗೆ ಸಿಗುತ್ತೆ?
(ಸುಮ್ಮನಿರುವನು)
ಮಾತಾಡು
(ಸುಮ್ಮನಿರುವನು)
ಮಾತಾಡೋಕೇನಾಗಿದೆ? ಏನೋ ಬಂದಿದೆ ನಿನಗೆ ರೋಗ? (ಸುಮ್ಮನಿರುವನು) ಬೀಗದ ಕೈ ಎಲ್ಲಿಟ್ಟಿದ್ದಿ? ಮಾತಾಡು.

ರಂಗಣ್ಣ: (ಗಂಭೀರವಾಗಿ) ಮುದುಕರು ಮಾತಾಡ್ತಾರೆ, ಕೇಳಿಸೋಲ್ಲ. ಚಿಕ್ಕವರು ಮಾತಾಡೋಲ್ಲ, ಕೇಳಿಸುತ್ತೆ.

ಲಲಿತ: ಮಾತಾಡ್ತಾನೆ. ಯಾಕೆ ಮಾತಾಡೋಲ್ಲ.

ರಂಗಣ್ಣ: ನನಗೆ ಗೊತ್ತು, ಲಲಿತ. ಮಾತಾಡಿದರೂ ಒಂದೇ. ಆಡದಿದ್ದರೂ ಒಂದೇ. ನಡೆದರೆ ನೆಲಕ್ಕೆ ರೋಮಾಂಚನ ಆಗುತ್ತೆ. ನೋಡಿದರೆ ಸಾಕು ಸರೋಜ ಅರಳುತ್ತೆ. ನೆನಪಿದೆಯಾ ನಿನಗೆ—

ಲಲಿತ: ನನಗೇನೂ ನೆನಪಿಲ್ಲ. ನೆನಪು ನನಗೆ ಬೇಕಿಲ್ಲ.

ರಂಗಣ್ಣ: ನನಗೆ ಬೇಕು ಲಲಿತ. ಅದಕ್ಕೇ ಹೊರಟಿದೇನೆ. ಟ್ರಂಕನ್ನೆಲ್ಲ ತಂದು ನನ್ನ ಹತ್ತಿರ ಇಡು. (ಒಂದೊಂದು ತಂದು ಅವನ ಸುತ್ತ ಇಡುವಳು) ಎಷ್ಟಿದೆ ಒಟ್ಟು?

ಲ: ನಾಲ್ಕು.

ರಂಗಣ್ಣ: ತುಂಬ ಭಾರ ಇದೆಯಾ?

ಲ: ಇಲ್ಲ:
ರಂಗಣ್ಣ: ಅದರಲ್ಲಿ ಅಂಥದೇನೂ ಇಲ್ಲ.
ಲ: ನೀವು ಮಾತಾಡಬೇಡಿ. ರಾಮು, ಹೋಗಿ ಡಾಕ್ಟರ್ ಕರಕೊಂಡು ಬಾ. (ಸುಮ್ಮನಿರುವನು.) ಯಾಕೋ ಹಾಗೆ ಕೂತಿದ್ದೀ. ನಾವೆಲ್ಲ ಏನು ಮಾಡಿದೆವೋ ನಿನಗೆ?
ರಾ: ಏನೂ ಮಾಡಿಲ್ಲ.
ಲ: ಹಾಗಾದ್ರೆ ಯಾಕೆ ಹೀಗೆ ಮಾಡಬೇಕಿತ್ತು?
ರಾ: ಏನೂ ಮಾಡಿಲ್ಲ.
ಲ: ಸ್ಪಷ್ಟವಾಗಿ ಮಾತಾಡು.
ರಾ: ಆಡೋಲ್ಲ.
ಲ: ಏನು ಆಡೋಲ್ಲ. ಯಾಕ ಆಡೋಲ್ಲ. (ಅವನನ್ನು ಅಲ್ಲಾಡಿಸಿ) ಬೊಗಳೋ.
ರಾ: (ಇದ್ದಕ್ಕಿದ್ದಂತೆ ಮಾತಾಡುತ್ತ) ಸಾಕು, ಇದೆಲ್ಲ ಸಾಕು. ಮಾಡಬೇಕು ಅನ್ನೋದನ್ನ ಒಂದ್‌ಸಲಾನೂ ಮಾಡಲಾಗದ ಈ ಬದುಕು ಸಾಕು. ತಿಳೀತೆ. ಕೆಲಸ ಮಾಡ್ತೇನೆ ಅಂತಿದ್ರು ಅಪ್ಪ-ಯಾವ ಕೆಲಸಾನೂ ಮಾಡ್ತಿರಲಿಲ್ಲ. ಮಾತಾಡ್ತಿದ್ರೂ, ಯಾವ ಮಾತನ್ನೂ ಆಡ್ತಿರಲಿಲ್ಲ. ಕಲಾವಿದ ಅಂದ್ಕೊಂಡಿದ್ರೂ ಕಲಾವಿದ ಆಗಿರಲಿಲ್ಲ. ಜೀವನ ಅಂದ್ಕೊಂಡಿದ್ರೂ ಅವರದು ಜೀವನ ಆಗಿರಲಿಲ್ಲ.
ಲ: ನಿನ್ನದು ಮಾತ್ರ ಜೀವನ ಅಂತ ತಿಳ್ಕೊಂಡಿದೀಯ ಮೂರ್ಖ.
(ರಂಗಣ್ಣ ನಿದ್ರಾವಸ್ಥೆಯಲ್ಲಿರುವಂತೆ ಕತ್ತು ಬಗ್ಗಿಸಿರುವನು)
ರಾ: ಅಪ್ಪ, ಅಪ್ಪ-
(ರಂಗಣ್ಣ ಸುಮ್ಮನಿರುವನು)
ಲ: ರೀ -
(ರಂಗಣ್ಣ ಸುಮ್ಮನಿರುವನು)
ರಾ: ನಿದ್ರೆ ಅಂತ ಕಾಣುತ್ತೆ.
ಲ: ರಾಮು! (ಚೀರಿ) ನಿದ್ರೆ ಅಲ್ಲ, ಏನು ಮಾಡಿಬಿಟ್ಟೆಯೋ.
ರಾ: (ಎದ್ದು ಬೀಗದ ಕೈ ಸ್ಟೂಲಿನ ಮೇಲೆ ಎಸೆದು) ನಿದ್ರೆ ಅಮ್ಮ.
ಲ: ರಾಮು!
ರಾ: (ಗಂಭೀರವಾಗಿ) ನಿದ್ರೆ.. ಒಂದು ರೀತಿಯಲ್ಲಿ ನಿದ್ರೆ. ಗಾಢ ನಿದ್ರೆ. ನಿಮಗೆಲ್ಲ ನಿದ್ರೆಯಲ್ಲಿ ನಂಬಿಕೆ ತಾನೆ? ಇವತ್ತು ನಿದ್ರಿಸಿ ನಾಳೆ ಎದ್ದ ಹಾಗೆ ಮನುಷ್ಯ ಸಾಯ್ತಾನೆ. ಹುಟ್ತಾನೆ-
ಲ: (ಚೀರಿ) ರಾಮು!
(ಲಲಿತ ಗಂಡನ ದೇಹ ಮುಟ್ಟುವಳು. ಅದು ನಿಧಾನಕ್ಕೆ ಒರಗುವುದು. ರಾಮು ಯಾವ ಭಾವನೆಯನ್ನೂ ತೋರದೆ ನಿಂತಿರುವನು. ನಿಧಾನಕ್ಕೆ ತೆರೆ.) ●

---

★ **'ಮಹಿಳೆಯರಿಗಾಗಿಯೆ ......' :**

ಅದೊಂದು ಮಹಿಳೆಯರಿಗಾಗಿಯೇ ಮೀಸಲಾದ ಮಾಸಪತ್ರಿಕೆ. ಪ್ರಥಮ ಸಂಚಿಕೆ ಹೊರಬಿದ್ದಾಗ ಅನೇಕ ಓದುಗರು ಮೆಚ್ಚುಗೆ ವ್ಯಕ್ತಪಡಿಸಿ ಶುಭಾಶಯಗಳನ್ನು ಕಳಿಸಿದ್ದರು. ಪ್ರತಿ ತಿಂಗಳೂ ಹೊಸ-ಹೊಸ ವಿಚಾರಗಳನ್ನು ಓದುಗರಿಗೆ ಅರ್ಪಿಸುತ್ತಿದ್ದ ಆ ಪತ್ರಿಕೆಗೆ ಎಂಟು ತಿಂಗಳಾಯಿತು. ಹಾಸ್ಯ ಪ್ರವೃತ್ತಿಯುಳ್ಳವರಾಗಿದ್ದ ಆ ಪತ್ರಿಕೆಯ ಸಂಪಾದಕರು 9ನೇ ತಿಂಗಳ ಸಂಚಿಕೆಯಲ್ಲಿ ಹೀಗೆ ಬರೆದರು: ''ಮಹಿಳೆಯರಿಗಾಗಿಯೇ ಮೀಸಲಾದ ನಿಮ್ಮ ಅಚ್ಚುಮೆಚ್ಚಿನ '.......' ಮಾಸಪತ್ರಿಕೆಗೆ ಈಗ ಒಂಬತ್ತು ತಿಂಗಳು ತುಂಬಿದೆ. ಅದರ ಸವಿನೆನಪಿಗಾಗಿ 'ಪುಟಾಣಿ ಪಾಪು' ಎಂಬ ಹೊಸ ಮಕ್ಕಳ ಮಾಸಪತ್ರಿಕೆಯನ್ನು ಹೊರತರುತ್ತಿದ್ದೇವೆ.''

(ಸಂಗ್ರಹ) ಎಂ.ಶಾರದಾ ನಾಗಭೂಷಣ

# ಬಹಿಷ್ಕೃತ ಲೇಖಕ ಸೊಲ್ಜೆನಿತ್ಸಿನ್



ಅರುಣ

ಸರಿಸುಮಾರು ಮೂರು ದಶಕಗಳ ಕಾಲ ತನ್ನ ತಾಯ್ನಾಡಿನಲ್ಲಿ ಬಹಿಷ್ಕೃತವಾಗಿ, ದೇಶದ್ರೋಹಿ ಎಂದು ಹೀಯಾಳಿಸಿಕೊಂಡೂ ತನ್ನ ಸೃಜನಶೀಲ ಕೃತಿಗಳ ಮೂಲಕ ಜಗತ್ತಿನ ಗಮನ ಸೆಳೆದ ವ್ಯಕ್ತಿ ಸೊಲ್ಜೆನಿತ್ಸಿನ್. ಸೋವಿಯತ್ ರಶಿಯದ ಈ ವಿವಾದಾತ್ಮಕ ಸಾಹಿತಿ 1971ರ ನೊಬೆಲ್ ಪಾರಿತೋಷಕ ವಿಜೇತ.

ಸೊಲ್ಜೆನಿತ್ಸಿನ್ ಅಲೆಕ್ಸಾಂಡರ್ ಇಸಾಯೆವಿಚ್ ರಶಿಯದ ಮಹಾಕ್ರಾಂತಿಯ ಮರುವರ್ಷ (1918) ಉತ್ತರ ಕಾವುಕಾಸಸ್‌ನ ಕಿಸ್ಲೋದ್ವಸ್ಕ್‌ದಲ್ಲಿ ಜನಿಸಿದ. ಎರಡನೇ ಮಹಾಯುದ್ಧ ಕಾಲದಲ್ಲಿ ಸೋವಿಯತ್ ಸೈನ್ಯದಲ್ಲಿ ಅಧಿಕಾರಿಯಾಗಿದ್ದ ಸೊಲ್ಜೆನಿತ್ಸಿನ್ ವೈಯಕ್ತಿಕ ಪತ್ರಗಳಲ್ಲಿ ಸ್ಟಾಲಿನ್ ಬಗೆಗೆ ಕಟು ಟೀಕೆ ಮಾಡಿದ್ದಕ್ಕಾಗಿ ಬಂಧನಕ್ಕೊಳಗಾಗಬೇಕಾಯ್ತು. ಪರಿಣಾಮವಾಗಿ 1945ರಿಂದ ಎಂಟು ವರ್ಷಗಳಷ್ಟು ಸುದೀರ್ಘಕಾಲ ರಶಿಯದ ಲೇಬರ್ ಕ್ಯಾಂಪಿನಲ್ಲಿ ಖೈದಿಯಾಗಿ ಜೈಲು ಸೋಸಿದ. ಆಗಲೇ ಸೊಲ್ಜೆನಿತ್ಸಿನ್ನನ ಲೇಖನಿ "ಐವಾನ್ ಡೆನಿಸೊವಿಚ್‌ನ ಜೀವನದಲ್ಲಿ ಒಂದು ದಿನ" ಎಂಬ ಅದ್ಭುತ ಕೃತಿಯನ್ನು ಸೃಜಿಸಿತು. ಲೇಬರ್‌ಕ್ಯಾಂಪಿನ ಖೈದಿಗಳ ಯಾತನಾಮಯ ಬದುಕನ್ನು ಯಥಾವತ್ತಾಗಿ ಚಿತ್ರಿಸಿದ ಈ ಕೃತಿ ಸ್ಟಾಲಿನ್ ಪ್ರಭುತ್ವದ ಘೋರ ಮುಖವೊಂದನ್ನು ತೆರೆದಿಟ್ಟು ರಶಿಯದ ಓದುಗ ವಲಯವನ್ನು ನಿಬ್ಬೆರಗಿನಲ್ಲಿ ತೇಲಿಸಿತು. ಜೊತೆಗೆ ಸಾಹಿತಿ ಸ್ಫೋಟಿಸಿದ ಕಟುಸತ್ಯದ ಪ್ರಖರತೆಯನ್ನೂ ತಾಳಿಕೊಳ್ಳದ ಸರಕಾರ ಈತನ ಕೃತಿಗಳನ್ನೇ ನಿಷೇಧಿಸುವ ಬಳುವಳಿ ನೀಡಿತು. ಸ್ಟಾಲಿನ್ ನಂತರ ಅಧಿಕಾರಕ್ಕೆ ಬಂದ ಕೃಶ್ಚೇವ್ ಕಾಲದಲ್ಲಿ ಕತ್ತಲಕೋಣೆಯಿಂದ ಹೊರ ಬಂದ ಸೊಲ್ಜೆನಿತ್ಸಿನ್ ಶಾಲಾ ಮಾಸ್ತರನಾಗಿದ್ದುಕೊಂಡೇ ಅನೇಕ ಮಹತ್ವದ ಕೃತಿಗಳನ್ನು ಅಕ್ಷರೀಕಸಿದ.

ಸೊಲ್ಜೆನಿತ್ಸಿನ್‌ರ ಮೊದಲ ಕೃತಿ ಪ್ರಕಟವಾದ ಬಳಿಕ ''ಇನ್ನು ಮುಂದೆ ಸೋವಿಯತ್ ಸಾಹಿತ್ಯದಲ್ಲಿ ಪ್ರತಿಯೊಂದು ಹೊಸ ಕೃತಿಯ ಮೌಲ್ಯವನ್ನು ಈ ಸಾಹಿತಿಯ ಕೃತಿಗಳ ಹಿನ್ನೆಲೆಯಲ್ಲಿ ನಿರ್ಣಯಿಸಬೇಕಾಗುತ್ತದೆ'' ಎಂದು ಸಾಹಿತಿ, ವಿಮರ್ಶಕ ಅಲೆಗ್ಸಾಂಡರ್ ತ್ವಾರ್ದೋವ್‌ಸ್ಕಿ ಹೇಳಿದ್ದನೆಂದರೆ ಸೊಲ್ಜೆನಿತ್ಸಿನ್‌ರ ಮಹತ್ವದ ಅರಿವಾದೀತು. ಆದುದರಿಂದಲೇ ಈತನ ಮೇಲೆ ರಶಿಯಾದ ಪ್ರಭುತ್ವ ನಿಷೇಧ ವಿಧಿಸಿದರೂ ಓದುಗರ ಮೇಲಿನ ಸಾಹಿತಿಯ ಹಿಡಿತ ಶಿಥಿಲಗೊಳ್ಳಲಿಲ್ಲ.

ಕ್ರುಶ್ಚೇವ್ ಅಧಿಕಾರದಿಂದ ಉರುಳಿ ಬ್ರೆಜ್ನೆವ್‌ರ ಆಳ್ವಿಕೆ ಆರಂಭವಾದ ಬಳಿಕ ಮತ್ತೆ ಸಾಹಿತ್ಯ ಹಾಗೂ ಸಾಂಸ್ಕೃತಿಕ ರಂಗದ ಮೇಲೆ ಸರಕಾರದ ಹಿಡಿತ ಬಲವಾಯಿತು. ಇದೇ ಸಂದರ್ಭದಲ್ಲಿ ಸೋವಿಯತ್ ಲೇಖಕರ ನಾಲ್ಕನೇ ಸಮ್ಮೇಳನಕ್ಕೆ ಪತ್ರವೊಂದನ್ನು ಬರೆದ ಸೊಲ್ಜೆನಿತ್ಸಿನ್ ಸರಕಾರದ ಸೆನ್ಸಾರ್ ನೀತಿಯನ್ನು ಮತ್ತು ಸಾಂಸ್ಕೃತಿಕ ರಂಗ ಪೊಲೀಸ್ ವರ್ತುಲಗಳ ಕಪಿಮುಷ್ಠಿಯಲ್ಲಿರುವುದನ್ನು ಬಲವಾಗಿ ಪ್ರತಿಭಟಿಸಿದ. ಪರಿಣಾಮವಾಗಿ 1969ರಲ್ಲಿ ಆತನನ್ನು ಸೋವಿಯತ್ ಲೇಖಕರ ಒಕ್ಕೂಟದಿಂದ ಉಚ್ಚಾಟಿಸಲಾಯಿತು.

ಈ ಸಾಹಿತಿಯ ಕೃತಿಗಳು ಪಾಸ್ತರ್‌ನಾಕರ ಕೃತಿಗಳಿಗಿಂತಲೂ ಹೆಚ್ಚು ಅಪಾಯಕಾರಿ ಎಂದು ಕವಿ ಅಲೆಕ್ಸಿ ಸುರ್ಕೋವ್ ಅಭಿಪ್ರಾಯಪಟ್ಟರೆ, ಆಗ ಪ್ರಾವ್ದಾ ಪತ್ರಿಕೆಯ ಸಂಪಾದಕರಾಗಿದ್ದ ಮಿಖಾಯಿಲ್ ಜಿಮ್ಯೂನಿನ್ 'ಸೊಲ್ಜೆನಿತ್ಸಿನ್ ಒಬ್ಬ ಹುಚ್ಚ' ಎಂದು ಘೋಷಿಸಿಬಿಟ್ಟರು. ಅರವತ್ತು ಮತ್ತು ಎಪ್ಪತ್ತರ ದಶಕದಲ್ಲಿ ತ್ವಾರ್ದೋವ್‌ಸ್ಕಿ, ವ್ಲದಿಮೊವ್, ಬೋರಿಸ್ ಮೊಶಾಯೆವ್ ಮುಂತಾದ ಕೆಲವೇ ಕೆಲವು ಬೆರಳೆಣಿಕೆಯ ಸಾಹಿತಿಗಳಿಗೆ ಮಾತ್ರ ಸೊಲ್ಜೆನಿತ್ಸಿನ್‌ರ ಬರಹಗಳನ್ನು ಸಮರ್ಥಿಸುವ ಎದೆಗಾರಿಕೆ ಇತ್ತು. 1963ರಲ್ಲಿ ಪ್ರಕಟಗೊಂಡ ಸೊಲ್ಜೆನಿತ್ಸಿನ್ನನ ಕತೆ 'ಮಾತ್ರಿಯೊನಾಳ ಮನೆ' ರಷಿಯಾದ ಸಣ್ಣ ಕತೆ ಪ್ರಕಾರದಲ್ಲಿಯೇ ಪರಾಕಾಷ್ಠೆ ಎಂದು ಗದ್ಯ ಬರಹಗಾರ ವಿಕ್ತರ್ ಅಸ್ತಾಫಯೆವ್ ಹೇಳಿದ್ದಾರೆ.

ದೇಶದ ರಾಜಕೀಯ ಪರಿಸ್ಥಿತಿ ಗಮನಾರ್ಹವಾಗಿ ಬದಲಾಗುತ್ತಿದ್ದ ಆ ದಿನಗಳಲ್ಲಿ ಸೊಲ್ಜೆನಿತ್ಸಿನ್ ನಾಲ್ಕು ಪ್ರಮುಖ ಕೃತಿಗಳ ರಚನೆಯಲ್ಲಿ ತೊಡಗಿದ್ದರು. ರಷಿಯದ ಮಹಾಕ್ರಾಂತಿಗೆ ಕಾರಣವಾದ ರಾಜಕೀಯ ಸಾಮಾಜಿಕ ಕಾರಣಗಳನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸುವ ಮಹಾಕಾದಂಬರಿಯೊಂದರ ಮೊದಲ ಭಾಗ ಆರ್-17 ಸಾಂಕೇತಿಕ ಹೆಸರಿನಲ್ಲಿ ರಚನೆಯಾಗುತ್ತಿತ್ತು. 'ಫಸ್ಟ್ ಸರ್ಕಲ್' ಪ್ರಥಮ ಸೋವಿಯತ್ ವಿರೋಧಿ ಕಾದಂಬರಿ. ರಶಿಯದ ಆಧುನಿಕ ಇತಿಹಾಸದಲ್ಲಿ ಪ್ರಮುಖ ತಿರುವು ಬಿಂದು ಎನಿಸಿದ, ದೇಶಾಭಿಮಾನಿ ಸಮರವೆಂದು ಕರೆಸಿಕೊಂಡ ಎರಡನೇ ಜಾಗತಿಕ ಮಹಾಯುದ್ಧದಲ್ಲಿ ರಶಿಯದ ಪಾತ್ರವನ್ನು ಈ ಕಾದಂಬರಿಯಲ್ಲಿ ಕಟು ಟೀಕೆಗೊಳಪಡಿಸಲಾಗಿದೆ. ಈ ಸಮರ ರಶಿಯ ಕಂಡರಿಯದ ದುಃಖಭರಿತ ಗೋಳಿನ ಯುದ್ಧವಾಗಿತ್ತೆಂದೂ ಟೀಕಿಸಿರುವ ಈ ಕೃತಿಯಲ್ಲಿಯೇ ಸಮಾಜವಾದವೆಂಬ 'ಮಿತ್' (ಕಟ್ಟು ಕತೆ) ಅನ್ನು ತರಾಟೆಗೆ ತೆಗೆದುಕೊಂಡಿದ್ದಾನೆ ಸೊಲ್ಜೆನಿತ್ಸಿನ್.

ರಶಿಯ ಸರಕಾರ ಸಾಹಿತಿಗಳಿಗೆ ನೀಡುವ ಅತ್ಯುನ್ನತ ಗೌರವವಾದ ಲೆನಿನ್ ಪ್ರಶಸ್ತಿ ಸೊಲ್ಜೆನಿತ್ಸಿನ್‌ಗೆ ದೊರಕದೇ ಹೋದಾಗಲೇ ಮುಂಬರುವ ದಿನಗಳ ಮುನ್ಸೂಚನೆ ಸಿಕ್ಕಿತೆನ್ನಬಹುದು. 1965ರಲ್ಲಿ ಕ್ರುಶ್ಚೇವ್ ಅಧಿಕಾರದಿಂದ ಉರುಳಿದ ನಂತರ ಬ್ರೆಜ್ನೇವ್‌ರ ಸರಕಾರ ಸೊಲ್ಜೆನಿತ್ಸಿನ್‌ರ ಕೃತಿಗಳನ್ನು ನಿಷೇಧಿಸಿತು. ಅವನ ಬರಹಗಳ ಎಲ್ಲ ಹಸ್ತಪ್ರತಿಗಳನ್ನು ವಶಪಡಿಸಿಕೊಂಡಿತು. ಇಂಥ ಯಾವ ಕ್ರಮಗಳಿಗೂ ಸೊಲ್ಜೆನಿತ್ಸಿನ್‌ನ ಪೆನ್ನಿನ ಮೇಲೆ ನಿಯಂತ್ರಣ ಸಾಧಿಸಲು ಸಾಧ್ಯವಾಗಲಿಲ್ಲ. ಭೂಗತರಾಗಿಯೇ ಸೃಜನಶೀಲ ಚಟುವಟಿಕೆಯನ್ನೂ ಮುಂದುವರಿಸಿದರು. 1971ರಲ್ಲಿ ಮತ್ತೊಮ್ಮೆ ಪೊಲೀಸರು ಸೊಲ್ಜೆನಿತ್ಸಿನ್ನರ ನಿವಾಸದ ಮೇಲೆ ದಾಳಿ ಮಾಡಿ ಬರಹಗಳನ್ನು ಬಾಚಿಕೊಂಡೊಯ್ದರು. ಎರಡು ವರ್ಷಗಳ ನಂತರ 'ಗುಲಾಗ್ ಅರ್ಚಿಪೆಲಾಗೊ' ಪ್ಯಾರೀಸಿನಲ್ಲಿ ಅಚ್ಚಾಯಿತು. 'ಈ ಕೃತಿಯ ಪ್ರಕಟಣೆಯ ಮಹ

ತ್ವವನ್ನು ಸ್ಟಾಲಿನ್‌ರ ಸಾವಿನ ಮಹತ್ವಕ್ಕೆ ಮಾತ್ರ ಹೋಲಿಸಲು ಸಾಧ್ಯ' ಎಂದು ವಿಮರ್ಶಕಿ ಲಿಡಿಯಾ ಚುಕೊವ್‌ಸ್ಕಾಯ್ ನಿಗೂಢವಾಗಿ ಹೇಳುತ್ತಾರೆ.

1971ರ ತರುವಾಯದ ಘಟನೆಗಳು ಎಲ್ಲರಿಗೂ ಗೊತ್ತಿದೆ. ಕೆ.ಜಿ.ಬಿ. ಪ್ರಧಾನ ಕಾರ್ಯಾಲಯದಲ್ಲಿ ಸೊಲ್ಜೆನಿತ್ಸಿನ್‌ನ ವಿಚಾರಣೆ ನಡೆದು ಸೋವಿಯತ್ ಪೌರತ್ವವನ್ನು ಕಿತ್ತುಕೊಳ್ಳಲಾಯಿತು. 'ದೇಶದ್ರೋಹಿ' ಪಟ್ಟದೊಂದಿಗೆ ಮಾಸ್ಕೋ-ಕೊಲೊನ್ ವಿಮಾನದ ಮೂಲಕ ದೇಶದಿಂದ ಹೊರದಬ್ಬಿದರು.

### ವರ್ಮಾಂಟಿನ ಸಾಧು

ಎರಡು ವರ್ಷಗಳ ಅನಂತರ ಸೊಲ್ಜೆನಿತ್ಸಿನ್ ತನ್ನ ಪತ್ನಿ ನತಾಲ್ಯಳೊಂದಿಗೆ ಅಮೆರಿಕದ ವರ್ಮಾಂಟ್ ನಗರಕ್ಕೆ ಆಗಮಿಸಿದ. ಪಾಶ್ಚಾತ್ಯ ದೇಶಗಳಲ್ಲಿ ಪ್ರಕಟವಾದ ಅವನ ಕೃತಿಗಳಿಗೆ ಗೌರವಧನವಾಗಿ ದೊರೆತ ಹಣದಲ್ಲಿ ವರ್ಮಾಂಟ್‌ನ ಬೆಟ್ಟ ಪ್ರದೇಶದಲ್ಲಿ ಐವತ್ತು ಎಕರೆ ಸ್ಥಳ ಖರೀದಿಸಿ ಅಲ್ಲಿ ನೆಲೆಸಿದ. ಕ್ಯಾನ್ಸರ್ ವಾರ್ಡ್, ಫಸ್ಟ್ ಸರ್ಕಲ್‌ನಂತಹ ಶ್ರೇಷ್ಠ ಕೃತಿಗಳನ್ನು ರಚಿಸಿದ ಸೊಲ್ಜೆನಿತ್ಸಿನ್ ಕ್ರಮೇಣ ಸಾರ್ವಜನಿಕರ ದೃಷ್ಟಿಯಿಂದ ಮರೆಯಾದ. ವರ್ಮಾಂಟ್‌ನ ಆಸುಪಾಸಿನಲ್ಲಿ ಆತ 'ವರ್ಮಾಂಟ್‌ನ ಸಾಧು' ಎಂದು ಹೆಸರಾಗಿದ್ದಾನೆ.

ವರ್ಮಾಂಟ್‌ನಲ್ಲಿ ಹದಿಮೂರು ವರ್ಷಗಳ ಏಕಾಂತ ಜೀವನದಲ್ಲಿ ಸೊಲ್ಜೆನಿತ್ಸಿನ್ 'ರೆಡ್ ವೀಲ್' ಎಂಬ ಮಹಾ ಕಾದಂಬರಿಯ ರಚನೆಯಲ್ಲಿ ತೊಡಗಿದ. ರಶಿಯದ ಮಹಾಕ್ರಾಂತಿಗೆ



೧೯೭೪ರಲ್ಲಿ ಸೊಲ್ಜೆನಿತ್ಸಿನ್ ನಟಾಲಿಯಾ ಮತ್ತು ಯರಮೋಲಿ ಅವರೊಂದಿಗೆ

ಕಾರಣವಾದ ಘಟನಾವಳಿಗಳ ಕಥಾವಸ್ತುವಿರುವ ಕಾದಂಬರಿಗಳ ಸರಣಿಯಿದು. ಪತ್ನಿ ನತಾಲ್ಯಳ ಸಹಕಾರವಿಲ್ಲದಿರುತ್ತಿದ್ದರೆ ಈ ಕಾದಂಬರಿಯ ರಚನೆ ಸಾಧ್ಯವಾಗುತ್ತಿರಲಿಲ್ಲ ಎಂದು ಸೊಲ್ಜೆನಿತ್ಸಿನ್ ಹೇಳಿದ್ದಾನೆ. ದಿನದಲ್ಲಿ ಹನ್ನೆರಡು ತಾಸು ದುಡಿದು 5000 ಪುಟಗಳ ಮಹಾಕಾವ್ಯವೊಂದನ್ನು ಸೊಲ್ಜೆನಿತ್ಸಿನ್ ರಚಿಸಿದ್ದಾನೆ. ಅಗಸ್ಟ್ 1914ರ ಪರಿಷ್ಕೃತ ಆವೃತ್ತಿ ಮೊದಲನೇ ಜಾಗತಿಕ ಯುದ್ಧ ಕಾಲದಲ್ಲಿ ರಶಿಯನ್ ಸಮಾಜದ ಬದುಕನ್ನು ವಿವಿಧ ದೃಷ್ಟಿಕೋನಗಳಿಂದ ಚಿತ್ರಿಸಿದೆ. ಸಮರದಲ್ಲಿ ಸಹಭಾಗಿಯಾಗಲು ರಶಿಯ ಎಷ್ಟು ಮಾತ್ರಕ್ಕೂ ಸಿದ್ಧವಾಗಿರಲಿಲ್ಲ ಎಂದು ಸೊಲ್ಜೆನಿತ್ಸಿನ್ ಹೇಳುತ್ತಾನೆ.

### ಕ್ರಾಂತಿಯ ಪ್ರತಿಬಿಂಬ

'ರೆಡ್ ವೀಲ್' ಕೃತಿ 21ನೇ ಶತಮಾನಕ್ಕೆ ಜಗತ್ತು ಅಡಿಯಿಡುತ್ತಿರುವ ಸಂದರ್ಭದಲ್ಲಿ 19ನೇ ಶತಮಾನದ ರಶಿಯಾದ ಪ್ರತಿಬಿಂಬವನ್ನು ಮೂಡಿಸಿದೆ. ಐತಿಹಾಸಿಕ ಮಹಾಕಾವ್ಯವೆನ್ನಬಹುದಾದ ಈ ಮಹಾಕಾದಂಬರಿ ಐರೋಪ್ಯ ಸಾಹಿತ್ಯದಲ್ಲಿ ಡಾಂಟೆಯ 'ಡಿವೈನ್ ಕಾಮೆಡಿ' ಬೀರಿದಷ್ಟೇ ಪ್ರಭಾವವನ್ನು ರಶಿಯನ್ ಸಾಹಿತ್ಯದ ಮೇಲೆ ಬೀರಲಿದೆ ಎಂದು ಪಾಶ್ಚಾತ್ಯ ಸಾಹಿತ್ಯ ವಿಮರ್ಶಕರು ಭಾವಿಸುತ್ತಾರೆ. 'ರೆಡ್ ವೀಲ್' ಗಾತ್ರದಲ್ಲಿ ಟಾಲ್‌ಸ್ಟಾಯ್ ಅವರ ''ಯುದ್ಧ ಮತ್ತು ಶಾಂತಿ'' ಕೃತಿಗಿಂತ ಹಲವು ಸಾವಿರ ಪುಟಗಳಷ್ಟು ದೊಡ್ಡದು. ಸುಲಭದಲ್ಲಿ ಓದಿ ಮುಗಿಸಲು ಸಾಧ್ಯವಾಗುವ ಪುಸ್ತಕವಲ್ಲ. ''ನಮ್ಮ ಇತಿಹಾಸವನ್ನು ಅರ್ಥಮಾಡಿಕೊಳ್ಳಲು ಈ ಕೃತಿ ಸಹಾಯಕವಾಗುತ್ತದೆ'' ಎಂದು ಸೊಲ್ಜೆನಿತ್ಸಿನ್ ಹೇಳುತ್ತಾನೆ.

''ಟಾಲ್‌ಸ್ಟಾಯ್ ಮತ್ತು ದೊಸ್ತೊಯೆವ್‌ಸ್ಕಿ ಬಗ್ಗೆ ಸೊಲ್ಜೆನಿತ್ಸಿನ್‌ಗೆ ಅಪಾರ ಗೌರವವಿದೆ. ಸಾಹಿತ್ಯ ವ್ಯವಸಾಯದ ದೃಷ್ಟಿಯಿಂದ ಅವರಿಬ್ಬರೊಂದಿಗೆ ನನಗೆ ರಕ್ತ ಸಂಬಂಧವಿದೆ. ಕಥಾ ನಿರೂಪಣೆ ತಂತ್ರದ ದೃಷ್ಟಿಯಿಂದ ನಾನು ಟಾಲ್‌ಸ್ಟಾಯ್‌ಗೆ ನಿಕಟವಾಗಿದ್ದೇನೆ. ಆದರೆ ಇತಿಹಾಸಕ್ಕೆ ಆಧ್ಯಾತ್ಮಿಕ ಅಭಿವ್ಯಕ್ತಿ ನೀಡುವ ಯತ್ನದಲ್ಲಿ ನಾನು ದೊಸ್ತೊಯೆವ್‌ಸ್ಕಿಗೆ ನಿಕಟವಾಗಿದ್ದೇನೆ'' ಎಂದು ಸೊಲ್ಜೆನಿತ್ಸಿನ್ ಹೇಳುತ್ತಾನೆ.

ರಶಿಯದ ಮಹಾಕ್ರಾಂತಿಯನ್ನು ವರ್ಣಿಸಿದ ಕಾದಂಬರಿಯ ಹಲವು ಸರಣಿಗಳಿಗೆ ಒಟ್ಟಾರೆ ಆತ ''ಕೆಂಪು ಚಕ್ರ ಎಂದು ಹೆಸರಿಟ್ಟಿದ್ದಾನೆ. ಅದು ಸಾಮಾನ್ಯ ಬಂಡಿಯ ಚಕ್ರವಲ್ಲ. ಅದು ದೈತ್ಯಾಕಾರದ ಚಕ್ರ. ಒಮ್ಮೆ ಉರುಳಲು ಆರಂಭಿಸಿದರೆ, ಉರುಳಲು ತೊಡಗಿಸಿದವರೂ ಸೇರಿ ಎಲ್ಲರೂ ಅದರಡಿಯಲ್ಲಿ ನಿಸ್ಸಹಾಯಕ ಅಣುಗಳಾಗುತ್ತಾರೆ. ಈ ದೈತ್ಯ ಪ್ರಕ್ರಿಯೆ ಒಮ್ಮೆ ಆರಂಭವಾದರೆ ಅದನ್ನು ನಿಲ್ಲಿಸಲು ನಮ್ಮಿಂದ ಸಾಧ್ಯವಿಲ್ಲ.'' ಈ ಕೃತಿ ರಚನೆಗೆ ಸೊಲ್ಜೆನಿತ್ಸಿನ್ 53 ವರ್ಷಗಳಿಂದ ಸಿದ್ಧತೆ ನಡೆಸುತ್ತಿದ್ದ. ಈ ಅವಧಿಯಲ್ಲಿ ಆತ ನಡೆಸಿದ ಅಧ್ಯಯನ, ಸಂಶೋಧನೆ, ಚಿಂತನೆ ಎಲ್ಲವೂ ಕೃತಿಯಲ್ಲಿ ಮುಪ್ಪುರಿಗೊಂಡಿವೆ.

ರಶಿಯದ ಮಹಾಕ್ರಾಂತಿಯ ನಿರ್ಣಾಯಕ ಘಟನೆ 1917ರ ಅಕ್ಟೋಬರ್ ಕ್ರಾಂತಿ ಎಂದು ಪೂರ್ವ ಮತ್ತು ಪಾಶ್ಚಾತ್ಯ ದೇಶಗಳಲ್ಲಿ ವಿದ್ವಾಂಸರು ನಂಬಿದ್ದಾರೆ. ದೀರ್ಘಕಾಲದವರೆಗೆ ಸೊಲ್ಜೆನಿತ್ಸಿನ್‌ಗೂ ಅದೇ ನಂಬಿಕೆ ಇತ್ತು. ಆದರೆ ಕ್ರಮೇಣ ಆತನ ಅಭಿಪ್ರಾಯ ಬದಲಾಯಿತು. ರಶಿಯನ್ ಮಹಾಕ್ರಾಂತಿಯ ಪ್ರಮುಖ ನಿರ್ಣಾಯಕ ಘಟನೆ ಫೆಬ್ರವರಿ ಕ್ರಾಂತಿಯೇ ವಿನಾ ಅಕ್ಟೋಬರ್ ಕ್ರಾಂತಿಯಲ್ಲ ಎಂದು ಆತ ಹೇಳುತ್ತಾನೆ. ಅಕ್ಟೋಬರ್ ಕ್ರಾಂತಿಯನ್ನು ಹೆಚ್ಚೆಂದರೆ ಕ್ಷಿಪ್ರ ಸೇನಾಕ್ರಾಂತಿ ಎನ್ನಬಹುದು. 1920ರ ದಶಕದುದ್ದಕ್ಕೂ ಬೊಲ್ಶೆವಿಕ್‌ರು ಅದನ್ನು ಅಕ್ಟೋಬರ್ ಕ್ಷಿಪ್ರ ಕ್ರಾಂತಿ ಎಂದೇ ಕರೆಯುತ್ತಿದ್ದರು.

ಸೋವಿಯೆತ್ ಸಮಾಜದ ಅತ್ಯಂತ ಕ್ರೂರವೂ ಅಮಾನುಷವೂ ಆಗಿದ್ದ ದಂಡನೆ ವ್ಯವಸ್ಥೆಯ ಅಂತರಾಳವನ್ನು ಬಗೆದು ವಿಶ್ಲೇಷಿಸಿದ್ದು ಸೊಲ್ಜೆನಿತ್ಸಿನ್ನನ ಮಹಾಸಾಧನೆ. ಈ ದೃಷ್ಟಿಯಿಂದ ಸೊಲ್ಜೆನಿತ್ಸಿನ್‌ರ 'ಐವಾನ್ ಡೆನಿಸೊವಿಚ್‌ನ ಜೀವನದಲ್ಲಿ ಒಂದು ದಿನ', 'ಫಸ್ಟ್ ಸರ್ಕಲ್' ಮತ್ತು

'ಗುಲಗ್ ಆರ್ಚಿಪೆಲಾಗೊ' ಕೃತಿಗಳ ಅಧ್ಯಯನ ಆಸಕ್ತಿಕರ.

''ಕಳೆದ 70 ವರ್ಷಗಳಿಂದ ನಮ್ಮ ದೇಶದಲ್ಲಿ ನಾವು ಎಲ್ಲವನ್ನೂ ನಾಶ ಮಾಡುತ್ತಾ ಬಂದಿದ್ದೇವೆ. ಜನರ ಬದುಕು, ಅದರ ಜೀವ ವೈಜ್ಞಾನಿಕ ಪರಿಸರ, ನೈತಿಕ ಹಾಗೂ ಆರ್ಥಿಕ ತಳಹದಿಯನ್ನು ನಾಶಗೊಳಿಸಿದ್ದೇವೆ'' ಎಂದು ಸೊಲ್ಜೆನಿತ್ಸಿನ್ ಕಟುವಾಗಿ ಹೇಳುತ್ತಾನೆ.

ಕಳೆದ ಆಗಸ್ಟನಲ್ಲಿ ಅಧ್ಯಕ್ಷ ಮಿಖಾಯಿಲ್ ಗೊರ್ಬಚೆವ್ ಅಲೆಗ್ಸಾಂಡರ್ ಸೊಲ್ಜೆನಿತ್ಸಿನ್‌ಗೆ ಸೋವಿಯೆತ್ ಪೌರತ್ವವನ್ನು ಮರಳಿ ದಯಪಾಲಿಸುವ ಶಾಸನವೊಂದನ್ನು ಹೊರಡಿಸಿದರು. ರಶಿಯಕ್ಕೆ ಹಿಂತಿರುಗಲು ಮನವಿ ಮಾಡಿದರು.

ಆದರೆ ಸೊಲ್ಜೆನಿತ್ಸಿನ್‌ನ ಪ್ರತಿಕ್ರಿಯೆ ಅಷ್ಟು ಉತ್ಸಾಹದಾಯಕವಾಗಿಲ್ಲ. ಅಧ್ಯಕ್ಷರ ಶಾಸನ ಯಾವ ರೀತಿಯಿಂದಲೂ ಸೊಲ್ಜೆನಿತ್ಸಿನ್‌ಗೆ ಅನ್ವಯವಾಗುವುದಿಲ್ಲ ಎಂದು ಆತನ ಪತ್ನಿ ಹೇಳುತ್ತಾಳೆ. ಹಿಂದಿನ ಸರಕಾರ ಸೊಲ್ಜೆನಿತ್ಸಿನ್‌ರಿಗೆ ನೀಡಿದ ಕಿರುಕುಳ ಅಕ್ರಮ ಎಂದು ಮೊದಲು ಸೋವಿಯೆತ್ ಅಧಿಕಾರಿಗಳು ಒಪ್ಪಬೇಕು ಎಂಬುದು ಆಕೆಯ ನಿಲುವು.

''ನನ್ನ ದೇಶಕ್ಕೆ ಪ್ರವಾಸಿಯಾಗಿ ಭೇಟಿ ನೀಡಲು ನನಗೆ ಇಷ್ಟವಿಲ್ಲ. ರಶಿಯಕ್ಕೆ ನಾನು ಹಿಂತಿರುಗಿದರೆ ಅಲ್ಲಿಯೇ ನಾನು ಬದುಕುತ್ತೇನೆ, ಸಾಯುತ್ತೇನೆ. ತೀವ್ರ ಹತಾಶೆ ಅನುಭವಿಸುತ್ತಿದ್ದ ವರ್ಷಗಳಲ್ಲಿಯೂ ನಾನು ಒಂದಲ್ಲ ಒಂದು ದಿನ ರಶಿಯಕ್ಕೆ ಹಿಂತಿರುಗಿಯೇನು ಎಂಬ ಭರವಸೆ ನನಗಿತ್ತು. ನನ್ನ ದೇಶದ ಯಾತನೆಗಳ ಬಗ್ಗೆ ನಾನು ಯಾವತ್ತೂ ಯೋಚಿಸುತ್ತಿದ್ದೆ. ಈಚೆಗಷ್ಟೇ ನಾನು ನನ್ನ ದೇಶದ ಪ್ರಸಕ್ತ ರಾಜಕೀಯ ಪರಿಸ್ಥಿತಿಯ ಬಗ್ಗೆ ಲೇಖನವೊಂದನ್ನು ಬರೆದು ಮುಗಿಸಿದ್ದೇನೆ. (ಈ ಲೇಖನ ಈಚೆಗೆ ಕೊಮ್ಸೊಮೊಲ್‌ಸ್ಕಾಯ ಪ್ರಾವ್ದಾ ಮತ್ತು ''ಲಿತರೇಚುರನ್ನಯಾ ಗಜೆತಾ'' ಪತ್ರಿಕೆಗಳಲ್ಲಿ ಪ್ರಕಟವಾಗಿದೆ.)

''ನನ್ನ ಪುಸ್ತಕಗಳು ಜನರಿಗೆ ತಲುಪುವ ಮೊದಲೇ ರಶಿಯಕ್ಕೆ ಬರಲು ನನಗಿಷ್ಟವಿಲ್ಲ. ದಶಕಗಳಿಂದ ನಿಂದೆ, ಆಪಾದನೆ, ಅವಹೇಳನಕ್ಕೆ ಗುರಿಯಾದ ನನ್ನ ಬಗ್ಗೆ ಮೊದಲು ನನ್ನ ದೇಶ ಬಾಂಧವರು ಅರ್ಥ ಮಾಡಿಕೊಳ್ಳಬೇಕು'' ಎಂದು ಸೊಲ್ಜೆನಿತ್ಸಿನ್ ಹೇಳುತ್ತಾರೆ. ರಶಿಯದ ಪ್ರಧಾನ ಮಂತ್ರಿ, ಐವಾನ್ ಸಿಲಾಯೆವ್ ಅವರು ಸೊಲ್ಜೆನಿತ್ಸಿನ್‌ಗೆ ಸ್ವದೇಶಕ್ಕೆ ಹಿಂತಿರುಗಲು ಮನವಿ ಮಾಡಿ ಬರೆದ ಪತ್ರಕ್ಕೆ ಸಾಹಿತಿಯ ಪ್ರತ್ಯುತ್ತರದಲ್ಲಿ ಈ ಆಶಯಗಳು ವ್ಯಕ್ತವಾಗಿವೆ. ●

---

ಒಳ್ಳೆಯ ಸಂಪ್ರದಾಯ, ಭಯ, ನಾಚಿಕೆ, ದಾಕ್ಷಿಣ್ಯ ಮತ್ತು ಕೊಡುಗೈ ಈ ಐದು ಇಲ್ಲದಿರುವಲ್ಲಿ ಒಂದು ದಿನವೂ ನಿಲ್ಲಬೇಡ.

– ಬೃಹಸ್ಪತಿ

ತಂದೆ-ತಾಯಿಗಳ ಸ್ವೇಚ್ಛಾಚಾರ ಕಡಿಮೆಯಾದರೆ ಬಾಲ ಅಪರಾಧಿಗಳ ಸಂಖ್ಯೆ ಕಡಿಮೆಯಾಗುತ್ತದೆ.

– ಬೈಬಲ್

ದೇವರಿಗಾಗಿಯೇ ದೇವಾಲಯವನ್ನು ಕಟ್ಟುವುದಾದಲ್ಲಿ ಅಂಥವರು ಅಮೃತಶಿಲೆಯ ಮೇಲೆ ತಮ್ಮ ಹೆಸರು ಕೆತ್ತಿಸುವುದಿಲ್ಲ.

ಸಂಗ್ರಹ : ಭೀಮಸೇನ ಪದಕಿ – ಪೋಪ್

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

**ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

**1. ಮಥಿತಾರ್ಥ**
(ಅ) ಬೆಣ್ಣೆ
(ಆ) ಕಷ್ಟದಿಂದ ಸಂಪಾದಿಸಿದ ಹಣ
(ಇ) ಚೆನ್ನಾಗಿ ಚರ್ಚಿಸಿ ಸಿದ್ಧವಾದ ವಿಚಾರ
(ಈ) ಅಮಲೇರಿದ ಆನೆ

**2. ಮದಲಗಿತ್ತಿ**
(ಅ) ಮದುವೆಯ ಹೆಣ್ಣು
(ಆ) ರಾಷ್ಟ್ರಾಧ್ಯಕ್ಷರ ಹೆಂಡತಿ
(ಇ) ಕಾಮುಕ ಹೆಣ್ಣು
(ಈ) ಕಂಬದಲ್ಲಿ ಕೆತ್ತಿದ ಹೆಣ್ಣು ಮೂರ್ತಿ

**3. ಪಾರಮ್ಯ**
(ಅ) ತುಂಬಿಯ ಗಾನ
(ಆ) ಅತಿ ಶ್ರೇಷ್ಠತೆ
(ಇ) ದಾಟಿ ಹೋಗುವುದು
(ಈ) ಮರಣ

**4. ಜನವಾದ**
(ಅ) ಪ್ರಜಾತಂತ್ರ
(ಆ) ಶಹರು ಪ್ರದೇಶ
(ಇ) ಉಪದೇಶ
(ಈ) ಗಾಳಿ ಸುದ್ದಿ

**5. ಸಂಕೇತ**
(ಅ) ಕೂಡಿಸಿದ್ದು
(ಆ) ಬಾವುಟ
(ಇ) ಜಂಗುಳಿ
(ಈ) ಗುರುತು

**6. ಸುತ್ತೋಲೆ**
(ಅ) ಕಿವಿಯ ಆಭರಣ
(ಆ) ಆವರಣದ ಗೋಡೆ
(ಇ) ಅನೇಕರಿಗೆ ಹಂಚಲು ಪ್ರತಿ ಮಾಡಿದ ಪತ್ರ
(ಈ) ಫೇರಾಯಿಸುಪಿಕೆ

**7. ಹಿಕಮತ್ತು**
(ಅ) ಹಕ್ಕಿನ ಪತ್ರ
(ಆ) ತಂತ್ರ
(ಇ) ಒಂದೇ ಅಭಿಪ್ರಾಯ
(ಈ) ಗಮ್ಮತ್ತು

**8. ಲೌಡಿ**
(ಅ) ದಾಸಿ
(ಆ) ಬೆನ್ನಿಗೆ ಆನಿಸುವ ದಿಂಬು
(ಇ) ಮೋಸಗಾರ್ತಿ
(ಈ) ಗೌಡತಿ

**9. ಮಿಣಿ**
(ಅ) ಹಗ್ಗ
(ಆ) ನಕ್ಷತ್ರ
(ಇ) ಪ್ರಕಾಶ
(ಈ) ಬಾಗು

**10. ಮೆಳೆ**
(ಅ) ಭಾರೀ ಮಳೆ
(ಆ) ಬಿರುಕು
(ಇ) ಚಿಗುರು
(ಈ) ಗುಂಪಾಗಿ ಬೆಳೆದ ಗಿಡಗಳು

**11. ತುಂಡರಸು**
(ಅ) ಚೂರು ಚೂರು ಮಾಡು
(ಆ) ಅಧೀನ ರಾಜ
(ಇ) ಹೊಗಳುಭಟ್ಟ
(ಈ) ಮುಖ್ಯಸೇವಕ

**12. ಖಾದ್ಯ**
(ಅ) ತಿನ್ನುವ ಪದಾರ್ಥ
(ಆ) ಕಂಪಕ
(ಇ) ಬಾರಿಸುವ ವಾದ್ಯ
(ಈ) ಆಶ್ಚರ್ಯ

# ಶಬ್ದಭಾಂಡಾರದ ಸರಿಯಾದ ಅರ್ಥಗಳು

1. ಮಥಿತಾರ್ಥ

(ಇ) ಚೆನ್ನಾಗಿ ಚರ್ಚಿಸಿ ಸಿದ್ಧವಾದ ವಿಚಾರ, ಸಾರಾಂಶ, ತಾತ್ಪರ್ಯ. ಉದಾ: ಮಾತುಕಥೆಯ ಮಥಿತಾರ್ಥವೆಂದರೆ, ಯುದ್ಧವಿಲ್ಲದೆ ಪ್ರಶ್ನೆ ತೀರ್ಮಾನವಾಗದು. (ಸಂ. ಮಥಿತ=ಕಡೆದ+ಅರ್ಥ=ಪ್ರಯೋಜನ)

2. ಮದಲಗಿತ್ತಿ

(ಅ) ಮದುವೆಯ ಹೆಣ್ಣು, ಮದುವಣಗೆ, ವಧು, ಹೊಸತಾಗಿ ಮದುವೆಯಾದವಳು. ಉದಾ: ಮದಲಗಿತ್ತಿಯಂತೆ ಮೆರೆಯುವೆಯೇ ತಾಯಿ (ಬೇಂದ್ರೆ). (ದೇಶ್ಯ ಮದ= ಜೋಡಿಸುವಿಕೆ)

3. ಪಾರಮ್ಯ

(ಅ) ಅತಿ ಶ್ರೇಷ್ಠತೆ; ಪರಾಕಾಷ್ಠೆ, ತುತ್ತತುದಿ. ಉದಾ: ವಿಷ್ಣುಪಾರಮ್ಯ, ಶಿವಪಾರಮ್ಯದ ಜಗಳ ತೀರ್ಮಾನವಾಗಲಿಲ್ಲ. (ಸಂ. ಪರಮ= ಅತಿಮೇಲಿನದು)

4. ಜನವಾದ

(ಈ) ವದಂತಿ, ಹಾರಿಕೆಯ ಸುದ್ದಿ, ಜನರಲ್ಲಿ ಹಬ್ಬಿದ ವಾರ್ತೆ; ಅಪವಾದ, ಲೋಕನಿಂದೆ. ಉದಾ: ಜನವಾದಕ್ಕೆ ಅಂಜಿ ನಡೆಯಬೇಕು. (ಸಂ. ಜನ+ವಾದ= ಚರ್ಚೆಯ ವಿಷಯ)

5. ಸಂಕೇತ

(ಈ) ಗುರುತು, ಚಿಹ್ನೆ; ಸುಳಿವು, ಸೂಚನೆ. ಉದಾ: ಗೂಢಚಾರರಿಂದ ದೊರೆತ ಸಂಕೇತ. (ಸಂ.)

6. ಸುತ್ತೋಲೆ

(ಇ) ಅನೇಕರಿಗೆ ಹಂಚಲು ಪ್ರತಿ ಮಾಡಿದ ಪತ್ರ, ಸರ್ಕುಲರ್ ಎಂಬ ಇಂಗ್ಲೀಷ್ ಪದಕ್ಕೆ ಪ್ರತಿಯಾಗಿ ತಯಾರಿಸಿದ ಕನ್ನಡ ಪದ. ಉದಾ: ಸರಕಾರಿ ಸುತ್ತೋಲೆ. (ದೇಶ್ಯ-ಸುತ್ತು+ಓಲೆ)

7. ಹಿಕಮತ್ತು

(ಅ) ತಂತ್ರ, ಉಪಾಯ, ಸಂಚು, ಬುದ್ಧಿವಂತಿಕೆ. ಉದಾ: ನಿನ್ನ ಹಿಕಮತ್ತು ನಾ ಬಲ್ಲೆ. (ಅರಬ್ಬಿ-ಹಿಕ್ಮತ್)

8. ಲೌಡಿ

(ಅ) ದಾಸಿ, ಸೇವಕಿ; ಗುಲಾಮ ಹೆಣ್ಣು; ಸೂಳೆ. ಉದಾ: ಲೌಡೀ ಮಗನನ್ನು ನೋಡಿಕೊಳ್ಳುತ್ತೇನೆ. (ಹಿಂದಿ- ಲೌಂಡಾ= ಹುಡುಗ, ದಾಸ- ಅದರ ಸ್ತ್ರೀಲಿಂಗ)

9. ಮಿಣಿ

(ಅ) ಚರ್ಮದಿಂದ ಮಾಡಿದ ಹಗ್ಗ. ಉದಾ: ಮಿಣಿಯಿಂದ ಬಿಗಿದ ಆಸನ. (ದೇಶ್ಯ - ಮಿಳಿ, ಮಿಣಿ)

10. ಮೆಳೆ

(ಈ) ಗಿಡಗಳ ದಟ್ಟಗುಂಪು. ಉದಾ: ಬಿದಿರ ಮೆಳೆ ಧಗಧಗಿಸಿತು. (ದೇಶ್ಯ)

11. ತುಂಡರಸು

(ಅ) ಅಧೀನ ರಾಜ, ಮಾಂಡಲಿಕ, ಪಾಳೆಯಗಾರ. ಉದಾ: ತುಂಡರಸುಗಳ ಕಾಟದಿಂದ ಜನ ಬೇಸತ್ತರು. (ದೇಶ್ಯ- ತುಂಡು= ಅಲ್ಪಭಾಗ+ ಅರಸು)

12. ಖಾದ್ಯ

(ಅ) ತಿನ್ನುವ ಪದಾರ್ಥ, ತಿಂಡಿ, ತಿನಿಸು. ಉದಾ: ಖಾದ್ಯ ಪದಾರ್ಥಗಳ ಕೊರತೆ ಹೆಚ್ಚಾಗಿತ್ತು. (ಸಂ.)

**ನಿಮ್ಮ ಶಬ್ದಶಕ್ತಿಯ ತರಗತಿ**

ನೀವು ನಿಮ್ಮ ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂಬುದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

6- 8 ಸರಿಯಿದ್ದರೆ ... ಸಾಧಾರಣ
9-10 " ... ಉತ್ತಮ
11-12 " ... ಅತ್ಯುತ್ತಮ

ರಾಜ್ಯಪುನರ್ವಿಂಗಡಣಾ ಸಮಿತಿಯ ನಿರೂಪಣೆಯಂತೆ, ಹರಿದು ಹಂಚಿ ಹೋಗಿದ್ದ ಕನ್ನಡನಾಡು 1956ರಲ್ಲಿ 'ಮೈಸೂರು ರಾಜ್ಯ' ಎಂಬ ಹೆಸರಿನಿಂದಲೇ ಬಹುತೇಕ ಒಂದಾಯಿತು. ಆದರೆ ರಾಜ್ಯಕ್ಕೆ 'ಕರ್ನಾಟಕ' ಎಂಬ ನಾಮಧೇಯವಿಡಲು 1972ರ ನವೆಂಬರ್ ಒಂದರ ತನಕ ಕಾಯಬೇಕಾಯಿತು. ಸಾವಿರಾರು ವರ್ಷಗಳ ಇತಿಹಾಸವಿರುವ 'ಕರ್ನಾಟಕ'ವನ್ನು ಮತ್ತೆ ಹಾಗೆನ್ನಲು ಹದಿನಾರು ವರ್ಷಗಳೇ ಬೇಕಾಯಿತು. 'ಕರ್ನಾಟಕ' ಶಬ್ದಕ್ಕೆ ವಿವಿಧ ಕಾಲಗಳಲ್ಲಿ ಬೆಳೆದು ಬಂದ ಅರ್ಥಸಂಗ್ರಹಣೆ ಇಲ್ಲಿದೆ.

*ಎಂ. ಆರ್. ರಾಮಸ್ವಾಮಿ, ಕೆಂಗೇರಿ*

# ಕರ್ನಾಟಕ ಎಂದರೇನು?

'ಕರ್ನಾಟಕ' ಎಂಬ ಹೆಸರಿಗೆ ಸಾವಿರಾರು ವರ್ಷಗಳ ಇತಿಹಾಸವಿದೆ. ಭದ್ರವಾದ ಹಿನ್ನೆಲೆಯಿದೆ; ಅನೂಚಾನವಾಗಿ ಬಂದಿರುವ ಒಂದು ಸಂಪ್ರದಾಯವಿದೆ. 'ಕರ್ನಾಟಕ' ದೇಶವಾಚಕವಾಗಿಯೂ ಅಂದರೆ ಒಂದು ಗೊತ್ತಾದ ಭೂಭಾಗವನ್ನು ಗುರುತಿಸಲು ಬಳಸಲ್ಪಟ್ಟಿದೆ. ಹಾಗೆಯೇ ಕನ್ನಡ ಭಾಷೆಯ ಪರ್ಯಾಯ ಪದವಾಗಿಯೂ ಉಪಯೋಗಿಸಲ್ಪಟ್ಟಿದೆ. ನಮ್ಮ ರಾಜ್ಯದ ಭೌಗೋಳಿಕ ವಿವರಣೆ ದೊರೆಯುವ ಮೊದಲ ಗ್ರಂಥ 'ಕವಿರಾಜಮಾರ್ಗ'. ಇದರ ಕರ್ತೃ 'ಶ್ರೀವಿಜಯ' ಕಾವೇರಿಯಿಂದ ಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್' ಎನ್ನುವಾಗ ಕಾವೇರಿಯಿಂದ ಗೋದಾವರಿಯವರೆಗೆ ಅಂದರೆ ಈ ಎರಡು ನದಿಗಳ ನಡುವಣ ಪ್ರದೇಶ 'ಕರ್ನಾಟಕ' ಎನ್ನುವುದು ಆತನ ಅಭಿಪ್ರಾಯವಾಗಿತ್ತು. ಪೌರಾಣಿಕಯುಗದಲ್ಲೂ ಕರ್ನಾಟಕ ಪ್ರಸಿದ್ಧವಾದ ನಾಡು ಆಗಿತ್ತು ಎಂಬುದರಲ್ಲಿ ಯಾವ ಸಂದೇಹಕ್ಕೂ ಅವಕಾಶವಿಲ್ಲ. ಕಪಿಧ್ವಜರಾದ ವಾಲಿ, ಸುಗ್ರೀವರ ಕಿಷ್ಕಿಂಧೆ, ಪಂಪಾ ಸರೋವರ, ಶಬರಿಯ ಆಶ್ರಮ, ಜಟಾಯುವಿನ ವಾಸಸ್ಥಳ ಎನ್ನುವ ಜಟಿಂಗ ರಾಮೇಶ್ವರ ಇದೆಲ್ಲ ನಮ್ಮ ನಾಡಿನ ಪ್ರಾಚೀನತೆಯನ್ನು ಬಹಳ ಹಿಂದಕ್ಕೆ ತೆಗೆದುಕೊಂಡು ಹೋಗುವ ಸಾಧನಗಳು. ಮಹಾಭಾರತದಲ್ಲಿ, 'ಅಥಾಪರೇ ಜನಪದಾ ದಕ್ಷಿಣಾ ಭರತರ್ಷಭ ದ್ರಾವಿಡಾಃ ಕೇರಳಾಃ ಪ್ರಾಚ್ಯಾಃ ಮೂಷಿಕಾ ವನವಾಸಿಕಾಃ।। ಕರ್ನಾಟಕಃ ಮಹಿಷಕಃ ವಿಕಲ್ಪಾಃ ಮೂಷಕಸ್ತಥಾ'

(ಭೀಷ್ಮಪರ್ವ 9; 58.59)

ಎಂಬಲ್ಲಿ ಕರ್ನಾಟಕದ ಉಲ್ಲೇಖವಿದೆ. ಭಾಗವತ ಮಹಾಪುರಾಣದಲ್ಲಿ 'ಕೊಂಕ ವೆಂಕಟಕಾನ್ ದಕ್ಷಿಣ ಕರ್ನಾಟಕಾನ್ ದೇಶಾನ್' ಎಂದೂ ಕರ್ನಾಟಕದ ಉಲ್ಲೇಖ ಕಂಡು ಬರುತ್ತದೆ. 'ಸ್ಕಂದ ಪುರಾಣ'ದಲ್ಲಿ 'ಕರ್ನಾಟಕ'ನೆಂಬೀ ದೈತ್ಯನು ತನ್ನ ಹೆಸರಿನಿಂದ ಪಶ್ಚಿಮ ಕರಾವಳಿಯಲ್ಲಿ ಒಂದು ರಾಜ್ಯ ಸ್ಥಾಪಿಸಿದನೆಂದೂ ಅದೇ 'ಕರ್ನಾಟ' ಆಯಿತು ಎಂದೂ ಒಂದು ಅಭಿಪ್ರಾಯವುಂಟು. ಇಂತಹ ಕತೆಗಳ ಸತ್ಯಾಸತ್ಯತೆ ಏನೇ ಆಗಿದ್ದರೂ ಕರ್ನಾಟಕದ ಉಲ್ಲೇಖ ಇಲ್ಲಿದೆ.

ವರಾಹ ಮಿಹಿರನ (ಕ್ರಿ.ಶ. 500) ಬೃಹತ್ಸಂಹಿತೆಯ ಕೂರ್ಮ ವಿಭಾಗದಲ್ಲಿ 'ಕರ್ಣಾಟ ಮಹಾಟವಿ ಚಿತ್ರಕೂಟ ನಾಸಿಕ್ಯಾ ಕೊಲ್ಲಗಿರಿ ಚೋಲಾಃ' ಎಂಬಲ್ಲಿ 'ಕರ್ಣಾಟ'ದ ಹೆಸರಿದೆ. ವಾತ್ಸ್ಯಾಯನನ ಕಾಮಸೂತ್ರದ ಟೀಕೆ 'ಜಯಮಂಗಲಾ'ದಲ್ಲಿ ಕರ್ಣಾಟಕ, ಮಹಾರಾಷ್ಟ್ರಗಳು ಒಂದಕ್ಕೊಂದು ಹೊಂದಿದ್ದ ದೇಶಗಳೆಂದು ಹೇಳಿದೆ ಎಂಬುದಾಗಿ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ವಿದ್ಯಾರತ್ನ ಶ್ರೀ ಆರ್.ಎಸ್. ಪಂಚಮುಖಿಯವರು 'ಪುರಾಣಗಳಲ್ಲಿ ಬರುವ ಕರ್ಣಾಟಕದ ಸಂಕುಚಿತ ವ್ಯಾಪ್ತಿಯನ್ನು ಅರ್ಥವಿಸಲಾಗುವುದಿಲ್ಲ, ಎಂದು ಅಭಿಪ್ರಾಯಪಡುತ್ತಾರೆ. ಇದು ತುಂಬ ಪ್ರಾಮಾಣಿಕವಾದ ಮಾತೂ ಹೌದು. ಆದರೆ ಇದರಿಂದ 'ಕರ್ಣಾಟಕ' ಶಬ್ದದ ಪ್ರಾಚೀನತೆಗೆ ಏನೂ ಅಡ್ಡಿಯಾಗಲಾರದು. ಇಂತಹ 'ಕರ್ಣಾಟಕ' ಶಬ್ದದ ನಿಷ್ಪತ್ತಿ ಕಂಡು ಹಿಡಿಯಲು ಅನೇಕ ಪ್ರಯತ್ನಗಳು ನಡೆದಿವೆ. 'ಇದಮಿತ್ಥಂ' ಎಂಬ ತೀರ್ಮಾನಕ್ಕೆ ಬರಲು ಸಾಧ್ಯವಾಗಿಲ್ಲ. 'ಕರ್ಣಾಟಕ' ಶಬ್ದದ ಅರ್ಥವಿವರಣೆಗೆ ಪ್ರಯತ್ನಿಸಿದ ವಿದ್ವಾಂಸರುಗಳ ಪ್ರಯತ್ನದಿಂದಾಗಿ, ಈ ಶಬ್ದದ ಅರ್ಥ ಇಂಥದೇ ಎಂದರೆ ಇಷ್ಟೇ ಎಂಬುದಕ್ಕಿಂತ, ಈ ಶಬ್ದಕ್ಕೆ, ಎಂತೆಂತಹ ವಿವರಣೆ ಸಾಧ್ಯ ಎಂಬುದನ್ನು ತಿಳಿದಂತಾಗುತ್ತದೆ. ಈ ಬಗ್ಗೆ ಅನೇಕ ವಿವರಣೆಗಳನ್ನು ಒಂದೆಡೆ ಸಂಗ್ರಹಿಸಿರುವ ಪ್ರಯತ್ನವನ್ನು ಶ್ರೀ ಸಿ.ಹಯವದನರಾಯರು ಸಂಪಾದಿಸಿದ 'ಮೈಸೂರ್ ಗೆಜೆಟಿಯರ್'ನ ಪ್ರಥಮ ಸಂಪುಟದಲ್ಲಿ ನೋಡಬಹುದು. ಈ ಶಬ್ದದ ಅರ್ಥವಿವರಣೆಯ ಪ್ರಯತ್ನ ಅಲ್ಲಿಗೇ ನಿಲ್ಲಲಿಲ್ಲ.

ಮುಂದೆ ನಡೆದ ಪ್ರಯತ್ನಗಳನ್ನು ಇತ್ತೀಚೆಗೆ ಭಾಷಾವಿಜ್ಞಾನ, ಸಂಸ್ಕೃತಿ ಚರಿತ್ರೆ, ಸಾಹಿತ್ಯ ಚರಿತ್ರೆಗಳನ್ನು ಬರೆದ ವಿದ್ವಾಂಸರುಗಳು ತಮ್ಮ ಗ್ರಂಥದಲ್ಲಿ ತಿಳಿಸುತ್ತಾರೆ.

'ಕರ್ಣಾಟಕ' ಎಂಬ ಸಂಸ್ಕೃತ ಶಬ್ದದ ತದ್ಭವ ರೂಪವೇ 'ಕನ್ನಡ' ಎಂದೂ ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟರು. ಇರಬಹುದು; ಇವರೆಲ್ಲ ಸಂಸ್ಕೃತವೇ ಕನ್ನಡದ ಮಾತೃಭಾಷೆ ಎಂದು ನಂಬಿದ್ದ ವರ್ಗ. ಕನ್ನಡ ಭಾಷೆಯೇ ಸಂಸ್ಕೃತದಿಂದ ಬಂದದ್ದು ಎಂದು ಒಪ್ಪಿಕೊಂಡರೆ ಕನ್ನಡ ಶಬ್ದ ಸಂಸ್ಕೃತದ ತದ್ಭವರೂಪ ಎಂದು ಧಾರಾಳವಾಗಿ ಒಪ್ಪಿಕೊಳ್ಳಬಹುದು. ಆದರೆ ದ್ರಾವಿಡ ಭಾಷಾ ವಿಜ್ಞಾನದ ಮೂಲಕ ತಿಳುವಳಿಕೆ ಉಂಟಾದ ಮೇಲೆ ಕನ್ನಡ ಶಬ್ದವಾಗಲಿ ಭಾಷೆಯಾಗಲಿ, ದ್ರಾವಿಡ ಭಾಷಾ ಮೂಲಕ್ಕೆ ಸೇರಿದುದು ಎಂದು ಆಗಿರುವ ತೀರ್ಮಾನವೇ ಬಹುಜನ ವಿದ್ವಾಂಸರಿಗೆ ಸಮ್ಮತವಾದುದಾಗಿದೆ. ಕ್ರಿ.ಶ. 2ನೇ ಶತಮಾನದಷ್ಟು ಪ್ರಾಚೀನವಾದ ತಮಿಳು ಗ್ರಂಥ 'ಶಿಲಪ್ಪದಿಗಾರಂ'ನಲ್ಲಿ 'ಕನ್ನಡರ್' ಎಂಬ ಪ್ರಯೋಗವೂ ಕ್ರಿ.ಶ. 770ರ ಪಾಂಡ್ಯ ಪರಾಂತಕನ 'ವೇಳ್ವಿಕ್ಕುಡಿ ಪಟಗಳಲ್ಲಿ' 'ಕರುನಾಡಗಮ್' ಎಂಬ ರೂಪವೂ ದೊರೆಯುತ್ತವೆ. ಭಟ್ಟಾಕಲಂಕನ 'ಶಬ್ದಾನುಶಾಸನ'ದಲ್ಲಿ ಕರ್ಣಾಟಕದ ವಿವರಣೆ ಬರುತ್ತದೆ. 'ಪ್ರಸಿದ್ಧವಾದ ಸರ್ವಜನವಿದಿತವಾದ ದೇಶ ಜನರ ರಾಜರ ಯಶಸ್ಸು, ಪ್ರಸಿದ್ಧಿ ಕಿವಿಯಲ್ಲಿ ಸದಾ ಮೊಳಗುತ್ತಿರುವುದರಿಂದ 'ಕರ್ಣಾಟ ಎಂದು ಸಂಸ್ಕೃತ ವ್ಯುತ್ಪತ್ತಿ ಹೇಳಲಾಗುವುದು (ನೋಡಿ, ಕನ್ನಡ ಭಾಷಾ ಸ್ವರೂಪ ಪುಟ 70).

ಅಲ್‌ಬೆರೂನಿಯ ಪ್ರಕಾರ 'ಕರ್ಣಾಟ' ಎಂದರೆ ಸಮಗ್ರವಾದ ದಕ್ಷಿಣ ಭಾರತ. ಬಹುಶಃ ಇಲ್ಲಿಂದಲೇ 'ಕರ್ಣಾಟ' ಶಬ್ದ ತಪ್ಪು ಅರ್ಥದಲ್ಲಿ ಗ್ರಹಿಕೆಯಾಗುತ್ತಾ ಬಂದಿತು ಎಂದು ತೋರುತ್ತದೆ. ಅನಂತರ ಇಲ್ಲಿಗೆ ಮೊದಲು ಬಂದ ಮಹಮದೀಯರು ಮೈಸೂರು ಮತ್ತು ತೆಲಂಗಾಣದ ಭಾಗಗಳನ್ನು 'ಕರ್ಣಾಟಕ' ಎಂದರೆ, ಅವರಾದ ಮೇಲೆ ಬಂದ ಇಂಗ್ಲೀಷಿನವರು ಸಮಗ್ರ ತಮಿಳುನಾಡು ಸೇರುವ ಘಟ್ಟದ ಕೆಳಗಿನ ಕಾರಮಂಡಲ್ ತೀರಪ್ರದೇಶ ಮತ್ತು ಆಂಧ್ರದ ನೆಲ್ಲೂರನ್ನು ಸೇರಿಸಿ 'ಕರ್ಣಾಟಕ' ಎಂದು ಕರೆದರು. ಇದು ಬಹಳ ತಪ್ಪು ಎನ್ನುತ್ತಾರೆ ಡಾ. ಕಾಲ್ಡ್‌ವೆಲ್. ಪಾಶ್ಚಾತ್ಯ ವಿದ್ವಾಂಸರು ಕನ್ನಡಕ್ಕೆ ಸಲ್ಲಿಸಿರುವ ಸೇವೆಯನ್ನು ನಾವು ಎಂದೂ ಮರೆಯುವಂತಿಲ್ಲ.

ಅವರಲ್ಲಿ ಕೆಲವರು ವಿದ್ವಾಂಸರು ಈ ಶಬ್ದದ ಅರ್ಥವಿವರಣೆಗೆ ಪ್ರಯತ್ನ ಮಾಡಿದ್ದಾರೆ.

ಡಾ. ಗುಂಡರ್ಟ ಅವರು ಇಲ್ಲಿನ ಹತ್ತಿ ಬೆಳೆಯುವ ಕಪ್ಪು ಮಣ್ಣಿನ ಪ್ರದೇಶವನ್ನು ಗಮನಿಸಿ ಇದು 'ಕರುನಾಡು', ಎಂದರೆ ಕಪ್ಪು ಮಣ್ಣಿನ ಪ್ರದೇಶ ಎಂದು ಅರ್ಥ ಮಾಡಿದರು. ಸರ್ ವಾಲ್ಟರ್ ಈಲಿಯಟ್‌ರವರು 'ಕರ್ಣಾಟ' ಶಬ್ದದ 'ಕರ್ಣ'ವನ್ನು ಶಾತಕರ್ಣಿಗಳ 'ಕರ್ಣಿ' ಅಥವಾ 'ಕರ್ಣ'ದ ಜತೆ ಸಂಬಂಧ ಕಲ್ಪಿಸಲು ಪ್ರಯತ್ನಿಸಿದ್ದಾರೆ. ಇಲ್ಲಿ ಮೌರ್ಯರ ನಂತರ ಕಂಡು ಬರುವ ಪ್ರಥಮ ರಾಜವಂಶ ಶಾತಕರ್ಣಿಗಳದ್ದು ಎಂಬುದು ಗಮನಾರ್ಹವಾದುದು. ಇನ್ನೊಂದು ಸ್ವಾರಸ್ಯಕರವಾದ ವಿವರಣೆ ಹೀಗಿದೆ. 'ಕನ್ನಡವಕ್ಕಿ' ಎಂದರೆ 'ಗಿಣಿ'. ಇದನ್ನು ಪಂಡಿತವಕ್ಕಿ ಎಂದೂ ಕರೆಯುತ್ತಾರೆ. ಈ ಭೂಭಾಗಕ್ಕೆ ಪ್ರವೇಶಿಸುವ ಮುನ್ನವೇ ಕಿವಿಗಿಂಪಾದ ಶಬ್ದ ಕೇಳುತ್ತದೆ. ಆದುದರಿಂದ ಈ ಪ್ರದೇಶ 'ಕರ್ಣಾಟಕ' ಎನ್ನುತ್ತಾರೆ. ಮೆಕೆಂಜಿಯವರೂ ರೈಸರೂ ಇದನ್ನೇ ಸ್ವಲ್ಪ ಹೆಚ್ಚು ಕಡಿಮೆ ಮಾಡಿ 'ಕಿವಿಗಿಂಪಾದ ಕನ್ನಡ ಭಾಷೆಯ ಪ್ರದೇಶ' ಎಂದು ಅಭಿಪ್ರಾಯಪಟ್ಟಿದ್ದಾರೆ. ಫಾದರ್ ಹೆರಾಸ್ ಅವರು ಯಾವಾಗಲೂ ಕನ್ನಡದ ಪಕ್ಷಪಾತಿಗಳು. ಹರಪ್ಪಾ, ಮೊಹೆಂಜೋದಾರೋಗಳ ಚಿತ್ರಲಿಪಿ 'ಕನ್ನಡ' ಎಂದು ಅಭಿಪ್ರಾಯಪಟ್ಟಿದ್ದರು. ಅದರ ಸತ್ಯಾಸತ್ಯತೆ ಏನಾದರೂ ಆಗಲಿ ಫಾದರ್ ಹೆರಾಸರ ಕನ್ನಡಾಭಿಮಾನ ಮಾತ್ರ ಮೇಲ್ಮೆಯಾಗಿದೆ. ಇವರು ಅಲ್ಲಿನ ಚಿತ್ರವೊಂದರಲ್ಲಿ ಕಣ್ಣಿನಿಂದ ನೀರಹನಿ ತೊಟ್ಟಿಕ್ಕುತ್ತಿರುವುದನ್ನು ಕಂಡು ಕಣ್+ನೀರು=ಕಣ್ಣೀರು, ಕಣ್ಣರ್=ಕನ್ನಡರ್ ಎಂದಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತ ಮಾಡಿದರು.

ಪಾಶ್ಚಾತ್ಯ ವಿದ್ವಾಂಸರಲ್ಲೆಲ್ಲಾ ತುಂಬ ವಿಚಿತ್ರವಾದ ವಿವರಣೆ ಶ್ರೀ ಸಿ.ಪಿ.ಬ್ರೌನ್ ಅವರದು. ಅವರ ಪ್ರಕಾರ ಉತ್ತರ ಅಮೇರಿಕದ 'ಕೆನಡೋ' ದಿಂದ 'ಕನಡೋ' ಬಂದಿದೆ. ಹಾಗೆಂದರೆ 'ನಮ್ಮಲ್ಲಿ ಏನೂ ಇಲ್ಲ' ಎಂದು ಅರ್ಥ. ಪಾಶ್ಚಾತ್ಯ ವಿದ್ವಾಂಸರ ಈ ಅರ್ಥವಿವರಣೆಯನ್ನು ಕಂಡು ಕನ್ನಡದ ವಿದ್ವಾಂಸರು ಸುಮ್ಮನೆ ಕೂರಲಿಲ್ಲ. ಕವಿ ಚರಿತ್ರೆಕಾರರಿಂದ ಹಿಡಿದು ಶಂ.ಬಾ. ಜೋಶಿಯವರೆಗೆ ಅನೇಕ ವಿದ್ವಾಂಸರು ತಮ್ಮದೇ ಆದ ರೀತಿಯಲ್ಲಿ 'ಕರ್ನಾಟಕ' ಶಬ್ದಕ್ಕೆ ಅರ್ಥ ಮಾಡಿದ್ದಾರೆ. ಈ ಮಧ್ಯೆ ಒಂದು ಕಾಲ್ಪನಿಕ ವಿವರಣೆ ಹೀಗಿದೆ:

''ಇದು ಮಹಾಭಾರತದ ಕರ್ಣನ 'ಆಟನ' ಪ್ರದೇಶ, ಎಂದರೆ ವಿಹಾರ ಸ್ಥಳವಾಗಿತ್ತು. ಆದರಿಂದ ಇದನ್ನು 'ಕರ್ಣಾಟಕ' ಎನ್ನುತ್ತಾರೆ. ಇಲ್ಲಿಗೆ ಕರ್ಣ ಒಬ್ಬನೇ ಬಂದಿದ್ದನೋ ಹೇಗೆ ಎಂದು ಕೇಳಬಾರದು. ರಾ.ನರಸಿಂಹಾಚಾರ್ಯರ ಪ್ರಕಾರ ಕಮ್ಮಿತು+ನಾಡು: ಕನ್ನಾಡು; ಇದೇ 'ಕನ್ನಡು' 'ಕನ್ನಡ' ಎಂದಾಗಿದೆ. ಇದರ ಅರ್ಥ ಪರಿಮಳ ವಿಶಿಷ್ಟವಾದ, ಗಂಧದ ಗುಡಿಯಾದ ಈ ನಾಡಿನ ಭಾಷೆ ಕನ್ನಡ'' ಎಂದು.

ಮಹಾರಾಷ್ಟ್ರದ ರಾಜವಾಡೆಯವರು 'ಕರಣರು ಮತ್ತು ನಾಟಕರು' ಎಂಬ ಎರಡು ಜನಾಂಗಗಳು ಕೂಡಿ ಆದ ಪ್ರದೇಶ 'ಕರ್ಣಾಟ' ಎಂದು ಅಭಿಪ್ರಾಯಪಟ್ಟಿದ್ದಾರೆ. ಹಿರಿಯ ಸಂಶೋಧಕರಾದ ಶಂ.ಬಾ.ಜೋಶಿಯವರ ಅಭಿಪ್ರಾಯದಂತೆ ಕನ್ನರು ಕನ್ನಡದ ಮೂಲ ಪುರುಷರು, ಕನ್ನರು ನೆಲೆಸಿದ ನಾಡು 'ಕರ್ನಾಡು' ಎಂದಾಗಿದೆ.

ದ.ರಾ.ಬೇಂದ್ರೆ ಮತ್ತು ಬೆಟಗೇರಿ ಕೃಷ್ಣಶರ್ಮರು 'ಕನ್ನಳ್' ಎಂಬುದೇ 'ಕನ್ನಾಡು' ಆಗಿರಬೇಕು. ಹಾಗೆಂದರೆ 'ಭಾವವನ್ನು ಒಡಮೂಡಿಸುವುದು ಕನ್ನಡ ಭಾಷೆ' ಎಂಬ ಅರ್ಥವತ್ತಾದ ಹೆಸರು ಈ ಭಾಷೆಯದು ಎಂದು ಅಭಿಪ್ರಾಯಪಡುತ್ತಾರೆ. ಈ ನಾಡಿನ ಎತ್ತರ, ವಿಸ್ತಾರಗಳನ್ನು ಗಮನದಲ್ಲಿಟ್ಟುಕೊಂಡ ಇನ್ನೊಂದು ಅಭಿಪ್ರಾಯ ಹೀಗಿದೆ. ಗೋವಿಂದ ಪೈ ಮತ್ತು ದೇಶಪಾಂಡೆ ಅವರ ಪ್ರಕಾರ ಇದು ಕರು+ನಾಡು, ದೊಡ್ಡ ದೇಶ; ಮಹಾರಾಷ್ಟ್ರ. ಅದರಿಂದ ಕರ್ಣಾಟಕ ಎಂದರೆ ಮಹಾರಾಷ್ಟ್ರ ಎಂದೇ ಅರ್ಥ ಎನ್ನುತ್ತಾರೆ.

ಹತ್ತಂಗಡಿ ನಾರಾಯಣರಾಯರ ಪ್ರಕಾರ 'ಕ

ರು' ಎಂದರೆ ಎತ್ತರ (ನೋಡಿ: ಕರ ಮಾಡು) ಇದು ಸಮುದ್ರ ಮಟ್ಟಕ್ಕಿಂತ ಸಾವಿರಾರು ಅಡಿ ಎತ್ತರದ ಪ್ರದೇಶವನ್ನು ಪಡೆದು 'ಕರ್ ನಾಡು' ಆಗಿದೆ.

ರೆವರೆಂಡ್ ಉತ್ತಂಗಿ ಚನ್ನಪ್ಪನವರ ಪ್ರಕಾರ ಇದು ಕಣ್+ಅಡಿಗರ ಕನ್ನಡಿಗರು ಆಗಿರಬೇಕು. ಏಕೆಂದರೆ ಕನ್ನಡನಾಡಿನಲ್ಲೆಲ್ಲಾ ವೀರಭದ್ರನ ಗುಡಿಗಳು ಸಾಮಾನ್ಯ. ಕನ್ನಡಿಗರು ವೀರಭದ್ರನ ಭಕ್ತರು. ವೀರಭದ್ರನಿಗೆ ಕಾಲಿನಲ್ಲಿ ಕಣ್ಣಿದೆ. ಅದರಿಂದ ಅವನ ಭಕ್ತರಿಗೆ 'ಕಣ್ಣಡಿಗರ್' ಎಂದು ಹೆಸರು ಬಂದಿರಬೇಕು.

'ಕರ್ಣಾಟಕ' ಶಬ್ದದ ಬಗ್ಗೆ ನಡೆದಿರುವ ಚರ್ಚೆ ಅಷ್ಟೇ ಅಲ್ಲ. ಈ ಬಗ್ಗೆ ಹೊಸ ಅರ್ಥ ವಿವರಣೆಗಳು ಬರುವ ಸಂಭವ ಇನ್ನೂ ಉಂಟು. 'ಕನ್ನಡ' 'ಕರ್ಣಾಟಕ' ಶಬ್ದಗಳ ಬಗ್ಗೆ ವಿದ್ವಾಂಸರಲ್ಲಿ ಇರುವ ಅಭಿಪ್ರಾಯ ಭೇದಗಳ ಕೇವಲ ದಿಕ್ಸೂಚಿ ಇದು. ಈ ಶಬ್ದದ ಅರ್ಥ ಈ ಎಲ್ಲ ವಿವರಣೆಗಳನ್ನೂ ಒಳಗೊಂಡು ಇನ್ನೂ ಹೊಸ ವಿವರಣೆಗಳಿಗೆ ಅವಕಾಶವನ್ನು ಹೊಂದಿದೆ. ಆಚಾರ್ಯ ಬಿ.ಎಂ.ಶ್ರೀ ಅವರು ಒಮ್ಮೆ ಅಂದಂತೆ 'ನಮ್ಮ ಮಾತೇನೂ ನೆನ್ನೆ ಮೊನ್ನೆಯ ಕಾಡು ಮಾತಲ್ಲ; ನಮ್ಮ ಕಾವ್ಯ ಮಾಲೆ ಓದು ಬರಹ ಬಾರದ ಒಡ್ಡರು ಹೇಳುವ ಕುರುಕು ಪದವೂ ಅಲ್ಲ' ಎಂಬ ಮಾತು ಬರಿಯ ಅಭಿಮಾನದ ನುಡಿ ಮಾತ್ರವಲ್ಲ; ಸತ್ಯಸ್ಯ ಸತ್ಯ ಎಂಬುದು ವಿಧಿತವಾಗುತ್ತದೆ.

(ಆಧಾರ ಗ್ರಂಥಗಳು :
ಮೈಸೂರ್ ಗೆಜೆಟಿಯರ್ ಸಂಪುಟ I,
ಕರ್ಣಾಟಕ ಇತಿಹಾಸ,
ಕನ್ನಡ ಭಾಷಾ ಸ್ವರೂಪ ಇತ್ಯಾದಿ)

★ **ಪರಿಚಯ ಪತ್ರ :**

**ಅಂ**ದು ಏಪ್ರಿಲ್ ಒಂದನೇ ದಿನಾಂಕ, ಅರ್ಥಾತ್ ಮೂರ್ಖರ ದಿವಸ, ಕೆಲವು ತುಂಟರು ಸೇರಿಕೊಂಡು ಅವರ ಲೆಕ್ಚರರ್‌ನ್ನು ಫೂಲ್ ಮಾಡಬೇಕೆಂದು ಯೋಜಿಸಿದ್ದರು. ಅವರಲ್ಲಿ ಒಬ್ಬನಿಗೆ ''ದಿಥೀರ್ ಐಡಿಯಾ'' ಹೊಳೆಯಿತು. ಅದರಂತೆ ಒಂದು ಚೀಟಿಯಲ್ಲಿ ದೊಡ್ಡದಾಗಿ April Fool ಎಂದು ಬರೆದು ಟೇಬಲ್ಲಿನ ಮೇಲಿಟ್ಟ.

ಧಪ್, ಧಡ್, ಬೆವರೊರೆಸಿಕೊಳ್ಳುತ್ತಾ ಬಂದ ಲೆಕ್ಚರರ್ ಅಟೆಂಡೆನ್ಸ್ ರಿಜಿಸ್ಟರನ್ನು ಟೇಬಲ್ ಮೇಲೆ ಇಡಲು ಹೋಗುತ್ತಾರೆ! ಕಣ್ಣಿಗೆ ಬಿತ್ತು ಆ ಚೀಟಿ. ಮೊದಲೇ ದೂರ್ವಾಸಮುನಿ, ಚೀಟಿಯನ್ನು ಕಂಡ ಕೂಡಲೇ ಮುಖ ಗಂಟಾಯಿತು. ವಿದ್ಯಾರ್ಥಿಗಳಿಗೆ ಒಳಗೊಳಗೇ ದಿಗಿಲು. ಆದರೆ ಒಂದು ಪವಾಡವೇ ನಡೆದಂತೆ ಜೋರಾಗಿ ನಕ್ಕ ಲೆಕ್ಚರರ್ ತರಗತಿಯನ್ನು ಉದ್ದೇಶಿಸಿ, ''ಇಲ್ಲೊಬ್ಬ ಮಹಾಶಯರು ತಮ್ಮ ವಿಜಿಟಿಂಗ್ ಕಾರ್ಡ್ ನನ್ನ ಟೇಬಲ್‌ನ ಮೇಲಿಟ್ಟಿದ್ದಾರೆ. ಕ್ಲಾಸು ಮುಗಿದ ನಂತರ ಅವರು ನನ್ನನ್ನು ನೋಡಬಹುದು'' ಎಂದ ಕೂಡಲೇ ಗಂಭೀರವಾಗಬಹುದೆಂದಿದ್ದ ಸನ್ನಿವೇಶದ ತರಗತಿಯು ನಗುವಿನ ''ಫೊಳ್'' ಎಂಬ ಶಬ್ದದಲ್ಲಿ ಅಡಗಿ ಹೋಯಿತು.

**(ಸಂಗ್ರಹ) ಎಂ.ಶಾರದಾ ನಾಗಭೂಷಣ**

# ಜೀವನದರ್ಶನ

ಕೆ.ಟಿ. ಪಾಂಡುರಂಗಿ

## ಮಾತು-ನಡತೆ

ಮಾತು ಮತ್ತು ನಡತೆಗಳಲ್ಲಿ ಏನೂ ಅಂತರವಿಲ್ಲದ ವ್ಯಕ್ತಿಗಳು ಸಿಗುವುದು ದುರ್ಲಭ. ಇದರಂತೆಯೇ ಮಾತು-ನಡತೆಗಳಲ್ಲಿ ಎಲ್ಲ ಅಂಶಗಳಲ್ಲಿಯೂ ಅಂತರವಿರುವವರು ಸಿಗುವುದೂ ದುರ್ಲಭ.

ಸಾಮಾನ್ಯವಾಗಿ ಮನುಷ್ಯನು ಮಾತಿನಂತೆ ನಡೆಯಲು ಪ್ರಯತ್ನಿಸುತ್ತಾನೆ. ಅಥವಾ ತನ್ನ ನಡತೆಯಂತೆ ಮಾತನಾಡಲು ಪ್ರಯತ್ನಿಸುತ್ತಾನೆ. ಅವರವರ ಮಾತು ಅವರವರ ನಡತೆಯ ಕನ್ನಡಿ. ಆದರೆ ಕೆಲವು ಸಲ ಮತ್ತು ಕೆಲವು ವಿಷಯಗಳಲ್ಲಿ ಮಾತಿಗೂ ಕೃತಿಗೂ ಅಂತರ ಬರುವುದು ಸಾಮಾನ್ಯರಲ್ಲಿ ಕಂಡು ಬರುತ್ತದೆ. ಪ್ರಾಮಾಣಿಕರೆಂದು ಒಪ್ಪಿತವಾದವರಲ್ಲಿಯೂ ಬರುತ್ತದೆ.

ಮನುಷ್ಯನ ನಡತೆಗೆ ಎರಡು ಮಾನದಂಡಗಳಿವೆ. ಒಂದು ಅದು ತನಗೆ ಗ್ರಾಹ್ಯವಾಗುವುದು. ಇನ್ನೊಂದು ಅದು ತನ್ನ ಸುತ್ತಲಿನವರಿಗೆ ಗ್ರಾಹ್ಯವಾಗುವುದು. ಲೋಕಕ್ಕೆ ಗ್ರಾಹ್ಯವಾಗುವುದು. ತನಗೆ ಗ್ರಾಹ್ಯವಾಗುವುದು ವಾಸ್ತವ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ಲೋಕಕ್ಕೆ ಗ್ರಾಹ್ಯವಾಗುವುದು ಸ್ವಲ್ಪ ಮಟ್ಟಿಗೆ ಆದರ್ಶದಿಂದ ಕೂಡಿರುತ್ತದೆ. ಸಾಮಾನ್ಯವಾಗಿ ಮನುಷ್ಯನು ತನಗೆ ಗ್ರಾಹ್ಯವಾಗುವಂತೆ ನಡೆಯುತ್ತಾನೆ. ಲೋಕಕ್ಕೆ ಗ್ರಾಹ್ಯವಾಗುವಂತೆ ಮಾತನಾಡುತ್ತಾನೆ. ಇವೆರಡರಲ್ಲಿ ಎಲ್ಲ ವಿಷಯಗಳಲ್ಲಿಯೂ ಅಂತರವಿರುತ್ತದೆ ಎಂಬ ನಿಯಮವಿಲ್ಲ. ಆದರೆ ಕೆಲವು ಸಂದರ್ಭಗಳಲ್ಲಿ ಅಂತರವುಂಟಾಗುತ್ತದೆ. ಇದೇ ಮಾತು ಮತ್ತು ನಡತೆಗಳಲ್ಲಿಯ ಅಂತರ. ಈ ಅಂತರವು ಅವರವರ ಸ್ವಭಾವ ಪರಿಸರ ಆಸಕ್ತಿ ಹಿತ ಅಹಿತಗಳನ್ನು ಅವಲಂಬಿಸಿರುತ್ತದೆ. ಈ ಅಂತರದ ಪ್ರಮಾಣ ಕಡಿಮೆಯಿದ್ದಷ್ಟೂ ಆ ವ್ಯಕ್ತಿಯು ಪ್ರಾಮಾಣಿಕನು ಎನಿಸಿಕೊಳ್ಳುತ್ತಾನೆ. ಅಂತರವು ಹೆಚ್ಚಾದಷ್ಟೂ ಆ ವ್ಯಕ್ತಿಯು ಅಪ್ರಾಮಾಣಿಕನೆನಿಸಿಕೊಳ್ಳುತ್ತಾನೆ. ಈ ಮಾತು ನಡತೆಗಳ ಅಂತರ ವೈಯಕ್ತಿಕ ಮತ್ತು ಸಾರ್ವಜನಿಕ ಜೀವನದಲ್ಲಿ ಅನೇಕರಿಗೆ ಭಿನ್ನಭಿನ್ನವಾಗಿರುತ್ತದೆ. ವೈಯಕ್ತಿಕ ಜೀವನದಲ್ಲಿ ಕುಟುಂಬ ಜೀವನದಲ್ಲಿ ಪ್ರಾಮಾಣಿಕರಾಗಿದ್ದು ಸಾರ್ವಜನಿಕ ಜೀವನದಲ್ಲಿ ಅಪ್ರಮಾಣಿಕರಾಗಿರುವುದಕ್ಕೆ ತಮ್ಮ ಸಾರ್ವಜನಿಕ ವ್ಯಕ್ತಿತ್ವವನ್ನು ಪ್ರತಿಷ್ಠಿತ ವ್ಯಕ್ತಿತ್ವವನ್ನಾಗಿ ಮಾಡಬೇಕೆಂಬ ಆಸೆ ಸಾರ್ವಜನಿಕ ಜೀವನ ಫಲಗಳನ್ನು ವೈಯಕ್ತಿಕವಾಗಿ ಪಡೆಯಬೇಕೆಂಬ ಆಸೆ ಕಾರಣವಾಗಿರುತ್ತವೆ.

ಮಾತು ನಡತೆಗಳ ಅಂತರವು ಅಲ್ಪವಾಗಿದ್ದಾಗ ಅದು ಬುದ್ಧಿಪೂರ್ವಕವಾಗಿರುವುದಿಲ್ಲ. ಬೇರೆಯವರನ್ನು ಮೋಸಗೊಳಿಸುವ ಉದ್ದೇಶವೂ ಇರುವುದಿಲ್ಲ. ಇದು ಬಹಳವಾದಾಗ ಬುದ್ಧಿ ಪೂರ್ವಕವಾಗಿರುತ್ತದೆ. ಬೇರೆಯವರನ್ನು ವಂಚಿಸುವುದಕ್ಕಾಗಿಯೇ ಇರುತ್ತದೆ. ಇಂಥ ದ್ವಿಮುಖ ಸ್ವಭಾವ ಕೆಲವರಿಗೆ ಹುಟ್ಟುಗುಣವಾಗಿಯೇ ಬಂದಿರುತ್ತದೆ. ಕೆಲವರಿಗೆ ಪರಿಸರದಿಂದ ಬಂದಿರುತ್ತವೆ. ●

ಮೂಲ : ಐಸಾಕ್ ಲೈಬ್ ಪೆರೆಟ್ಸ್
ಅನುವಾದ : ಸಂಧ್ಯಾ.ಎಸ್.

ಅನುತಾಪದ ದಿನಗಳ ಆಸುಪಾಸಿನಲ್ಲಿ; ಹೊಸ ವರ್ಷದಾಗಮನಕ್ಕೆ ಸ್ವಲ್ಪ ಮುಂಚೆ. ಪ್ರಪಂಚದ ಎಲ್ಲ ಯಹೂದಿಗಳು ತಮ್ಮ ಪಾಪ ನಿವಾರಣೆಗಾಗಿ ಹಾಗೂ ಮುಂಬರುವ ಹೊಸ ವರ್ಷದ ಹರ್ಷಕ್ಕಾಗಿ ಪ್ರಾರ್ಥನೆ ಮಾಡುವ ಸಮಯ. ಈ ದಿನಗಳಲ್ಲಿ ನೆಮಿರೋವ್‌ನ ಪಾದ್ರಿ ನಸುಕಿನ ಹೊತ್ತಿನಲ್ಲೇ ಕಾಣೆಯಾಗಿಬಿಡುತ್ತಿದ್ದರು.

ಯಾರ ಕಣ್ಣಿಗೂ ಬೀಳುತ್ತಿರಲಿಲ್ಲ. ಪ್ರಾರ್ಥನಾ ಮಂದಿರದಲ್ಲೂ ಇಲ್ಲ, ಓದುವ ಕೋಣೆಯಲ್ಲೂ ಇಲ್ಲ, ಎಲ್ಲೂ ಇಲ್ಲ. ಮನೆಯೊಳಗಂತೂ ಖಂಡಿತಾ ಇಲ್ಲ. ಅವರ ಮನೆ



ಬಾಗಿಲು ಖುಲ್ಲಾ ತೆರೆದಿರುತ್ತಿತ್ತು. ಹೆಂಗಸರು, ಗಂಡಸರು ಬೇಕಾದ ಹಾಗೆ ಒಳಕ್ಕೆ ಹೋಗಿಬರುತ್ತಿದ್ದರು. ಆದರೂ ರಬಾಯಿಯವರ ಮನೆಯಲ್ಲಿ ಎಂದೂ ಯಾವ ವಸ್ತುವೂ ಕಳುವಾಗಿರಲಿಲ್ಲ.

ರಬಾಯಿಯವರು ಎಲ್ಲಿರಬಹುದು?

ಸ್ವರ್ಗಕ್ಕಲ್ಲದೆ ಅವರು ಇನ್ನೆಲ್ಲಿಗೆ ಹೋಗುತ್ತಾರೆ? ಹೊಸವರ್ಷದ ಮುಂಚಿನ ದಿನಗಳಲ್ಲಿ ಅವರಿಗೆ ಬಿಡುವಿಲ್ಲದ ಕೆಲಸ. ಜೀವನೋಪಾಯ ಕಾಣದವರು, ಶಾಂತಿ-ಸಮಾಧಾನ ಕಾಣದವರು, ಆರೋಗ್ಯಭಾಗ್ಯ ಇಲ್ಲದವರು, ತಮ್ಮ ಹೆಣ್ಣುಮಕ್ಕಳಿಗೆ ವರ ಹುಡುಕುತ್ತಾ ಬಳಲಿದವರು ..... ಹೀಗೆ ಎಷ್ಟು ಜನ ಯಹೂದಿಯರಿಲ್ಲ. ಅವರಿಗೆಲ್ಲ ಆಶೀರ್ವಾದ ಮಾಡಬೇಡವೆ? ಸದ್ಗುಣಿಗಳಾಗ ಬಯಸುವ ಯಹೂದಿಯರೆಷ್ಟು ಜನರಿಲ್ಲ. ಅವರೆಲ್ಲ ದುಷ್ಟ ಶಕ್ತಿಯ ಕಾಟವಿಲ್ಲದಿದ್ದರೆ ಬಹುಶಃ ಒಳ್ಳೆಯವರಾಗೇ ಇರುತ್ತಿದ್ದರು. ಈ ದುಷ್ಟ ಶಕ್ತಿಯು ತನ್ನ ಸಾವಿರ ಕಣ್ಣುಗಳಿಂದ ಪ್ರಪಂಚದ ಮೂಲೆಮೂಲೆಗಳನ್ನು ನೋಡುತ್ತಿರುತ್ತದೆ; ಪ್ರತಿಯೊಬ್ಬರನ್ನೂ ಕೆಣಕುತ್ತಿರುತ್ತದೆ. ಅಲ್ಲದೆ ಸ್ವರ್ಗಕ್ಕೆ ಹೋಗಿ ಇಂಥಿಂಥವನು ಕೆಟ್ಟದಾರಿ ಹಿಡಿದಿದ್ದಾನೆ ಎಂದು ವರದಿ ಮಾಡಿಬಿಡುತ್ತದೆ .... ಹೀಗಿರುವಾಗ ರಬಾಯಿಯವರಲ್ಲದೆ ಯಾರು ತಾನೆ ಇಂಥ ಯಹೂದಿಗಳನ್ನು ಕಾಪಾಡಬಲ್ಲರು?

ಇದು ಎಲ್ಲರಿಗೂ ತಿಳಿದ ವಿಷಯವಾಗಿತ್ತು.

ಒಮ್ಮೆ ನೆಮಿರೋವ್‌ಗೆ ಒಬ್ಬ ಲಿಟ್ವಾಕ್, ಅಂದರೆ ಲಿಥುವಾನಿಯಾ ದೇಶದ ಯಹೂದಿ ಬಂದ. ಅವನಿಗೆ ಮಾತ್ರ ಈ ವಿಷಯ ಸರಿಯಾಗಿ ತಿಳಿಯಲಿಲ್ಲ. ಕತೆ ಕೇಳಿ ಜೋರಾಗಿ ನಕ್ಕುಬಿಟ್ಟ. ಲಿಟ್ವಾಕ್‌ಗಳೇ ಹಾಗೆ, ಹಾಸಿಡಿಮ್‌ನ ರತ್ನಗಳಲ್ಲವೆ, ಎಷ್ಟೇ ಆದರೂ. ಪುಸ್ತಕದಲ್ಲಿ ಕಪ್ಪು-ಬಿಳಿ ಬಣ್ಣಗಳಲ್ಲಿ ಬರೆದಿರುವುದನ್ನು ಓದಿಕೊಂಡು ಅದು ಮಾತ್ರ ಸತ್ಯ ಎಂದು ನಂಬುವವರು. ಅವರ ಪ್ರಕಾರ ಪುಸ್ತಕದಲ್ಲಿರುವುದು ಎಂದೂ ತಪ್ಪಾಗುವುದಿಲ್ಲ. ಏನಾದರೂ ಹೇಳಿ, ಯಾವ ಪುಸ್ತಕದ ಯಾವ ಭಾಗದ ಎಷ್ಟನೇ ಶ್ಲೋಕವೆಂದು ಕೇಳುತ್ತಾರೆ. ಅವರ ತಲೆ ತುಂಬ ಪುಸ್ತಕಗಳೇ ಪುಸ್ತಕಗಳು. ಇಡೀ 'ಟಾಲ್ಮಡ್ (ಟಾಲ್ಮಡ್: ಯಹೂದ್ಯರ ಧರ್ಮಗ್ರಂಥ) ಅನ್ನೇ ಗಟ್ಟಿ ಮಾಡಿಬಿಟ್ಟಿರುತ್ತಾರೆ. ಮೋಸೆಸ್ ಕೂಡ ಅವನು ಬದುಕಿದ್ದಾಗ ಸ್ವರ್ಗದಿಂದ ಹತ್ತು ಮೆಟ್ಟಿಲು ಕೆಳಗೇ ನಿಲ್ಲಬೇಕಾಯಿತಂತೆ. ಇದನ್ನು ಪುರಾವೆ ಸಹಿತ, ಸಂಶಯದ ಒಂದು ಎಳೆಗೂ ಆಸ್ಪದ ಕೊಡದಂತೆ, ವಿವರಿಸಿ ಹೇಳುತ್ತಾನೆ. ಹಾಗಿರುವಾಗ ರಬಾಯಿಯವರು

# ನೆಮಿರೋವ್‌ನ ಪಾದ್ರಿ

**ಅನುತಾಪದ ದಿನಗಳಲ್ಲಿ ರಬಾಯಿಯವರು ಏನು ಮಾಡುತ್ತಾರೆ, ಎತ್ತ ಹೋಗುತ್ತಾರೆ ಎಂದು ಕಂಡು ಹಿಡಿಯಲು ಅವನು ಇಡೀ ರಾತ್ರಿ ಕಾಯಲು ಸಿದ್ಧನಾಗಿದ್ದಾನೆ. ಬೇರೆ ಯಾರಾದರೂ ಅವನ ಜಾಗದಲ್ಲಿದ್ದಿದ್ದರೆ ಕಾಯುತ್ತ ನಿದ್ದೆ ಹೋಗಿ ಬಿಡುತ್ತಿದ್ದರು. ಆದರೆ ಲಿಟ್ವಾಕ್‌ಗಳಿಗೆ ನಿದ್ದೆ ಎದುರಿಸುವುದು ಹೇಗೆಂದು ಗೊತ್ತಿದೆ.**

ಸ್ವರ್ಗಕ್ಕೇ ಹೋಗಲು ಹೇಗೆ ಸಾಧ್ಯ? ಎನ್ನುತ್ತಾನೆ.

ಇಂಥವರ ಜೊತೆ ವಾದ ಮಾಡಲು ಎಲ್ಲಾದರೂ ಸಾಧ್ಯವೆ?

''ಹಾಗಾದರೆ ನೀನೇ ಹೇಳು. ಆ ದಿನಗಳಲ್ಲಿ ರಬ್ಬಾಯಿಯವರು ಎಲ್ಲಿ ಹೋಗುತ್ತಾರೆ?'' ನಾವು ಸಿಟ್ಟಿನಿಂದ ಕೇಳುತ್ತೇವೆ.

''ನಂಗೇನು ಗೊತ್ತು,'' ಎನ್ನುತ್ತ ಭುಜ ಕುಣಿಸುತ್ತಾನೆ. ಆದರೆ ಆ ವಿಷಯವನ್ನು ತಾನು ತಿಳಿದುಕೊಳ್ಳಲೇಬೇಕೆಂದು ಅವನು ಮನಸ್ಸು ಮಾಡಿದ್ದಾನೆ. ಲಿಟ್ವಾಕ್‌ಗಳೇ ಹಾಗೆ.

ಅದೇ ಸಂಜೆ ಪ್ರಾರ್ಥನೆ ಆದ ಮೇಲೆ ಇವನು ಯಾರಿಗೂ ಕಾಯದೆ, ಯಾರಿಗೂ ತಿಳಿಯದೆ ರಬ್ಬಾಯಿಯವರ ಕೋಣೆ ಸೇರಿಕೊಳ್ಳುತ್ತಾನೆ. ಅವರ ಮಂಚದ ಕೆಳಗೆ ಬಚ್ಚಿಟ್ಟುಕೊಳ್ಳುತ್ತಾನೆ. ಅವರಿಗಾಗಿ ಕಾಯುತ್ತಾನೆ. ಅನುತಾಪದ ದಿನಗಳಲ್ಲಿ ರಬ್ಬಾಯಿಯವರು ಏನು ಮಾಡುತ್ತಾರೆ, ಎತ್ತ ಹೋಗುತ್ತಾರೆ ಎಂದು ಕಂಡುಹಿಡಿಯಲು ಅವನು ಇಡೀ ರಾತ್ರಿ ಕಾಯಲು ಸಿದ್ಧನಾಗಿದ್ದಾನೆ.

ಬೇರೆ ಯಾರಾದರೂ ಅವನ ಜಾಗದಲ್ಲಿದ್ದಿದ್ದರೆ ಕಾಯುತ್ತ ನಿದ್ದೆ ಹೋಗಿಬಿಡುತ್ತಿದ್ದರು. ಆದರೆ ಲಿಟ್ವಾಕ್‌ಗಳಿಗೆ ನಿದ್ದೆ ಎದುರಿಸುವುದು ಹೇಗೆಂದು ಗೊತ್ತಿದೆ. ಟಾಲ್ಮುಡ್‌ನ ಶ್ಲೋಕಗಳನ್ನು ಮನಸ್ಸಿನಲ್ಲಿ ಹೇಳಿಕೊಳ್ಳುತ್ತಾ ರಾತ್ರಿ ಇಡೀ ಎಚ್ಚರವಿದ್ದ.

ಮುಂಜಾನೆಯ ಹೊತ್ತಿಗೆ ಹರಿಕಾರ ಎಲ್ಲ ದೈವಭಕ್ತ ಯಹೂದ್ಯರನ್ನು ಅನುತಾಪದ ಪ್ರಾರ್ಥನೆಗೆ ಎಬ್ಬಿಸುತ್ತಿದ್ದುದು ಕೇಳಿಸಿತು.

ಆದರೆ ಇದಕ್ಕೂ ಒಂದು ತಾಸು ಮುಂಚಿನಿಂದಲೇ ರಬ್ಬಾಯಿಯವರು ಎಚ್ಚರವಾಗಿದ್ದು ವಿಚಿತ್ರ ನೋವನ್ನು ಅನುಭವಿಸುತ್ತಿದ್ದುದು ಇವನಿಗೆ ತಿಳಿದಿತ್ತು.

ನೆಮಿರೋವ್‌ನ ರಬ್ಬಾಯಿಯವರು ನೋವು ಅನುಭವಿಸುತ್ತ ಇರುವುದನ್ನು ನೋಡಿದವರಿಗೆಲ್ಲ ಅವರು ಜನರ ನೋವುಗಳ ಭಾರ ಹೊರುವುದೂ, ಅವರಿಗೆ ಜನರ ಬಗ್ಗೆ ಇರುವ ಕಳಕಳಿ ಇವೆಲ್ಲ ತಾನೇ ತಿಳಿಯುತ್ತದೆ. ಆದರೆ ಅವರ ನಿಜವಾದ ಸಂಕಟವನ್ನು ಹಂಚಿಕೊಳ್ಳಲು ಯಾರಿಗೂ ಸಾಧ್ಯವಾಗುವುದಿಲ್ಲ. ಲಿಟ್ವಾಕ್‌ನ ಹೃದಯ ಕಬ್ಬಿಣದ್ದು. ಮಂಚದ ಕೆಳಗಿಂದ ಅವರ ನರಳಾಟ ಕೇಳಿಸಿಕೊಂಡ.

ಆಮೇಲೆ ಮನೆಯಲ್ಲಿದ್ದ ಎಲ್ಲರೂ ಮಂಚ ಬಿಟ್ಟೇಳುವುದು ಇವನಿಗೆ ಕೇಳಿಸಿತು. ಪಿಸುಪಿಸು ಮಾತುಗಳು, ಹರಿಯುವ ನೀರಿನ ಶಬ್ದ, ಬಾಗಿಲು ತೆಗೆದ, ಹಾಕಿದ ಶಬ್ದ ಎಲ್ಲಾ ಕೇಳಿಸಿತು. ಮನೆಯಲ್ಲಿದ್ದವರೆಲ್ಲ ಹೊರಗೆ ಹೋದ ಮೇಲೆ ಮತ್ತೆ ನಿಶ್ಶಬ್ದ. ಕತ್ತಲು. ಒಂದೇ ಒಂದು ಚಂದ್ರಕಿರಣ ಕಿಟಕಿಯ ಸೀಳಿನಿಂದ ಒಳಕ್ಕೆ ನುಗ್ಗುತ್ತಿತ್ತು.

ಆಮೇಲೆ ತನ್ನ ಮನ ಬಿಚ್ಚಿ ನಮ್ಮ ಮುಂದೆ ಹೇಳಿದ; ರಬ್ಬಾಯಿಯವರು ಮತ್ತು ತಾನು, ಇಬ್ಬರೇ ಮನೆಯಲ್ಲಿ ಉಳಿದಾಗ ಅವನಿಗೆ ಅಸಾಧ್ಯ ಭಯವಾಯಿತಂತೆ. ಅವನ ಚರ್ಮ ಸೇದು ಹೋಯಿತಂತೆ; ಗಡ್ಡದ ಕೂದಲಿನ ಬುಡಗಳೆಲ್ಲ ಮುಳ್ಳುಗಳೆದ್ದಂತಾಗಿ ಸಾವಿರ ಸೂಜಿಗಳು ಚುಚ್ಚಿದಂತಾಯಿತಂತೆ.

ಅವನ ಭಯಕ್ಕೆ ಸಾಕಷ್ಟು ಕಾರಣಗಳು ಇದ್ದವು, ಬಿಡಿ. ರಬ್ಬಾಯಿಯವರ ಜೊತೆ ತಾನೊಬ್ಬನೇ ಆ ಮನೆಯಲ್ಲಿ, ಅದೂ ಅನುತಾಪದ ದಿನಗಳ ಒಂದು ಮುಂಜಾನೆ ಎಂದರೆ ಊಹಿಸಬಲ್ಲಿರಾ? ಆದರೆ ಲಿಟ್ವಾಕ್ ಅಂದರೆ ಲಿಟ್ವಾಕೇ ಸರಿ. ಗಾಳಕ್ಕೆ ಸಿಕ್ಕ ಮೀನಿನಂತೆ ಹೆದರಿ ನಡುಗುತ್ತಿದ್ದರೂ, ಧೈರ್ಯದಿಂದ ಸಹಿಸಿಕೊಂಡ.

ಕೊನೆಗೆ ರಬ್ಬಾಯಿಯವರು ಎದ್ದರು. ಎದ್ದವರೇ ಬಟ್ಟೆ ಬರೆ ಹಾಕಿಕೊಂಡರು. ಬಟ್ಟೆ ಬೀರುವಿಗೆ ಹೋಗಿ ಒಂದು ಬಟ್ಟೆ ಗಂಟನ್ನು ತೆಗೆದು ಅದರಿಂದ ರೈತರ ಉಡುಪನ್ನು ಷರಾಯಿ, ದೊಡ್ಡ ದೊಡ್ಡ ಬೂಟ್ಸು, ಹಿತ್ತಾಳೆ ಬಟನ್ ಇರುವ ಚರ್ಮದ ಸ್ಟ್ಯಾಪಿನ ಉಣ್ಣೆ ಟೋಪಿಗಳು ಇವನ್ನೆಲ್ಲ ಕೆಳಕ್ಕೆ ಹಾಕುತ್ತಾರೆ.

ಗಂಟನ್ನು ಎತ್ತಿಟ್ಟು ಇವೆಲ್ಲವನ್ನು ಒಂದೊಂದಾಗಿ ತೊಡುತ್ತಾರೆ. ಆಮೇಲೆ ಕೋಣೆಯಿಂದ ಹೊರಬೀಳುತ್ತಾರೆ. ಲಿಟ್ವಾಕ್ ಅವರನ್ನು ಹಿಂಬಾ

ಲಿಸುತ್ತಾನೆ. ಅಡುಗೆಮನೆ ಕಡೆಯಿಂದ ಹೋಗುತ್ತ ಒಂದು ಮಚ್ಚನ್ನು ಬಗ್ಗಿ ಎತ್ತಿಕೊಂಡು, ಮೊಗಲೆ ಷರಾಯಿಯೊಳಗೆ ಬಚ್ಚಿಟ್ಟುಕೊಂಡು ಹೋಗುತ್ತಾರೆ.

ಲಿಟ್ವಾಕ್ ನಡುಗುತ್ತಾನೆ. ಆದರೂ ಹಠಬಿಡುವುದಿಲ್ಲ.

ತೀರ್ಪಿನ ದಿನದ ದುಗುಡ ಹೊಸ ವರ್ಷದ ಆರಂಭದ ಮುಂಚಿನ ದಿನಗಳ ಕಪ್ಪು ರಸ್ತೆಗಳ ಮೇಲೆ ಚಾಚಿತ್ತು.

ಅಲ್ಲಿ ಇಲ್ಲಿ ಯಹೂದಿಗಳು ಮಾಡುತ್ತಿದ್ದ ಪ್ರಾರ್ಥನೆ ಕೇಳಿ ಬರುತ್ತಿತ್ತು. ಅಲ್ಲಲ್ಲಿ ತೆರೆದ ಕಿಟಕಿಗಳಿಂದ ಹಾಸಿಗೆ ಹಿಡಿದ ರೋಗಿಷ್ಟರ ನರಳಾಟ ಕೇಳಿಸುತ್ತಿತ್ತು. ರಬಾಯಿಯವರು ಯಾರ ಕಣ್ಣಿಗೂ ಬೀಳಬಾರದೆಂದು ನೆರಳುಗಳಲ್ಲೇ ಚಲಿಸುತ್ತ ಒಂದು ಮನೆಯ ಒತ್ತಿಗಿದ್ದ ಕತ್ತಲಿನ ಇನ್ನೊಂದು ಮನೆಯ ಒತ್ತಿಗಿದ್ದ ಕತ್ತಲೊಳಕ್ಕೆ ಜಗಿಯುತ್ತಿದ್ದರು. ಲಿಟ್ವಾಕ್ ಅವರ ಹಿಂದೆ ಹಿಂದೆ.

ರಬಾಯಿಯವರ ಹೆಜ್ಜೆ ಸಪ್ಪಳಕ್ಕೆ ಸಾಟಿಯಾಗಿ ಹೊಡೆದುಕೊಳ್ಳುತ್ತಿದ್ದ ತನ್ನ ಎದೆ ಬಡಿತ ಲಿಟ್ವಾಕ್‌ಗೆ ಕೇಳಿಸುತ್ತಿತ್ತು. ಆದರೂ ಅವನು ಹಠ ಬಿಡದೆ ಅವರನ್ನು ಹಿಂಬಾಲಿಸುತ್ತ ಈಗ ಊರ ಹೊರಕ್ಕೆ ಬಂದಿದ್ದಾನೆ.

ಊರಾಚೆ ಒಂದು ಚಿಕ್ಕ ಕಾಡಿದೆ.

ರಬಾಯಿಯವರು ಕಾಡು ಹೊಕ್ಕರು. ಕಾಡೊಳಗೆ ಮೂವತ್ತು ಅಥವಾ ನಲ್ವತ್ತು ಹೆಜ್ಜೆ ಮುಂದೆ ಹೋದ ಮೇಲೆ ಒಂದು ಚಿಕ್ಕ ಮರದ ಹತ್ತಿರ ನಿಂತರು. ಅವರು ತಂದಿದ್ದ ಮಚ್ಚಿನಿಂದ ಮರ ಕಡಿಯಲು ಶುರು ಮಾಡಿದ್ದನ್ನು ನೋಡಿ ಲಿಟ್ವಾಕ್ ಸುಸ್ತಾಗಿಬಿಟ್ಟ.

ಮರ ಏಟಿಗೆ ಮಣಿದು ಬಾಗಿ ಬೀಳುವವರೆಗೂ ರಬಾಯಿಯವರು ಹೊಡೆಯುತ್ತಲೇ ಇದ್ದಾರೆ. ಈಗ ಅದನ್ನು ಬೀಳಿಸಿದ ಮೇಲೆ, ಕಡಿದು ಸೌದೆಗಳಾಗಿ ಮಾಡತೊಡಗಿದ್ದಾರೆ. ಆ ಸೌದೆಯನ್ನೆಲ್ಲ ಒಟ್ಟು ಮಾಡಿ ಜೇಬಿನಿಂದ ತೆಗೆದ ಹಗ್ಗದಲ್ಲಿ ಕಟ್ಟಿ ಆ ಕಟ್ಟನ್ನು ತಮ್ಮ ಭುಜಕ್ಕೇರಿಸಿ






ಕೊಂಡರು; ಕೊಡಲಿಯನ್ನು ಷರಾಯಿಯೊಳಗೆ ಸೇರಿಸಿಕೊಂಡು ಊರಿನ ಕಡೆ ವಾಪಸ್ ಬರುತ್ತಿದ್ದಾರೆ.

ಊರ ಹೊರಗೆ ಇರುವ ಬಡವರ ಕೇರಿಯಲ್ಲಿ ಮುರಿದು ಬಿದ್ದ ಒಂದು ಗುಡಿಸಲ ಹತ್ತಿರ ನಿಂತು ಬಾಗಿಲು ತಟ್ಟುತ್ತಾರೆ.

ಒಳಗಿಂದ ಹೆದರಿದ ದನಿ: ''ಯಾರದು?''

ರೋಗಿಷ್ಟ ಹೆಂಗಸಿನ ದನಿಯೆಂದು ಲಿಟ್ವಾಕ್‌ಗೆ ತಿಳಿಯಿತು.

''ನಾನು, ಜೋ,'' ರಬಾಯಿಯವರು ರೈತನ ಧಾಟಿಯಲ್ಲಿ ಹೇಳುತ್ತಾರೆ.

''ಯಾವ ಜೋ? ಯಾರದು?'' ಅದೇ ಹೆದರಿದ ದನಿ ರಷ್ಯನ್ ಭಾಷೆಯಲ್ಲಿ ಕೇಳುತ್ತದೆ. ಅದೇ ಭಾಷೆಯಲ್ಲಿ ರಬಾಯಿಯವರು: ''ನಾನು, ವಾಸಿಲ್''

''ಯಾವ ವಾಸಿಲ್? ನೀನು ಯಾರೆಂದು ನನಗೆ ತಿಳಿಯುತ್ತಿಲ್ಲ. ಏನು ಬೇಕು?''

''ಸೌದೆ, ಸೌದೆ ಮಾರಲು ತಂದಿದ್ದೇನೆ. ತುಂಬಾ ಅಗ್ಗದ ಬೆಲೆಗೆ .....'' ಉತ್ತರಕ್ಕಾಗಿ ಕಾಯದೆ ಒಳಕ್ಕೆ ಹೋಗುತ್ತಾರೆ.

ಲಿಟ್ವಾಕ್ ಕೂಡ ಯಾರಿಗೂ ತಿಳಿಯದಂತೆ ಒಳಕ್ಕೆ ಹೋಗುತ್ತಾನೆ. ಮುಂಜಾನೆಯ ಮಬ್ಬು ಬೆಳಕಲ್ಲಿ ಸುತ್ತ ನೋಡುತ್ತಾನೆ. ತುಂಬಾ ಬಡತನ, ತೊಂದರೆಗಳು ..... ಹೆಂಗಸು ಅನಾರೋಗ್ಯದಿಂದ ಹಾಸಿಗೆ ಹಿಡಿದಿದೆ. ನೋವು ಅನುಭವಿಸುತ್ತಿದೆ. ಒಂದು ರಗ್ಗನ್ನು ಹೊದ್ದು ಮಲಗಿದ್ದ ಅವಳು ಕ್ಷೀಣ ದನಿಯಲ್ಲಿ ಕಷಿಯಾಗಿ ಹೇಳುತ್ತಾಳೆ:

''ಬೆಲೆಗೆ? ಏನು ಕೊಳ್ಳಲಿ, ಹೇಗೆ ಕೊಳ್ಳಲಿ? ನಾನೊಬ್ಬ ವಿಧವೆ. ರೋಗಿಷ್ಟೆ. ನನ್ನ ಹತ್ತಿರ ದುಡ್ಡೆಲ್ಲಿದೆ?''

''ಸಾಲಕ್ಕೆ ಕೊಡುತ್ತೇನೆ. ಆರು ಗ್ರೋಶೆನ್ ಮಾತ್ರ ....!'' ವಾಸಿಲ್ ಹೇಳುತ್ತಾನೆ.

''ಸಾಲ ವಾಪಸ್ಸು ಕೊಡಲು ಎಲ್ಲಿಂದ ದುಡ್ಡು ತರಲಿ?'' ರೋಗಿ ಗೋಳಾಡುತ್ತಾಳೆ.

ರಬಾಯಿಯವರು ಹೇಳುತ್ತಾರೆ: ''ಅಯ್ಯೋ ಪೆದ್ದಮ್ಮಾ, ನೋಡು, ನಿನಗೆ ಯಾರೂ ದಿಕ್ಕಿಲ್ಲ. ಮೇಲಾಗಿ ಮೈಯಲ್ಲಿ ಹುಶಾರಿಲ್ಲ. ಅಂಥದರಲ್ಲೂ ಈ ಸೌದೆಯನ್ನು ನಿನಗೆ ಸಾಲ ಕೊಡಲು ನಾನು ಸಿದ್ಧನಾಗಿದ್ದೇನೆ. ನಿನ್ನಲ್ಲಿ ನನಗೆ ನಂಬಿಕೆಯಿದೆ. ಒಂದಲ್ಲ ಒಂದು ದಿನ ನೀನು ಸಾಲ ತೀರಿಸುತ್ತೀಯ ಎಂದು ನನಗೆ ಗೊತ್ತು. ಸ್ವರ್ಗದಲ್ಲಿರುವ ದೇವರನ್ನು ನೀನು ನಂಬುತ್ತಿಲ್ಲವೆಂದು ತೋರುತ್ತಿದೆ. ಆರು ಗ್ರೋಶೆನ್‌ಗಳಷ್ಟು ಸಹಾಯವನ್ನು ಆ ದೇವರು ಮಾಡುವುದಿಲ್ಲವೆ?''

''ಇದನ್ನು ಹೊತ್ತಿಸುವವರ್‍ಯಾರು? ನನಗೆ ಮೈಯಲ್ಲಿ ಹುಶಾರಿಲ್ಲ. ಎದ್ದು ಬೆಂಕಿ ಮಾಡಲು ನನ್ನ ಕೈಯಲ್ಲಾಗುವುದಿಲ್ಲ. ನನ್ನ ಮಗ ಕೆಲಸಕ್ಕೆ ಹೋಗಿದ್ದಾನೆ ....''

''ನಾನೇ ಉರಿ ಹಾಕುತ್ತೇನೆ'' ರಬಾಯಿಯವರು ಹೇಳುತ್ತಾರೆ.

ರಬಾಯಿಯವರು ಬಗ್ಗಿ ಸೌದೆಗಳನ್ನು ಹೊತ್ತಿಸತೊಡಗುತ್ತಾರೆ. ಸೌದೆ ಜೋಡಿಸುವಾಗ ಅನುತಾಪದ ಪ್ರಾರ್ಥನೆಯ ಮೊದಲ ಸಾಲನ್ನು ಗುನುಗುತ್ತಾರೆ. ಬೆಂಕಿ ಸರಿಯಾಗಿ ಹತ್ತಿಕೊಂಡ ಮೇಲೆ ಎರಡನೆ ಸಾಲನ್ನು ಗುನುಗತೊಡಗುತ್ತಾರೆ.

ಬೆಂಕಿ ಆರಿ ಹೋಗಿ ಪಾತ್ರೆ ಮುಚ್ಚಳ ಮುಚ್ಚುವಾಗ ಮೂರನೇಯದನ್ನು ಹೇಳುತ್ತಾರೆ.

ಇದೆಲ್ಲ ನೋಡಿದ ಲಿಟ್ವಾಕ್ ನೆಮಿರೋವ್‌ನಲ್ಲೇ ಉಳಿದುಕೊಳ್ಳಲು ನಿರ್ಧರಿಸಿಬಿಟ್ಟ. ನೆಮಿರೋವ್‌ನ ರಬಾಯಿಯವರ ಅನುಯಾಯಿಯಾಗಿಬಿಟ್ಟ.

ಮುಂದೆ ನೆಮಿರೋವ್‌ನ ರಬಾಯಿಯವರ ಇತರ ಅನುಯಾಯಿಗಳು ಹೊಸ ವರ್ಷಕ್ಕೆ ಮುಂಚಿನ ಅನುತಾಪದ ದಿನಗಳಲ್ಲಿ ರಬಾಯಿಯವರು ಈ ಲೋಕದಿಂದ ಹೊರಟು ಮೇಲೇರಿ ಸ್ವರ್ಗ ಲೋಕಕ್ಕೆ ಹೋಗಿ ಬರುತ್ತಾರೆ ಎಂದು ಹೇಳುವುದನ್ನು ಕೇಳಿದಾಗಲೆಲ್ಲ ಲಿಟ್ವಾಕ್ ಅವರ ಮಾತು ಮುಂದುವರೆಸುತ್ತಾ ಹೇಳುತ್ತಾನೆ:

''...... ಇಲ್ಲ, ಸ್ವರ್ಗ ಲೋಕಕ್ಕಿಂತ ಮೇಲಿನ ಲೋಕಕ್ಕೆ.''

# ಕಾವ್ಯ ಕಿರಣ

ಕವಲು ದಾರಿಯ ಮುಂದೆ ನೀ ಬಂದು ನಿಂದು
ಗುರಿ ಯಾವುದೆಂದು ಮುಂಗಾಣದಿರೆ ನೊಂದು
ಮನದ ಪೊರೆಪೊರೆಯೊಳುರಿದೆದ್ದು ಭುಗಿಲಿಡಲು,
ನಿನಗೆ ನೀನೇ, ಗೆಳೆಯ, ನಿನಗೆ ನೀನೇ!

('ನಿನಗೆ ನೀನೇ')

★

ಮರಮೊಳಡಗಿದ ಬೆಂಕಿಯಂತೆ ಎಲ್ಲೋ ಮಲಗಿದೆ ಬೇಸರ;
ಏನೊ ತೀಡಲು ಏನೊ ತಾಗಲು ಹೊತ್ತಿ ಉರಿವುದು ಕಾತರ;

('ಮೋಹನ ಮುರಲಿ')

★

ನಗುವೆಂದರೆ ಅದು ಅಳುವಿನ ಸೆಲೆಯು,
ಸೊಗವು ದುಗುಡಕಿಕ್ಕಿದ ಚೆಲು ಬಲೆಯು;
ಒಲವು ಎದೆಯ ಸುಡಲಿಕ್ಕಿದ ಗಂಧದ ಚಿತೆಯು:
ಸ್ಥಿರವಾಗಲಿ, ಹಾ, ಮತಿಯು!

('ಎಲೆ ಕವಿ')

★

ಇಹರು ಹೆಗ್ಗಡಲ ತಳಕೂ ಮುಳುಗಿ ಬಂದವರು,
ಪಾತಾಳದಾಳಕೂ ಇಳಿದ ಭಟರು;
ಹೆಣ್ಣು, ಈ ಬರಿ ಹೆಣ್ಣು ಎದೆಗಡಲ ಪೇರಾಳ
ಕಂಡ ಕಲಿಗಳು ಮಾತ್ರ, ಕಂಡರಿಲ್ಲ.

('ಹೆಣ್ಣು: 1')

★

ಈ ಅರಿವು ಅರೆಹೊರೆದ ಮೊಟ್ಟೆ, ಪೊರೆ: ಚಿಪ್ಪೊಡೆದು
ಬರಲಿ ಪರಿಪೂರ್ಣವತಾರಿ ವಿನತಾಪುತ್ರ-
ಗಾಳಿಕಡೆಯಲು ಸಟೆದ ಬೆಳ್ಳಿ ಮಂತು,
ನಿನ್ನ ತೊಡೆಹೊರೆಕೆಳಗೆ ಮತ್ತೆ - ಸಡಿಲು.

('ಪ್ರಾರ್ಥನೆ')

★

ವಿಜೃಂಭಿಸಿತು ರಾಮಬಾಣ; ನಿಜ. ಕತ್ತಲಿಗೆ
ಹತ್ತೆ ತಲೆ? ನೂರಾರೆ? ಅದು ಅಸಂಖ್ಯ;
ಕತ್ತರಿಸಿದರೆ ಬೆಳೆವ, ಬೆಳೆದು ಕತ್ತಿಗೆ ಬರುವ
ಅನಾದಿ; ಕೋದಂಡದಂಡವೂ ಓಗೆ ದಂಡ;

('ಶ್ರೀ ರಾಮನವಮಿಯ ದಿವಸ')

• *ಗೋಪಾಲಕೃಷ್ಣ ಅಡಿಗ*

# – 148 –

## ಸ್ವಲ್ಪ, ತುಸು, ಒಂಚೂರು, ಒಂದಿಷ್ಟು

"ಸ್ವಲ್ಪ ಆ ಸ್ವಿಚ್ ಆರಿಸಿರಿ," ಎಂದು ನನ್ನವಳು ಬೇರೇನೋ ಮಾಡುತ್ತಿದ್ದವಳು ಹೇಳಿದಳು. ಹಾಗೆ ಮಾಡಿದ ಮೇಲೆ ಈ 'ಸ್ವಲ್ಪ'ದ ಬಗ್ಗೆ ನನಗೆ ಯೋಚನೆ ಹಿಡಿಯಿತು. "ಸ್ವಲ್ಪ ಅವರನ್ನ ಕರೀರಿ," "ಒಂತುಸಾ ಬಾಯಿ ಮುಚ್ಚಿಕೊಳ್ತೀರಾ," "ಒಂಚೂರು ಇತ್ಲಾಗೆ ಬನ್ನಿ" ಇತ್ಯಾದಿಗಳಲ್ಲಿ "ಸ್ವಲ್ಪ", "ತುಸು", "ಒಂಚೂರು", "ಒಂದಿಷ್ಟು" ಇತ್ಯಾದಿಗಳು ಅಲ್ಪವನ್ನು ಸೂಚಿಸುತ್ತವೆಯೇ? ಹಿಂದಿ-ಉರ್ದುವಿನಲ್ಲಿ ಕೂಡಾ "ಜರಾ" ಎಂಬ ಗುಣವಾಚಕಕ್ಕೆ ಹೀಗೆ ಪ್ರಯೋಗ ಇದೆ. "ಸ್ವಲ್ಪ ಕರಿಯೋದು" ಸಾಧ್ಯವೇ? ಕರೆಯುವುದಾದರೆ ಪೂರಾ ಕರೆಯಬೇಕು. "ಸ್ವಲ್ಪ ಬರೋದು" ಅಕ್ಷರಶಃ ಅಸಾಧ್ಯ. ಸ್ವಲ್ಪ ಹೊತ್ತು ಎಂದು ಕೆಲ ಸಂದರ್ಭಗಳಲ್ಲಿ ತಾತ್ಪರ್ಯವಾಗಿರಬಹುದು. ಸರ್ವತ್ರ ಹಾಗಾಗದು.

ತುಸು ವಿಚಾರಿಸಿದ ಮೇಲೆ, ಈ "ತುಸು"ವನ್ನು ನಾವು ಪ್ರಯೋಗಿಸುವ ಸಂದರ್ಭಗಳನ್ನು ನೋಡಿ, ಅದು "ದಯವಿಟ್ಟು" ಅಥವಾ ಇಂಗ್ಲೀಷಿನ Please ಎಂಬರ್ಥದಲ್ಲಿ ಅಲ್ಲವೇ ನಿಲ್ಲುವುದು ಎಂದು ಹೊಳೆಯಿತು. ಸಾಧಾರಣ ಸೌಜನ್ಯ ಪ್ರದರ್ಶಿಸಲು "ದಯವಿಟ್ಟು" ತುಸು ಹೆಚ್ಚೇ ಅಲ್ಲವೆ? ಹೆಂಡತಿ ಗಂಡನಿಗೆ ಅಥವಾ ಅವನು ಅವಳಿಗೆ "ದಯವಿಟ್ಟು" ಎನ್ನುವುದು ಅತಿವಿನಯದ ಮತ್ತು ವ್ಯಂಗ್ಯವನ್ನು ಸೂಚಿಸಿದಂತಾಗುತ್ತದೆ. ಇಂಗ್ಲೀಷಿನ please ಇದೆಲ್ಲಕ್ಕೂ ನಡೆಯುತ್ತದೆ. ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಕೃತಕ ಸೌಜನ್ಯದ ಅಂಶ ಹೆಚ್ಚು. ನೆರೆಮನೆಯವರನ್ನು ನಿಮ್ಮಲ್ಲಿರುವ ಫೋನಿಗೆ ಕರೆಯಬೇಕಾದರೆ "ಸ್ವಲ್ಪ ಕರೀತೀರಾ?" ಅಂದರೆ ಸಲಿಗೆಯನ್ನೂ ಸಂಗಡಲೇ ಇದೊಂದು ಉಪಕಾರ ಎನ್ನುವ ಭಾವನೆಯನ್ನು ಏಕಕಾಲದಲ್ಲಿ ಪ್ರದರ್ಶಿಸಿದಂತಾಗುತ್ತದೆ. ಅದಕ್ಕೂ ಹೆಚ್ಚಿನ ಉಪಕಾರವನ್ನು ಆಶಿಸುವಾಗ ನಾವೂ "ದಯವಿಟ್ಟು" (ಹಿಂದಿಯಲ್ಲಿ "ಕೃಪಯಾ" ಅಥವಾ "ಮೆಹರ್‌ಬಾನೀ ಕರಕೇ") ಎನ್ನಬೇಕಾಗುತ್ತದೆ.

ಸಂಸ್ಕೃತಿ ಭಿನ್ನತೆ ಶಿಷ್ಟಾಚಾರದ ಭಿನ್ನತೆಗಳನ್ನು ಉಂಟು ಮಾಡುತ್ತದೆ. ಇಂಗ್ಲೀಷಿನಲ್ಲಿ ಗಂಡ-ಹೆಂಡಿರ ನಡುವೆಯೂ ಸ್ನೇಹಿತರ ನಡುವೆಯೂ Please ಬಳಸಿ ಬಳಸಿ ಸವಕಲಾಗಿದೆ. ಚಿಕ್ಕ ಪುಟ್ಟ ಕೇಳಿಕೆಗಳಿಗೆ ಉಪಯೋಗಿಸುವ "ಸ್ವಲ್ಪ"ವನ್ನು ಇಂಗ್ಲೀಷಿನಲ್ಲಿ a little ಎಂದು ಭಾರತೀಯರು ಎಲ್ಲಾದರೂ ಬಳಸುತ್ತಾರೋ ಏನೋ ಇಂಗ್ಲೀಷರು ಬಳಸರು. ಇಂಗ್ಲೀಷಿನಲ್ಲಿ little ಗಿಂತ ಸರಳವಾದ do ಪ್ರಯೋಗಿಸುವುದುಂಟು. Do come for the morning. (ಮದುವೆಗೆ ಮುದ್ದಾಂ ಬನ್ನಿ). ಆದರೆ ಅರ್ಥದಲ್ಲಿ ಇದು "ಸ್ವಲ್ಪ"ಕ್ಕಿಂತ ಮಾತ್ರವಲ್ಲ, please ಗಿಂತಲೂ ಭಾರ. ಭಾರತೀಯನಾಗಿ ನಾನು "ಸ್ವಲ್ಪ"ದ ನವಿರನ್ನು ಮೆಚ್ಚುತ್ತೇನೆ.

"ಚೆನ್ನಾಗಿ", "ಒಳಿತಾಗಿ" ಕನ್ನಡದ ಸುಂದರ ಪದಗಳು. ಚೆಲುವಾಗಿ, ಹಿತಕರವಾಗಿ ಎಂಬ ಅರ್ಥವನ್ನು ಅವು ಮೂಲತಃ ಕೊಡುತ್ತವೆ. "ಚೆನ್ನಾಗಿ" ಸಿಂಗರಿಸಿಕೊಳ್ಳುತ್ತೇವೆ. "ಒಳಿತಾಗಿ" ನುಡಿಯುತ್ತೇವೆ. ಆದರೆ ನೀವು ನಿಮ್ಮ ಮಗನನ್ನು ಚೆನ್ನಾಗಿ ಚಚ್ಚಬಹುದು; ಅದಕ್ಕಾಗಿ ನಿಮ್ಮ ಹೆಂಡತಿ ನಿಮ್ಮನ್ನು ಒಳಿತಾಗಿ ಜರೆಯಬಹುದು; ಮಾಸ್ತರರು ವಿದ್ಯಾರ್ಥಿಗೆ ಒಳಿತಾಗಿ ಬುದ್ಧಿ ಹೇಳಬಹುದು. ಇಲ್ಲಿ ನಾವು ಈ ಪದಗಳಿಗೆ ತದ್ವಿರುದ್ಧವಲ್ಲದಿದ್ದರೂ ಸ್ವಲ್ಪ ವಿರುದ್ಧ ಅರ್ಥವನ್ನೇ ಕೊಡುತ್ತೇವೆ. ಚಿಕ್ಕವಾದರೂ ಬಲು ಪರಿಣಾಮಕಾರಿ ಪದಗಳಾಗಿ ಲಕ್ಷಣಾವೃತ್ತಿಯಿಂದ ಅವು ವರ್ತಿಸುತ್ತವೆ. ಇಂಗ್ಲೀಷಿ

ನಲ್ಲಾದರೆ ಇದಕ್ಕೆ ಸಮಾನಾಗಿ good (=ಒಳಿತು, ಚೆನ್ನು) ಕೆಲಸಕ್ಕೆ ಬರುತ್ತದೆ. ನೀವು ಅಲ್ಲಿಯೂ ನಿಮ್ಮ ಮಗನಿಗೆ a good beating ಕೊಡಬಲ್ಲಿರಿ. ಇಲ್ಲಿ ಕನ್ನಡದಲ್ಲಿ ಹೇಗೋ ಹಾಗೆ ಇಂಗ್ಲೀಷಿನಲ್ಲಿಯೂ ಒಳಿತು (good) ಬಹಳ, ತೀಕ್ಷ್ಣ ಇತ್ಯಾದಿ ಅರ್ಥಗಳನ್ನು ಸಂಪಾದಿಸಿದೆ.

ಇವೆರಡು ವಿವೇಚನೆಗಳು ಮನುಷ್ಯ ಜನಾಂಗಗಳ ಭಾವ ಸಾಮ್ಯ ಮತ್ತು ಭಾವ ವೈರುಧ್ಯಗಳನ್ನು ಬೆಳಗುತ್ತವೆ.

ಆದರೆ "ತುಸು", "ಚೂರು" ಇತ್ಯಾದಿಗಳ ಈ ಅರ್ಥಚ್ಛಾಯೆಯನ್ನು ನಮ್ಮ ಬೃಹತ್ ಪರಿಷ್ಕೃತ ಕೋಶವೂ ಲಕ್ಷಿಸಿಲ್ಲ; "ಒಳಿತಾಗಿ"ಯರನ್ನು ಮಾತ್ರ ಗಮನಿಸಿದೆ.

★

ಒಂದು ಜೆಕ್ ಕಾದಂಬರಿಯಲ್ಲಿ 50 ಲಕ್ಷ ವರ್ಷಗಳ ಮೇಲೆ ಹುಟ್ಟಬೇಕಾಗಿದ್ದ ಮಗು ಪ್ರಸ್ತುತದಲ್ಲೇ ಹುಟ್ಟುತ್ತದೆ. ಅದಕ್ಕೆ ಅಕ್ಷರ, ಉಚ್ಚಾರ ಕಲಿಸಿ, ಭಾರೀ ಶಬ್ದ ಕೋಶವೊಂದನ್ನು ಕೊಟ್ಟದ್ದಾಯಿತು. ಅದು ಬಿಟ್ಟೂ ಬಿಡದೆ ಸ್ವಲ್ಪ ಕಾಲದಲ್ಲೇ ಅದನ್ನು ಓದಿ ಮುಗಿಸಿ, ನಿಮ್ಮ ಭಾಷೆ ತೀರ ಅತಾರ್ಕಿಕ ಎಂದು ಟೀಕಿಸಿತು. ಹೌದು, ನಮ್ಮ ಭಾಷೆಗಳು ತುಂಬಾ ತರ್ಕ ವಿರುದ್ಧವಾಗಿವೆ.

ಈಗ ನೋಡಿ. ಮುನ್- ಎಂದರೆ ಎದುರಿಗೆ, ಹಿಂ - ಎಂದರೆ ಬೆನ್ನುಗಡೆ. ಈ ಶಬ್ದಗಳನ್ನು ದೇಶಕ್ಕೆ ಹೇಗೋ ಹಾಗೆ ಕಾಲಕ್ಕೂ ಅನ್ವಯಿಸಿ ಪ್ರಯೋಗಿಸುತ್ತೇವೆ. ದೇಶ ವಿಷಯದಲ್ಲಿ ನೀವು ನನ್ನ ಮುಂದಿದ್ದೀರಿ. ಅಂದರೆ ಎದುರಿಗೆ ನಿಂತಿದ್ದೀರಿ. ನಾನು ನಿಮ್ಮ ಹಿಂದಿದ್ದೇನೆ. ಇದು ಪ್ರತ್ಯಕ್ಷ.

ಆದರೆ ಕಾಲಕ್ಕೆ ಬಂದರೆ ನನ್ನ ತಲೆ ತಿರುಗತೊಡಗುತ್ತದೆ. ನನ್ನ "ಮುಂದೆ" ಇರುವುದು ಏನು? ನನ್ನ ಭವಿಷ್ಯತ್ತು. ನಾನು ಮುಂದೆ ಹೆಜ್ಜೆ ಇಟ್ಟಂತೆ ಭವಿಷ್ಯದೊಳಗೆ ಪ್ರವೇಶಿಸುತ್ತಲೇ ಇರುತ್ತೇನೆ. ನನ್ನ ಭೂತ ನನ್ನ ಹಿಂದೆ ಇದೆ; ಅದನ್ನು ನಾನು ಬಿಟ್ಟು ಬಿಟ್ಟು ಭವಿಷ್ಯಕ್ಕೆ ಸಾಗುತ್ತಿದ್ದೇನೆ. ಸರಿ ತಾನೇ? ಆದರೆ ಉತ್ತರ ಕರ್ನಾಟಕದ ಯಾವುದೇ ಸರಕಾರಿ ಕಚೇರಿಗೆ ಹೋಗಿ ಒಂದು ಕೆಲಸದ ವಿಷಯ ವಿಚಾರಿಸಿ: "ಹಿಂದಾಗಡೆ ಬರ್ರಿ" ಎಂದುತ್ತರ ಬರುತ್ತದೆ. ನಿರ್ದಿಷ್ಟ ಗಂಟೆ ಮಿನಿಟು ಹೇಳಿರದಿದ್ದರೂ ಅವರು ಸೂಚಿಸುತ್ತಿರುವುದು ಭವಿಷ್ಯತ್ತು ಎಂಬುದಂತೂ ಖಂಡಿತವಲ್ಲವೆ? ಇದೀಗ ನಮ್ಮ ಮುಂದಿದ್ದ ಭವಿಷ್ಯತ್ತು ಸರ್ರನೆ ಹಿಂದುಗಡೆ ಹೇಗೆ ಹೋಯಿತು? ಅದೇ ಮನುಷ್ಯ ಬೇರೆ ಸಮಯದಲ್ಲಿ "ಮುಂದಿನ" ದಿನಗಳು ಒಳ್ಳೇ ದಿನಗಳಲ್ಲ ಎಂದು ಭವಿಷ್ಯತ್ತಿನ ಬಗ್ಗೆ ಅನಾದಿಯಿಂದ ಬಂದಿರುವ ನಿರಾಶೆಯನ್ನು ವ್ಯಕ್ತಪಡಿಸಬಹುದು. ಆಗ "ಹಿಂದೆ" ಸೇರಿಕೊಂಡಿದ್ದ ಭವಿಷ್ಯತ್ತು ಮತ್ತೆ "ಮುಂದಿ"ನಿಂದ ಕಾಣಿಸಿಕೊಳ್ಳುತ್ತದೆ, ನನ್ನ ತರ್ಕಶಾಸ್ತ್ರ "ಹಿಂದಿಲ್ಲಾ ಸ್ವಾಮಿ ಮುಂದಿಲ್ಲಾ" ಎಂದು ಕೈ ಚೆಲ್ಲುತ್ತದೆ.

ಹಿಂದೆ ಮುಂದೆ ಹಿಂದು ಮುಂದಾದದ್ದು ಹೋಗಲಿ. "ಆಗ"ವನ್ನು ತೆಗೆದುಕೊಳ್ಳಿ ಇದು ಭೂತಕಾಲವನ್ನು ನಿರ್ದೇಶಿಸುತ್ತದೆ ಎನ್ನುತ್ತೀರಾ? ಹೌದು, "ಆಗ ಬಂದಿದ್ದೆ, ಈಗ ಹೊರಟಿದ್ದೇನೆ" ಆದರೆ ನಮ್ಮ ಸರ್ವಜ್ಞ ಕವಿ "ಆಗ ಬಾ ಈಗ ಬಾ ಹೋಗಿ ಬಾ ಎನ್ನದೆ" ಅರ್ಥಿಗಳಿಗೆ ಭಿಕ್ಷೆ ಕೊಡಬೇಕೆಂದು ಅಪ್ಪಣೆ ಕೊಡಿಸುತ್ತಾನಲ್ಲ, ಆಗ ಈ "ಆಗ" "ಹಿಂದುಗಡೆ"ಯ ಹಾಗೆ ಭವಿಷ್ಯತ್ತನ್ನೆ ಅಲ್ಲವೆ ಸೂಚಿಸುವುದು?

ಇಂಗ್ಲೀಷಿನಲ್ಲಿ ಕೂಡ ಇದೇ ಪಾಡು. I Stand before you ನಿಮ್ಮ ಮುಂದಿರುವ ದೇಶವನ್ನು ಕುರಿಯುತ್ತದೆ. ಹಾಗೆಯೆ There is ample time before you ಎನ್ನುವಾಗ ನಿಮ್ಮ ಮುಂದಿರುವ ಅದು ಧಾರಾಳ ಭವಿಷ್ಯತ್ತನ್ನು ಸೂಚಿಸುತ್ತದೆ. ಆದರೆ before I came here ಎನ್ನುವಾಗ before ಭವಿಷ್ಯತ್ತಿನ ಕೈ ಬಿಟ್ಟು ಭೂತವನ್ನು ನಿರ್ದೇಶಿಸುತ್ತದೆ.

ನಿಜಕ್ಕೂ ಭಾಷೆ ತೀರ ತರ್ಕಶೂನ್ಯ most illogical ಆಗಿದೆ. ಮತ್ತೆ ನಾವು ಈ ಸಂದೇಹಾಸ್ಪದ ಉಪಕರಣದಿಂದ ನಮ್ಮ ತರ್ಕಶಾಸ್ತ್ರವನ್ನು ಕಟ್ಟಿ ಅದು ಬಹು ಭದ್ರ ಕಟ್ಟಡವೆಂದು ಭಾವಿಸುತ್ತೇವಲ್ಲ!

– ಪಾವೆಂ.

# ಪ್ಲಾಸ್ಟಿಕ್: ಮಿತ್ರ ವೇಷದ ಶತ್ರು!

ಕೆ. ಶ್ರೀಕುಮಾರ



ಮನುಷ್ಯನ ದೈನಂದಿನ ಬಳಕೆಯ ವಸ್ತುಗಳಲ್ಲಿ ಪ್ಲಾಸ್ಟಿಕ್ ತನ್ನದೇ ಆಗ ಭದ್ರ ಸ್ಥಾನವನ್ನು ಸ್ಥಾಪಿಸಿಕೊಂಡಿದೆ. ಪ್ರಯೋಗಾಲಯದಲ್ಲಿ ಪ್ಲಾಸ್ಟಿಕ್ ರೂಪು ತಳೆಯುವುದಕ್ಕೂ ಮುಂಚೆ ಮಾನವನ ಅಗತ್ಯಗಳಿಗೆ ಒದಗಿ ಬಂದು ಜೀವ ಸವೆಸಿದ ತಾಮ್ರ, ಕಬ್ಬಿಣ, ಕಂಚು, ಹಿತ್ತಾಳೆಗಳು ಇತ್ತೀಚೆಗೆ ಪ್ರಸ್ತುತತೆಯನ್ನು ಕಳೆದುಕೊಳ್ಳುತ್ತಿವೆ. ಕುಂಬಾರನ ಮಡಕೆಯ ಮೇಲಂತೂ ಪ್ಲಾಸ್ಟಿಕ್ ದೊಣ್ಣೆ ಅಪ್ಪಳಿಸಿದೆ! ಮಣ್ಣು ಮತ್ತು ಲೋಹಗಳ ಮೇಲೆ ಪ್ಲಾಸ್ಟಿಕ್ ತನ್ನ ಪ್ರಭುತ್ವ ಸಾಧಿಸಲು ಅದಕ್ಕಿರುವ ಹತ್ತು ಹಲವು ಗುಣವಿಶೇಷಗಳೇ ಕಾರಣ. ಆಧುನಿಕ ಯಂತ್ರಗಳ ಬಾಯಿಯಿಂದ ನೂರೊಂದು ಬಗೆಯ ಬಣ್ಣ, ಆಕಾರ, ಪಡೆದು ಹೊರಬೀಳುವ ಪ್ಲಾಸ್ಟಿಕ್ ವಸ್ತುಗಳು ನಾಗರಿಕ ಜೀವನದ ಎಲ್ಲ ಮಗ್ಗಲುಗಳಿಗೂ ನುಗ್ಗಿ ತಮ್ಮ ಪ್ರತಿಸ್ಪರ್ಧಿಗಳನ್ನು ಹಿಮ್ಮೆಟ್ಟಿಸಿವೆ.

ಮಣ್ಣಿನಲ್ಲಿ ಬಿದ್ದರೆ ಜೀರ್ಣಿಸುವುದಿಲ್ಲ ಎಂಬುದು ಪ್ಲಾಸ್ಟಿಕ್‌ನ ಹೆಗ್ಗಳಿಕೆಯ ಕಿರೀಟಕ್ಕೆ ಸಿಕ್ಕಿಕೊಂಡ ಹೆಮ್ಮೆಯ ಗರಿ ಎನ್ನುವುದೇನೋ ಸರಿ. ಆದರೆ ಈ ವಿಶಿಷ್ಟ ಗುಣ ಸಂಪನ್ನತೆಯಿಂದಾಗಿಯೇ ಭೂಮಿಯ ಮೇಲೆ ದುಷ್ಪರಿಣಾಮ ಬೀರುವ ದುಷ್ಟ ಸಂತಾನವಾಗಿ ಪ್ಲಾಸ್ಟಿಕ್ ಗೋಚರಿಸುತ್ತದೆ ಎಂಬುದೂ ಮತ್ತೊಂದು ಬದಿಯ ಸತ್ಯ!

ಪ್ಲಾಸ್ಟಿಕ್ ವಸ್ತುಗಳನ್ನು ಉಪಯೋಗಿಸಿದ ಬಳಿಕ ಹೊರಗೆ ಎಸೆದರೆ ಅವು ಮಣ್ಣಿನಲ್ಲಿ ನೂರಾರು ವರ್ಷ ಜೀರ್ಣಿಸದೇ ಇದ್ದ ಸ್ಥಿತಿಯಲ್ಲಿಯೇ ಇರುತ್ತವೆ. ಮಣ್ಣಿನಲ್ಲಿಯ ಗಾಳಿ ಸಂಚಾರವನ್ನೂ, ಕೋಟ್ಯಾಂತರ ಸೂಕ್ಷ್ಮ ಜೀವಿಗಳ

ಮತ್ತು ಎನ್‌ಸೈಮುಗಳ ಓಡಾಟವನ್ನೂ ಅದು ತಡೆಯುತ್ತದೆ. ಅಷ್ಟೇ ಅಲ್ಲದೆ ಗಿಡಮರಗಳ ಬೇರುಗಳ ಸಂಚಾರಕ್ಕೆ ಸಂಚಕಾರ ತರುತ್ತದೆ. ಈಗ ಲಭ್ಯವಿರುವ ಪ್ಲಾಸ್ಟಿಕ್‌ಗಳು ಸುಮಾರು 200ರಿಂದ 400 ವರ್ಷಗಳವರೆಗೆ ಜೀರ್ಣಗೊಳ್ಳದೆ ಉಳಿಯಬಲ್ಲವೆಂದರೆ ಅವುಗಳ ದುಷ್ಪರಿಣಾಮದ ಅಗಾಧತೆಯ ಅರಿವಾದೀತು. ಎಲ್ಲಾ ಪ್ಲಾಸ್ಟಿಕ್ ವಸ್ತುಗಳನ್ನು ಹೀಗೆಯೇ ಹೊರಗೆ ಚೆಲ್ಲುತ್ತಾ ಬಂದರೆ ಮಣ್ಣಿನ ಗುಣವೆಲ್ಲ ನಾಶವಾಗಿ ಅನೇಕ ಬಗೆಯ ಸಮಸ್ಯೆಗಳ ಗೊಂಚಲು ಚಿಗಿತು ನಿಲ್ಲುವ ದಿನಗಳೇನೂ ದೂರ ಉಳಿಯುವುದಿಲ್ಲ.

ಪ್ಲಾಸ್ಟಿಕ್ ಒಂದು ಸಂಯುಕ್ತ ವಸ್ತು. ಇದರ ತಯಾರಿಕೆಯಲ್ಲಿ ಹಲವಾರು ಮಿಶ್ರಣಗಳು ಸೇರಿಕೊಂಡಿರುತ್ತವೆ. ಪ್ಲಾಸ್ಟಿಕ್ ತನ್ನ ಹೊಟ್ಟೆಯಲ್ಲಿ ಕಟ್ಟಿಟ್ಟುಕೊಂಡ ವಿನೈಲ್ ಕ್ಲೋರೈಡ್‌ನಂಥ ವಸ್ತು ಕ್ಯಾನ್ಸರ್‌ಗೆ ಕಾರಣವಾಗಬಲ್ಲದು. ಸುಡುವ ಕಾಫಿ ಅಥವಾ ಚಹಾವನ್ನು ಪ್ಲಾಸ್ಟಿಕ್ ಲೋಟದಲ್ಲಿ ಸುರಿದಾಗ ಅದರೊಳಗಿನ ರಾಸಾಯನಿಕ ವಸ್ತುವಿನ ಒಂದಂಶ ಮನುಷ್ಯನ ದೇಹದೊಳಗೂ ಸೇರಿ ಅಪಾಯ ಉಂಟು ಮಾಡುವ ಸಾಧ್ಯತೆ ಬಗ್ಗೆ ಪಾಶ್ಚಾತ್ಯ ಸಂಶೋಧನೆಗಳು ಸೂಚನೆ ನೀಡಿವೆ.

ಪ್ಲಾಸ್ಟಿಕ್ ವಸ್ತುಗಳ ಸಾಧಕ-ಬಾಧಕಗಳೇನೇ ಇರಲಿ, ಅದನ್ನು ಕುರಿತು ಯೋಚಿಸಲು ಮಾನವನಿಗೆ ವೇಳೆಯಿಲ್ಲ. ಸದ್ಯದ ಅಗತ್ಯಗಳಿಗೆ ವಿಧೇಯವಾಗಿ ಒದಗಿ ಬರುವ ಪ್ಲಾಸ್ಟಿಕ್ ವಸ್ತುವನ್ನು ಮನುಷ್ಯ ಮರು ಚಿಂತನೆಯಿಲ್ಲದೇ ಬಳಸುತ್ತಾ ಬರುತ್ತಿದ್ದಾನೆ. ಅಂತೆಯೇ ದಿನದಿನಕ್ಕೂ ಪ್ಲಾಸ್ಟಿಕ್‌ನ ಬಳಕೆಯ ಪ್ರಪಂಚ ವಿಸ್ತಾರಗೊಳ್ಳುತ್ತಲೇ ಸಾಗಿದೆ. ಭಾರತದಲ್ಲಿ ಹಲವಾರು ಪೆಟ್ರೋಕೆಮಿಕಲ್ ಕಾರ್ಖಾನೆಗಳಿಗೆ ಪರವಾನಿಗಿ ಕೊಡಲ್ಪಟ್ಟಿದೆ. ಬೃಹತ್ ಗಾತ್ರದ ಈ ಕೈಗಾರಿಕೆಗಳ ಉತ್ಪಾದನೆ ಮಣ್ಣಿನ ಮಾಲಿನ್ಯಕ್ಕೆ ನೇರ ಕಾಣಿಕೆ ಸಲ್ಲಿಸುತ್ತಿದೆ. ಈಥಲಿನ್, ಪ್ರೊಪಿಲನ್ ಮುಂತಾದ ಪೆಟ್ರೋರಾಸಾಯನಿಕ ವಸ್ತುಗಳನ್ನು ಪ್ಲಾಸ್ಟಿಕ್ ತಯಾರಿಕೆಯಲ್ಲಿ ಮಾತ್ರ ಬಳಸಲಾಗುತ್ತಿದೆ.

**ಭವಿಷ್ಯದ ಪ್ಲಾಸ್ಟಿಕ್ ಉತ್ಪಾದನೆಯ ನೋಟ**

| ಕಂಪನಿ | ಎಥಿಲಿನ (ಟನ್/ವರ್ಷ) | ಪ್ರೊಪಲಿನ್ (ಟನ್/ವರ್ಷ) |
|---|---|---|
| 1) ಎಂ.ಜಿ.ಸಿ.ಪಿ. ನಾಗಥೋನ್ | 4,00,000 | 70,000 |
| 2) ರೀಲಿಯನ್ಸ್ ಪೆಟ್ರೋಕೆಮಿಕಲ್ಸ್ | 3,50,000 | 1,50,00 |
| 3) ಐ.ಪಿ.ಸಿ.ಎಲ್. ಗಾಂಧಾರ್ | 3,50,000 | 70,000 |
| 4) ಜಿ.ಎ.ಇ.ಎಲ್., ಮಧ್ಯಪ್ರದೇಶ | - | 1,20,000 |
| 5) ಯು.ಬಿ. ಪೆಟ್ರೋಕೆಮಿಕಲ್ಸ್, ವಿಶಾಖಪಟ್ಟಣ | 3,00,000 | 1,00,000 |
| 6) ಹಾಲ್ದಿಯಾ ಪೆಟ್ರೋಕೆಮಿಕಲ್ಸ್, ಕಲ್ಕತ್ತ | 1,50,000 | 70,000 |
| 7) ನಾಸಿಲ್, ಥಾನೆ-ಬೇಲಾಪೂರ್ | 2,50,000 | 1,50,000 |
| 8) ಲಿಂಡೆ-ಗೋಯಂಕಾ, ಮದ್ರಾಸ್ | 3,50,000 | 1,50,000 |

ಪಾಶ್ಚಿಮಾತ್ಯ ದೇಶಗಳಲ್ಲಿ ಪ್ಲಾಸ್ಟಿಕ್‌ನ ದುಷ್ಪರಿಣಾಮಗಳ ಕುರಿತು ಜಾಗೃತಿಯೂ ಬೆಳೆಯುತ್ತಿದೆ. 1988ರಲ್ಲಿ ನ್ಯೂಯಾರ್ಕ್ ರಾಜ್ಯದಲ್ಲಿ ಕಾನೂನೊಂದನ್ನು ರೂಪಿಸಿ ಪಿ.ವಿ.ಸಿ. ಮತ್ತು ಪಾಲಿಸ್ಟೆರಿನ್ ಎಂಬ ಎರಡು ಮುಖ್ಯ ಪ್ಲಾಸ್ಟಿಕ್‌ಗಳ ಉಪಯೋಗವನ್ನು ನಿಷೇಧಿಸಿತು. ಕೆಲವು ಆಸಕ್ತ ಕಂಪನಿಗಳು ಈ ಕಾನೂನನ್ನು ವಿರೋಧಿಸಿ ನ್ಯಾಯಾಲಯದ ಕಟ್ಟೆ ಹತ್ತಿದ್ದರೂ, ಇತರ

ಕಾನೂನುಗಳನ್ನು ಜಾರಿಗೊಳಿಸುವುದರಲ್ಲಿ ತಪ್ಪಿಲ್ಲವೆಂದು ನ್ಯಾಯಾಧೀಶರು ಅಭಿಪ್ರಾಯಪಟ್ಟಿದ್ದಾರೆ. ಜರ್ಮನಿಯಲ್ಲಿ ಪ್ಲಾಸ್ಟಿಕ್‌ನಿಂದ ಮಾಡಿದ ಕಪ್‌ಗಳನ್ನು ನಿಷೇಧಿಸಲಾಯಿತು. ಇಟಲಿಯ ಅನೇಕ ಪಟ್ಟಣಗಳಲ್ಲಿ ಪ್ಲಾಸ್ಟಿಕ್ ಚೀಲ ಮಾರುವುದನ್ನು ತಡೆಗಟ್ಟಲಾಗಿದೆ 1991 ಜನವರಿಯಿಂದ ಪಿ.ವಿ.ಸಿ.ಯನ್ನು ಮಾರುಕಟ್ಟೆಯಿಂದ ಕಾಲ್ತೆಗೆಯುವ ಕಾನೂನೊಂದನ್ನು ಆಸ್ಟ್ರಿಯಾ ರೂಪಿಸಿದೆ. ನೆದರ್‌ಲ್ಯಾಂಡಿನಲ್ಲಿ 1993ರಿಂದ ಪಿ.ವಿ.ಸಿ.ಗೆ ಅರ್ಧಚಂದ್ರ. ಯುರೋಪಿನಾದ್ಯಂತ ಪ್ಲಾಸ್ಟಿಕ್ ನಿಯಂತ್ರಣದ ಅಲೆ ಬೀಸುತ್ತಿವೆ. ಅಲ್ಲಿನ ಸರಕಾರಗಳು ಈ ನಿಟ್ಟಿನಲ್ಲಿ ಒಂದಿಲ್ಲೊಂದು ಯೋಜನೆಯನ್ನು ಪ್ರಾರಂಭಿಸಿವೆ. ಹೀಗಿರುವಾಗ ಭಾರತ ಮಾತ್ರ ದಿವ್ಯ ನಿರ್ಲಕ್ಷ್ಯದಲ್ಲಿ ತೂಕಡಿಸುತ್ತಿದೆ.

ಮರುಬಳಕೆ ಪ್ಲಾಸ್ಟಿಕ್ ಮಾಲಿನ್ಯಕ್ಕೆ ತಕ್ಕುದಾದ ಪರಿಹಾರ ಮಾರ್ಗವೆಂದು ಹೇಳಲಾಗುತ್ತದೆ. ಇದು ನಿಜ ಕೂಡ. ಆದರೆ ಅದನ್ನು ಪುನರ್ ಉಪಯೋಗಿಸುವುದು ಅಷ್ಟು ಸುಲಭಸಾಧ್ಯವಲ್ಲ. ಪ್ಲಾಸ್ಟಿಕ್‌ಗಳು ಬೇರೆ ಬೇರೆ ಪದಾರ್ಥಗಳಿಂದ ಮಾಡಲ್ಪಡುತ್ತವೆ. ಅಲ್ಲದೆ ಅವುಗಳ ಬಣ್ಣ, ಪ್ರಮಾಣಗಳೂ ಭಿನ್ನವಾಗಿರುತ್ತವೆ. ಆದುದರಿಂದ ಪ್ಲಾಸ್ಟಿಕ್‌ನ್ನು ಕರಗಿಸಿ ಪುನರುಪಯೋಗಿಸಿದಾಗ ಅದರ ಗುಣ ನಷ್ಟವಾಗುತ್ತದೆ. ಸುಲಭದಲ್ಲಿ ಜೀರ್ಣವಾಗುವ ಪ್ಲಾಸ್ಟಿಕ್ ತಯಾರಿಕೆ ಮತ್ತೊಂದು ಪರಿಹಾರ ಮಾರ್ಗ. ಹೀಗೆ ಮಾಡಲು ಜೀರ್ಣಿಸುವ ವಸ್ತುಗಳನ್ನು ಪ್ಲಾಸ್ಟಿಕ್‌ನಲ್ಲಿ ಸೇರಿಸಬೇಕಾಗುತ್ತದೆ. ಆದರೆ ಇದೂ ಸಹ ಗುಣಮಟ್ಟವನ್ನು ಕಡಿತಗೊಳಿಸುವುದು. ಬಳಕೆಯ ನಂತರ ಪ್ಲಾಸ್ಟಿಕ್ ವಸ್ತುಗಳನ್ನು ಸುಟ್ಟು ಹಾಕಬಹುದು. ಕೆಲವು ವಸ್ತುಗಳನ್ನು ಸುಟ್ಟಾಗ ವಿಷಪೂರಿತ ವಾಯು ಬಿಡುಗಡೆಯಾಗುವುದರಿಂದ ಈ ಕ್ರಮವೂ ಅಪಾಯಕಾರಿಯಾದುದು. ಬಹುಶಃ ಬಳಕೆ ಮತ್ತು ಉತ್ಪಾದನೆಯ ಮೇಲೆ ಮಿತಿ ಹೇರುವುದೊಂದೇ ಪರಿಣಾಮಕಾರಿ ಮಾರ್ಗವೇನೋ.

ಇನ್ನು ಮೇಲೆ ಪ್ಲಾಸ್ಟಿಕ್‌ಗಳ ಬೆಲೆ ಏರುತ್ತ ಹೋಗುವುದು ಸಹಜ. ಏಕೆಂದರೆ ಇವು ಕಚ್ಚಾ ಎಣ್ಣೆ (Crude Oil)ಯಿಂದ ತಯಾರಿಸಲ್ಪಟ್ಟ ಪೆಟ್ರೋಕೆಮಿಕಲ್ಸ್ ವಸ್ತುಗಳು. ಅಲ್ಲದೆ ಪ್ಲಾಸ್ಟಿಕ್‌ನಲ್ಲಿ ಪ್ಯಾಕ್ ಮಾಡಿದ ವಸ್ತುಗಳ ಬೆಲೆಯೂ ಮೇಲ್ಮುಖವಾಗಿ ಚಲಿಸತೊಡಗುತ್ತದೆ.

ಅಂತೂ ನಾಗರಿಕ ಲೋಕವನ್ನು ಸ್ನೇಹಿತನಂತೆ ಪ್ರವೇಶಿಸಿದ ಪ್ಲಾಸ್ಟಿಕ್ ಕೆಲವೇ ದಿನಗಳಲ್ಲಿ ಪರಿಸರದ ಮೇಲೆ ನಿಧಾನ ವಿಷಕಾರುತ್ತದೆಂದು ಯಾರು ತಾನೇ ನಿರೀಕ್ಷಿಸಿದ್ದರು? ●

## ತೈಲಕ್ಕೂ ಒಂದು ಕಾಲ!

ತೈಲದ ಬೆಲೆ ಏರುತ್ತಲೇ ಇದೆ. ಮುಂದಿನ ಪೀಳಿಗೆಗೆ ತೈಲ ಸಿಗಬಹುದೇ ಎಂಬ ಅನುಮಾನ ಬೇರೆ. ಒಂದು ಕಾಲಕ್ಕೆ ಅಂದರೆ 1930ರಲ್ಲಿ ಸಿಂಗಪೂರ್‌ನಲ್ಲಿ ತೈಲ ಮಾರುವುದರಲ್ಲೂ ಪೈಪೋಟಿ ಇತ್ತು. ಗಿರಾಕಿಯನ್ನು ತನ್ನ ಬಂಕ್‌ಗೇ ಬರಲು ಹಲವಾರು ಆಮಿಷ ಒಡ್ಡುತ್ತಿದ್ದರು. ಸೊಕೋನಿ ಪೆಟ್ರೋಲ್ ಬಂಕ್ ಒಂದು ಗ್ಯಾಲನ್ನಿಗೆ ಒಂದು ಡಾಲರ್‌ನಂತೆ ಕೊಟ್ಟು ಗಿರಾಕಿಯನ್ನು ಟೀ ಇತ್ತು ಮೆಚ್ಚಿಸುತ್ತಿದ್ದರು. ಆದರೆ ಬರ್ಮಾ ಶೆಲ್ ಬಂಕು ಗಿರಾಕಿಗಳಿಗೆ ಪೆಟ್ರೋಲನ್ನು ಅದೇ ಬೆಲೆಗೆ ಕೊಟ್ಟು ಗಿರಾಕಿಗೆ ಗೋಲ್ಡ್ ಫ್ಲೇಕ್ ಸಿಗರೇಟನ್ನು ಪುಕ್ಕಟೆಯಾಗಿತ್ತು ಸಂತೃಪ್ತರಾಗಿಸುತ್ತಿದ್ದರು.

ಬಿಸಿಲು ಮಳೆಯೆಂದು ನೋಡದೆ ಬಂಕ್‌ನಿಂದ ಬಂಕಿಗೆ ಧಾವಿಸಿ ಕ್ಯೂ ನಿಂತು ಏರುತ್ತಲೇ ಇರುವ ಅಮೂಲ್ಯವಾದ ತೈಲವನ್ನು ಕೊಳ್ಳುತ್ತಿರುವ ಈ ದಿನಗಳೊಂದಿಗೆ ಕಳೆದು ಹೋದ ಆ ದಿನಗಳನ್ನು ಹೋಲಿಸಲು ಸಾಧ್ಯವೇ?

**(ಸಂಗ್ರಹ) ಬಿ.ಎಸ್.ನರೇಂದ್ರನಾಥ್**

ಅಮೆರಿಕದ ವಾಷಿಂಗ್ಟನ್ ಡಿ.ಸಿ.ಯಲ್ಲಿನ 18 ಎಕರೆಗಳಷ್ಟು ವಿಶಾಲವಾದ ಜಾಗದಲ್ಲಿ ತಲೆಯೆತ್ತಿ ನಿಂತಿರುವ 'ಶ್ವೇತ ಭವನ' (ವೈಟ್ ಹೌಸ್) ವೀಗ ಯಾರಿಂದಲೂ ಕೂಡ ಊಹಿಸಲಾಗದಂಥ ವಿಸ್ಮಯವೊಂದನ್ನು ತನ್ನೊಡಲಲ್ಲಿ ಹುದುಗಿಸಿಟ್ಟುಕೊಂಡು ಸುದ್ದಿ ಮಾಡುತ್ತಿದೆ. ಅಲ್ಲಿನ ಅಧ್ಯಕ್ಷರ ವಾಸ್ತವ್ಯಕ್ಕೆಂದೇ ನಿರ್ಮಿಸಲಾದ ಈ ಭವನದಲ್ಲೀಗ ಅಜ್ಞಾತ ಗ್ರಹದ ಜೀವಿಯ ಶವವೊಂದನ್ನು ಅಡಗಿಸಿಡಲಾಗಿದೆ ಎಂಬ ಅತೀ ವಿಚಿತ್ರದ ಸುದ್ದಿಯೊಂದು ಪ್ರಚಲಿತದಲ್ಲಿದ್ದುದೇ ಈ ವಿಸ್ಮಯಕ್ಕೆ ಕಾರಣ!

ಹಾಗಾದರೆ ವೈಟ್ ಹೌಸ್‌ನಲ್ಲಿ ಅನ್ಯ ಗ್ರಹದ



# ವೈಟ್ ಹೌಸ್‌ನಲ್ಲಿ ಅನ್ಯ ಗ್ರಹದ ಜೀವಿಯ ಶವ?!

ಜೀವಿಯೊಂದರ ಶವ ನಿಜವಾಗಿಯೂ ಇದೆಯೆ? ಇದು ನಂಬುವಂಥ ಸುದ್ದಿಯೆ? ಪ್ರಶ್ನೆಗಳ ಸರಮಾಲೆಯೇ ಉದ್ಭವಿಸುತ್ತದೆ. ಇದೇ ಕುರಿತಾಗಿ ಅಮೆರಿಕದ ಕುತೂಹಲಿಗರಲ್ಲಿ ಗುಸುಗುಸು ಆರಂಭವಾಗಿ ಅದು ಬೊಬ್ಬಿರಿಯುವ ಮಟ್ಟಕ್ಕೆ ಹೋದಾಗ ಅಧ್ಯಕ್ಷ ಜಾರ್ಜ್ ಬುಶ್ ಅವರೇ ಇದೆಲ್ಲ ಶುದ್ಧ ಸುಳ್ಳು ಎಂದು ಸ್ಪಷ್ಟೀಕರಣ ನೀಡುವಂಥ ಸಂದರ್ಭ ಬಂದಿತ್ತು! ಅಂದ ಮೇಲೆ ಘಟನೆಯ ಹಿನ್ನೆಲೆ ರೋಚಕವಾಗಿರಬೇಕಲ್ಲವೇ?

ವೈಟ್ ಹೌಸ್‌ನ ಪ್ರಯೋಗಶಾಲೆಯೊಂದರ ಕರ್ಮಚಾರಿಯೊಬ್ಬ ಬಾಯ್ಲರ್ ರೂಮಿನಲ್ಲಿ ಯಾವುದೋ ವಸ್ತುವೊಂದರ ಹುಡುಕಾಟದಲ್ಲಿ ತಲ್ಲೀನನಾಗಿದ್ದಾಗ ಒಂದು ವಿಶಾಲವಾದ ಮಂಕರಿಯಲ್ಲಿ ವಿಚಿತ್ರ ಜೀವಿಯೊಂದನ್ನು ಸುರಕ್ಷಿತವಾಗಿ ಇಟ್ಟಿರುವುದನ್ನು ಕಂಡ. ಈ ಟ್ರೇಯ ಪಕ್ಕದಲ್ಲೇ ಯು.ಎಫ್.ಓ. (Unidentified Flying Objects) ಗೆ ಸಂಬಂಧಿಸಿದ ಅತೀ ಗೌಪ್ಯವಾದ ಫೈಲ್ ಒಂದನ್ನು ಇರಿಸಲಾಗಿತ್ತು. ಅಂದರೆ, 1985 ರಲ್ಲಿ ಅಲಾಸ್ಕಾದ ಉದ್ಯಾನ ಅಧ್ಯಯನ ಕೇಂದ್ರದ ಸಮೀಪ ಸಂಭವಿಸಿದ ಭೀಕರ ವಿಸ್ಫೋಟವೊಂದರ ವಿವರಗಳನ್ನು ಅಮೆರಿಕದ ವಾಯುಸೇನೆಯ ಅಧಿಕಾರಿಗಳು ಯು.ಎಫ್.ಓ. ಎಂಬ ರಹಸ್ಯ ಹೆಸರಿನಲ್ಲಿ ದಾಖಲಿಸಿಟ್ಟ ವರದಿ ಇದು. ಇದನ್ನು ವೀಕ್ಷಿಸಿದ ಆ ಕರ್ಮಚಾರಿಯಲ್ಲಿ ವಿಶೇಷ ಕುತೂಹಲವೊಂದು ಮೊಳಕೆಯೊಡೆಯಿತು. ಗುಪ್ತ ರೀತಿಯಲ್ಲಿ ಅದನ್ನು ಶ್ವೇತ ಭವನದಾಚೆ ಸಾಗಿಸಿ ಅಮೆ

---

ಎಚ್. ಪ್ರೇಮಾನಂದ ಕಾಮತ್

---

ರಿಕದ ರಕ್ಷಣಾ ಮುಖ್ಯಾಲಯವಾದ ಪೆಂಟಗನ್‌ನಲ್ಲಿ ಕಾರ್ಯ ನಿಭಾಯಿಸುತ್ತಿದ್ದ ತನ್ನ ಪರಿಚಿತನೊಬ್ಬನಿಗೆ ಹಸ್ತಾಂತರಿಸಿದ. ಪೆಂಟಗನ್‌ನ ಈ ಕುತೂಹಲಿಗನಿಂದ ಈ ಸಿಕ್ರೆಟ್ ಫೈಲ್ ಮಿಲಿಟರಿಯ ಮುಖ್ಯಾಧಿಕಾರಿಯೊಬ್ಬನ ಕೈ ಸೇರಿತು.

ನಿನ್ನ ಹೆಸರನ್ನು ಬಹಿರಂಗ ಮಾಡಲಾರೆ ಎಂದು ಅಭಯ ನೀಡಿದ ಈ ಮಿಲಿಟರಿ ಮುಖ್ಯಸ್ಥ

ಮುಂದಿನ ಕಾರ್ಯಾಚರಣೆಯನ್ನು ಕೈಗೊಳ್ಳಲು ಸನ್ನದ್ಧನಾದ; ಆ ಫೈಲ್‌ನ ಒಂದೊಂದೇ ಪುಟವನ್ನು ತಿರುವಿ ಹಾಕಲು ಮುಂದಾದ. ಅದರಲ್ಲಿ ಏನು ಅಡಗಿತ್ತು ಗೊತ್ತೆ? ಎಂಟಡಿ ಉದ್ದದ ಅಂತರಿಕ್ಷ ಮಾನವನೊಬ್ಬನ ವಿವಿಧ ಭಂಗಿಯ ವರ್ಣ ಚಿತ್ರಗಳು! ಅತೀ ಕೃಶಕಾಯನಂತಿದ್ದು, ಕೇವಲ ಮೂಳೆಯ ಹಂದರವನ್ನೇ ಆವರಿಸಿಕೊಂಡಂತಿದ್ದ ಈ ಪಚ್ಚೆ ಬಣ್ಣದ ಮೈ ಚರ್ಮದ ಜೀವಿಯನ್ನು ಕಂಡ ಸೇನಾ ಮುಖ್ಯಸ್ಥನಿಗೆ ಎಲ್ಲವೂ ವಿಚಿತ್ರವಾಗಿ ತೋರಲ್ಪಟ್ಟಿತು. ಅದರಲ್ಲಿ ಬರೆದಿದ್ದ ಅನ್ಯ ಗ್ರಹದ ಜೀವಿಯ ಕುರಿತಾದ ಬರಹಗಳನ್ನು ನಂಬುವುದೋ ಬಿಡುವುದೋ ಎಂಬಂಥ ಸಂದಿಗ್ಧತೆ! ಅಂದು ಅಲಾಸ್ಕಾದಲ್ಲಿ ಸಂಭವಿಸಿದ ವಿಸ್ಫೋಟದ ವರದಿಯನ್ನು ಹೊಂದಿರಬೇಕಾಗಿದ್ದ ಈ ಫೈಲ್‌ನಲ್ಲಿ ನಂಬಲನರ್ಹವಾದ ಸುದ್ದಿ-ಚಿತ್ರವನ್ನು ತುಂಬಿಸಿಟ್ಟಿರುವುದರ ಔಚಿತ್ಯವಾದರೂ ಏನು? ಓದುತ್ತ ಹೋದಂತೆ ವಿಷಯ ಸ್ಪಷ್ಟವಾಗತೊಡಗಿತು.

ಇದು 1985ರಲ್ಲಿ ನಡೆದ ಘಟನೆ. ಅಂತರಿಕ್ಷ ವಾಹನವೊಂದು ಅಲಾಸ್ಕಾದ ಸಮೀಪ ಧರೆಗೆ ಅಪ್ಪಳಿಸಿದೆ ಎಂಬ ಅಧಿಕೃತ ಮಾಹಿತಿ ದೊರೆತೊಡನೆ ಅಮೆರಿಕದ ವಾಯುಸೇನೆಯ ಅಧಿಕಾರಿಗಳ ತಂಡವೊಂದು ಆ ಜಾಗದ ಆಸುಪಾಸಿನಲ್ಲಿ ಹುಡುಕಾಟ ನಿರತವಾಗಿತ್ತು. ಅಕಸ್ಮಾತ್ ಈ ವಾಹನ ನಮ್ಮ ಭೂಮಿಯ ಮೇಲಿನದ್ದಾಗಿರದೆ, ಇದರಲ್ಲಿ ಯಾವುದಾದರೂ ಜೀವಿ ಇದ್ದಿದ್ದರೆ, ಈ ಅಪಘಾತದಲ್ಲಿ ಅದು ಜೀವಂತವಾಗಿ ಉಳಿದದ್ದೇ ಹೌದಾದಲ್ಲಿ ತಮ್ಮ ಸಂಶೋಧನೆಗೆ ಅತ್ಯುಪಯುಕ್ತವಾದ ವಸ್ತು ದೊರಕಿದಂತಾಗುತ್ತದೆ ಎಂಬ ಆಲೋಚನೆ ಇವರದ್ದಾಗಿತ್ತು. ಇದು ಒಡನೆಯೇ ಫಲ ಕೊಟ್ಟಿತು. ಸಮೀಪದ ಮಂಜುಗಡ್ಡೆಯ ಪ್ರದೇಶದಲ್ಲಿ ಎಂಟಡಿ ಉದ್ದದ ಜೀವಿಯೊಂದು ನಿಶ್ಚೇಷ್ಟಿತವಾಗಿ ಬಿದ್ದಿತ್ತು. ಇದು ಆ ಅಂತರಿಕ್ಷ ವಾಹನಾಪಘಾತದ ಸಂದರ್ಭದಲ್ಲಿ ಈ ಅಧಿಕಾರಿಗಳಿಗೆ ಸಿಕ್ಕ ಏಕೈಕ ಜೀವಿಯಾಗಿತ್ತು. ಕೂಡಲೇ ಇದನ್ನು ಮಿಲಿಟರಿ ಆಸ್ಪತ್ರೆಗೆ ಸಾಗಿಸಿದರು.

ಮುಂದೇನಾಯಿತು ಎಂಬ ಸಂಗತಿ ಈ ಫೈಲ್‌ನಲ್ಲಿರಲಿಲ್ಲ. ಇದನ್ನು ಅರಿಯಬೇಕಾದರೆ ವಾಸ್ತವಿಕ ಘಟನಾವಳಿಗಳತ್ತ ದೃಷ್ಟಿ ಹಾಯಿಸಬೇಕು - ಶ್ವೇತಭವನದ ಕಾರ್ಯಕರ್ತನಿಂದ ಫೈಲ್‌ನ್ನು ಪಡೆದ ಈ ಮಿಲಿಟರಿ ಮುಖ್ಯಸ್ಥ ಅದೇ ಕರ್ಮಚಾರಿಯಿಂದ ಆ ಶವವನ್ನು ಹೇಗಾದರೂ ಮಾಡಿ ಹೊರ ಸಾಗಿಸುವಂತೆ ಆಗ್ರಹಿಸಿದ. ಪ್ರಸಾರ ಮಾಧ್ಯಮಗಳ ಮೂಲಕ ಈ ಅತಿ ರಂಜಿತ ರಹಸ್ಯವನ್ನು ಇಡಿ ಜಗತ್ತಿಗೇ ತಿಳಿಸುವ ನಿರ್ಧಾರಕ್ಕೆ ಈತ ಬಂದಿದ್ದ. ಆದರೆ ಆ ಕರ್ಮಚಾರಿ ಶ್ವೇತ ಭವನದ ಪ್ರಯೋಗಶಾಲೆಗೆ ಹೋದಾಗ ಆಘಾತ ಕಾದಿತ್ತು; ಆ ಜೀವಿಯ ಶವ ಅಲ್ಲಿಂದ ಮಾಯವಾಗಿತ್ತು!

ಇನ್ನು ವಿಳಂಬಿಸುವ ಹಾಗಿರಲಿಲ್ಲ. ಆ ಮಿಲಿಟರಿ ಮುಖ್ಯಸ್ಥ ಅಮೆರಿಕದ ನಿಯತಕಾಲಿಕಗಳಿಗೆಲ್ಲ ಅಂತರಿಕ್ಷ ಜೀವಿಯದು ಎನ್ನಲಾದ ವರ್ಣರಂಜಿತ ಚಿತ್ರ-ಲೇಖನಗಳನ್ನು ಒಂದರ ಮೇಲೊಂದರಂತೆ ಕಳಿಸಿ ಇಡೀ ಶ್ವೇತ ಭವನವನ್ನೇ ನಡುಗಿಸತೊಡಗಿದ! ಈತನ ವಿನಂತಿಯೇನೆಂದರೆ, ಅಲಾಸ್ಕಾದಲ್ಲಿ ಅಂದು ದೊರಕಿದ ಜೀವಿಯ ಶವವನ್ನು ಸಾರ್ವಜನಿಕ ಪ್ರದರ್ಶನಕ್ಕೆ ಇಡಬೇಕು ಎಂಬುದು. ಆದರೆ ಅಮೆರಿಕದ ರಾಜಕೀಯ ವರಿಷ್ಠರು ಈ ಸುದ್ದಿ ಶುದ್ಧ ಸುಳ್ಳು, ಬರೀ ಕಲ್ಪಿತ ಎಂದು ವಾದಿಸಿ ಅಧ್ಯಕ್ಷ ಜಾರ್ಜ್ ಬುಶ್ ಅವರಿಂದ ಪ್ರಕಟಣೆಯನ್ನು ಹೊರಡಿಸಿದರು.

ಆದರೆ ತನ್ನ ಉನ್ನತ ಹುದ್ದೆಯ ಮೇಲಿನ ಆಸೆಯನ್ನೇ ತ್ಯಜಿಸಿರುವ ಈ ಸೇನಾ ಮುಖ್ಯಸ್ಥ ಈ ಸುದ್ದಿಗೆ ಗ್ರಾಸವೊದಗಿಸುವ ಆಧಾರಗಳೆಲ್ಲ ನನ್ನ ಬಳಿ ಸುರಕ್ಷಿತವಾಗಿವೆ ಎನ್ನುತ್ತ ರಾಷ್ಟ್ರಾಧ್ಯಕ್ಷರಿಗೇ ಸವಾಲು ಹಾಕುತ್ತಿದ್ದಾನೆ! ಬಹಳ ವಿಚಿತ್ರವೆನಿಸಿದ ಈ ಘಟನೆಯ ಮುಂದಿನ ಬೆಳವಣಿಗೆ ಏನು, ಆ ವಿಷಯವನ್ನು ಅಲ್ಲಿನ ಪ್ರಸಾರ ಮಾಧ್ಯಮಗಳಿಂದ ನಿರೀಕ್ಷಿಸಬಹುದೇ ಎಂಬಂಥ ಪ್ರಶ್ನೆಗಳಿಗೆಲ್ಲ ಕಾಲವೇ ಉತ್ತರ ಹೇಳಬೇಕು. ●

(ಆಧಾರ: ಹಿಂದಿ ಮಾಸಿಕ 'ಮನೋಹರ ಕಹಾನಿಯಾ')

ಅನ್ಯಗ್ರಹದ ಜೀವಿಯ ಶವ!

# ಮುದ್ದಣನ

# 'ಶ್ರೀರಾಮಾಶ್ವಮೇಧಂ'ದಲ್ಲಿ ಸೀತಾದೇವಿ

**ಕನ್ನಡ ಸಾಹಿತ್ಯ ಚರಿತ್ರೆಯ ಹಾದಿಯಲ್ಲಿ ಮುದ್ದಣ ಕವಿ ಮುಖ್ಯ ಮೈಲುಗಲ್ಲಾಗಿ ನಿಲ್ಲುತ್ತಾನೆ. ಮುದ್ದಣ-ಮನೋರಮೆಯರ ಸಲ್ಲಾಪವನ್ನು ಸವಿಯದ ಕನ್ನಡಿಗರು ಇರಲಿಕ್ಕಿಲ್ಲ. ಆತನ 'ಶ್ರೀರಾಮಾಶ್ವಮೇಧಂ' ಕೃತಿಯಲ್ಲಿ ಸೀತೆಯ ಪಾತ್ರ ಕುರಿತಂತೆ ಕುತೂಹಲಕರ ಹೊಳಹುಗಳನ್ನು ಬಿಂಬಿಸುವ ಲೇಖನ ಇಲ್ಲಿದೆ.**

*—— ರೇಣುಕಾ ದೇಶಪಾಂಡೆ ——*

ಕನ್ನಡ ಸಾಹಿತ್ಯದಲ್ಲಿ ಹೊಸ ವಾತಾವರಣಕ್ಕೆ ನಾಂದಿ ಹಾಡಿ, ಮನೋರಮೆಗೆ ''ಪದ್ಯಂ ವದ್ಯಂ; ಗದ್ಯಂ ಹೃದ್ಯಂ'' ಹೃದ್ಯಮಪ್ಪ ಗದ್ಯದೊಳೆ ಕಥೆ ಹೇಳುವೆನೆಂದು 'ಶ್ರೀರಾಮಾಶ್ವಮೇಧಂ' ಕೃತಿಯನ್ನು ಹಳಗನ್ನಡ ಗದ್ಯದಲ್ಲಿ ರಚಿಸಿದವನು ಕನ್ನಡದ ಮುದ್ದಣ ಕವಿ. 'ಶ್ರೀರಾಮಾಶ್ವಮೇಧಂ' ಒಂದು ಕನ್ನಡದ ಅಪೂರ್ವ ಕೃತಿ. ಕಥೆ ಚಿರಪರಿಚಿತವೇ ಆದರೂ ಕಥಾ ನಿರೂಪಣಾ ಪದ್ಧತಿ ಹೊಸದು. 'ಕನ್ನಡಂ ಕತ್ತುರಿಯಲ್ತೆ' ಎಂದು ಮುದ್ದು ಮಡದಿ ಮನೋರಮೆಯಿಂದ ಹೇಳಿಸಿ ಕರಿಮಣಿಸರದಲ್ಲಿ ಚಂಬವಳಕೋದಂತೆ ತಿರುಳ್ಗನ್ನಡದಲ್ಲಿ ಅಲ್ಲಲ್ಲಿ ಸಂಸ್ಕೃತದ ನುಡಿಗಟ್ಟುಗಳನ್ನು ಪೋಣಿಸಿ ಹಲವಾರು ವರ್ಣನೆ, ಬೆಡಗು ಬಿನ್ನಾಣಗಳ ಮಾಲೆಯನ್ನೇ ಹೆಣೆದ ರಸಿಕ ಕವಿ ನವರಸಗಳಲ್ಲಿ ಮುಗ್ಧಮಡದಿ ಮನೋರಮೆಗೆ 'ಮುದ್ದಣ ಮನೋರಮೆಯರ ಸರಸಸಲ್ಲಾಪ' ದಿಂದ ಕಥೆ ಹೇಳಿ ಓದುಗರನ್ನು ನಕ್ಕುನಗಿಸಿ ನಮಗೆಲ್ಲ ಚಿರಪರಿಚಿತ ಹಾಗೂ ಆತ್ಮೀಯನಾಗಿದ್ದಾನೆ. ಅದರಂತೆಯೇ ಕರುಣರಸ ಬಂದಲ್ಲಿ ಅಷ್ಟೇ ಗಂಭೀರನಾಗಿ, ಮೃದುವಾಗಿ, ಹೃದಯಸ್ಪರ್ಶಿಯಾಗಿ ಕಥೆ ಹೇಳಿದ ರಸಿಕಕವಿ ಶೃಂಗಾರ ರಸಕ್ಕೂ ಸಾಕಷ್ಟು ಪ್ರಾಧಾನ್ಯ ಕೊಟ್ಟಿದ್ದಾನೆ. ವಾಲ್ಮೀಕಿ ರಾಮಾಯಣದ ಉತ್ತರಕಾಂಡದಿಂದಲೂ ಸಂಸ್ಕೃತದ ಪದ್ಮಪುರಾಣದೊಳಗಿನಿಂದಲೂ ಕಥೆಯನ್ನು ತೆಗೆದುಕೊಂಡು ಲಕ್ಷ್ಮೀಶನ ಜೈಮಿನಿ ಭಾರತವನ್ನು ಅನುಸರಿಸಿ ಮೂಲಕಥೆಯನ್ನು ತನ್ನದೇ ಆದ ಮಾರ್ಗದಲ್ಲಿ ತಿರುಗಿಸಿಕೊಂಡು ಮುದ್ದಣ 'ಶ್ರೀರಾಮಾಶ್ವಮೇಧಂ' ಕೃತಿ ರಚಿಸಿದ್ದಾನೆ.

'ಶ್ರೀರಾಮಾಶ್ವಮೇಧಂ'ದಲ್ಲಿ ವರ್ಣನೆಗಳ ನಡುವೆ ಎದ್ದು ಕಾಣುವ ಎರಡು-ಮೂರು ಪಾತ್ರಗಳಲ್ಲಿ ಸೀತಾಪಾತ್ರವು ಮಹತ್ವದ್ದಾಗಿದೆ. ಇದರೊಟ್ಟಿಗೆ ಲಕ್ಷ್ಮಣ, ರಾಮನ ಪಾತ್ರಗಳೂ ವೈಶಿಷ್ಟ್ಯವನ್ನು ತಂದುಕೊಂಡಿವೆ.

ರಾಮನು ಯುದ್ಧದಲ್ಲಿ ರಾವಣಕುಂಭಕರ್ಣಾದಿಗಳನ್ನು ಸಂಹರಿಸಿ, ರಾಜ್ಯವಾಳುತ್ತಿದ್ದಾಗ ಅವನಿಗೇನೋ ಒಂದು ಕೊರಗು. ರಾವಣನನ್ನು ಕೊಂದು ಬ್ರಹ್ಮದ್ರೋಹಿಯಾದೆನಲ್ಲ ಎಂಬ

ಚಂತ. ದೋಷಪರಿಹಾರಕ್ಕಾಗಿ ಅಗಸ್ತ್ಯರ ಸಲಹೆಯಂತೆ, ರಾಮ ಅಶ್ವಮೇಧಯಾಗ ಕೈಕೊಳ್ಳುತ್ತಾನೆ. ವಶಿಷ್ಠರು ರಾಮನಿಗೆ ''ಪೊನ್ನ ಸೀತೆಯೊಡನೆ ವ್ರತವನ್ನು ಕೈಕೊಳ್ಳು'' ಎಂದು ಹೇಳುತ್ತಾರೆ. ಇಲ್ಲಿಂದಲೇ ಸೀತಾಪಾತ್ರದ ಪ್ರಸ್ತಾಪ ಬರುತ್ತದೆ. ಇಲ್ಲಿ ಕಥೆ ಕೇಳುವ ಮನೋರಮೆಗೆ ಸಂದೇಹ: ''ರಮಣ ಇಂತಿದೇಂ ಪೊನ್ನ ಸೀತೆಯೆಂಬೈ? ರನ್ನ ಸೀತೆಯೆತ್ತಪೋದಳ್? ಜನಕಂ ಜನಕಂ ಕರೆದುಯ್ದಿರ್ದನೇಂ? ಅಂತಿರೆಯುಂ ಮಗುಳ್ದು ಕರೆಯಿಸಿಕೊಳ್ವುದಲ್ತೆ ನೋಂಪಿಗೆ'' ಎಂದು ಹಲವಾರು ಪ್ರಶ್ನೆಗಳನ್ನು ಮುದ್ದಣನ ಮುಂದಿಡುತ್ತಾಳೆ. ಪ್ರಕೃತ ಭಾಗದಿಂದಲೇ ಸೀತಾಪಾತ್ರ ಪ್ರಾರಂಭವಾಗಿದೆ. 'ಶ್ರೀರಾಮಾಶ್ವಮೇಧಂ'ದ ಚತುರ್ಥಾಶ್ವಾಸದಲ್ಲಿ ಮುದ್ದಣ ಸೀತೆಯ ಕಥೆ ಹೇಳಿ ಯಾಗದ ಸಮಯದಲ್ಲಿ ಸೀತ ಅಲ್ಲಿರದ ಕಾರಣವನ್ನು ಸಾದ್ಯಂತ ವಿವರಿಸುತ್ತಾನೆ. 'ಗರ್ಭಧಾರಣಂ', 'ಸೀತಾಪರಿತ್ಯಾಗಂ', 'ವಾಲ್ಮೀಕಿದರ್ಶನಂ' ಎಂಬ ನಾಲ್ಕು, ಐದು ಆರನೆಯ ಆಶ್ವಾಸಗಳಲಿ ಸೀತಾಪಾತ್ರಕ್ಕೇ ಹೆಚ್ಚು ಮಹತ್ವ ಕೊಟ್ಟಿದ್ದಾನೆ. ಇಲ್ಲಿ ಕರುಣರಸ ಉಕ್ಕಿ ಹರಿಯುತ್ತ ಕಥೆ ಹಿಂದಕ್ಕೆ ಓಡುತ್ತದೆ.

ರಾಮ ಸಾವಿರ ವರ್ಷ ರಾಜ್ಯಭಾರ ಮಾಡಿದರೂ ಅವನಿಗೆ ಮಕ್ಕಳಿಲ್ಲ. ಸ್ತ್ರೀ ಸೀತಾದೇವಿಗಂತೂ ಅದೇ ಕೊರಗು ''ಎನಿತ್ತೈಸಿರಿಯಿರ್ದೊಡಂ ಮಕ್ಕಳಿಲ್ಲದನ ಬಾಳ್ಕೆಯದೊಂದು ಬಾಳ್ಕೆಯೆ! ಎಳೆವರೆಯದೊಳ್ ನಲ್ಲೂಸಂ ಪೆತ್ತು ಬಾಲಕೇಳಿಯಂ ಕಣ್ಬಣಿಯೆ ಕಂಡು ಸಂಸಾರದ ಸಾರಮಿದೆನುತೆ ಸಂತಸಂಬಡುವ ಪೆಣ್ಗಳೆ ಧನ್ಯೆಯರಲ್ತೆ!'' ಎಂದು ಕೊರಗುತ್ತ ''ಬಂಜೆಯೆಂದು ಜರೆಯುವ ನಾಡಪೆಣ್ಗಳ ಬಿರುನುಡಿಗೆ ತಡೆದು ಬಾಳುವ ಬಂಜೆಯರೇ ಜೀವನ್ಮೃತೆಯರಲ್ಲವೇ ಸಖಿ'' ಎಂದು ನಲ್ಗೆಳತಿ ಚಂದ್ರಮತಿಯಲ್ಲಿ ತನ್ನ ಅಳಲನ್ನು ತೋಡಿಕೊಳ್ಳುತ್ತಾಳೆ. ಮಗುವಿನ ಲಲ್ಲೆನುಡಿಗಳನ್ನು ಕಲ್ಪಿಸಿಕೊಂಡು ಒಮ್ಮೆ ಹಿಗ್ಗಿದರೆ ಮರುಕ್ಷಣವೇ ಕುಗ್ಗುತ್ತಾಳೆ. 'ಮಾನವನೆನಿಸಿಯುಂ ಮಕ್ಕಳಂ ಪೆರದವಂ ಪಾಪಿಯಲ್ತೆ!' ಕೆಲ ಕಾಲ ಕಳೆದ ಮೇಲೆ ಗುರುಹಿರಿಯರ ಆಶೀರ್ವಾದ, ಕುಲದೈವದ ಹರಕೆ, ಅನುಗ್ರಹದಿಂದ ಸೀತೆ ಬಸಿರಿಯಾಗುತ್ತಾಳೆ. 'ಗರ್ಭಧಾರಣಂ' ಆಶ್ವಾಸ ಮುಕ್ತಾಯವಾಗಿ 'ಸೀತಾಪರಿತ್ಯಾಗಂ' ಆಶ್ವಾಸ ಪ್ರಾರಂಭವಾದಾಗ ಇಡೀ ಅಯೋಧ್ಯೆಯೇ ರಾಜಕುವರನ ಆಗಮನದ ಸಂಭ್ರಮದಲ್ಲಿ ಪಾಲ್ಗೊಳ್ಳುತ್ತದೆ. ''ನಾಥ ಬಲ್ಲೇಸರ್ ಕಣಾ!'' ಎಂದು ಸೀತೆ ಕೆಲ ಕಾಲ ಋಷ್ಯಾಶ್ರಮ ವಾಸದ ಬಯಕೆಯನ್ನು ರಾಮನ ಮುಂದಿಟ್ಟಾಗ ಲಕ್ಷ್ಮಣನೊಡನೆ ಆಕೆಯನ್ನು ಋಷ್ಯಾಶ್ರಮಕ್ಕೆ ಕಳುಹಿಸಿಕೊಡುವುದಾಗಿ ರಾಮ ಆಶ್ವಾಸನೆಯೀಯುತ್ತಾನೆ.

ಅದೇ ದಿನ ರಾತ್ರಿ ರಾಮ ಗುಪ್ತಚಾರರಿಂದ, ರಜಕನಾಡಿದ 'ಅಗಲ್ದಮಡದಿಯಂ ರಘುಜನಂ ತಿರೆ ಕೊಂಡಾಳೆಂ ಬಾಳೆಂ' ಎಂಬ ನಿಂದೆಯನ್ನು ಕೇಳಬೇಕಾಗುತ್ತದೆ. ರಾಕ್ಷಸನ ಬಂದಿಯಲ್ಲಿದ್ದು ಬಾಳಿದವಳನ್ನು ಮರಳಿ ನಾನು ಹೊಂದುವುದು ಸಾಧ್ಯವೇ? ಅಗಸ ನನ್ನನ್ನು ಹೀಯಾಳಿಸಿದ ಇಲ್ಲವೇ ನಿಂದಿಸಿದ ಆದರೂ ಎಚ್ಚರಿಸಿದ, ಇದು ಸಹಜ ಎಂದು ಬಿರುನುಡಿಗೆ ನೊಂದು ಲೋಕಾಪವಾದಕ್ಕಂಜಿ ಬತ್ತದ ಸಸಿಯ ನಡುವೆ ಬೆಳೆದ ಹುಲ್ಲನ್ನು ಕಿತ್ತು ಬಿಸುಡುವಂತೆ ಸೀತೆಯನ್ನು ತ್ಯಜಿಸಲು ಸಿದ್ಧನಾಗುತ್ತಾನೆ. ಲಕ್ಷ್ಮಣ, ಶತ್ರುಘ್ನ, ಭರತರು ರಾಮನಿಗೆ ''ದೇವ ಕರುಣಾಕರನೆಂಬ ಬಿರುದಿಂಗಿದು ತಗುಗುಮೆ! ಅಕ್ಕಟಾ!'' ಎಂದು ತಿಳಿಯಹೇಳುತ್ತಾರೆ. ಲೋಕಾಪವಾದಕ್ಕಂಜಿದ ರಾಮನದು ದೃಢನಿಶ್ಚಯ. ಪೊರೆ ಕಳಚಿ ನಿರ್ಮಲವಾಗುವ ಹಾವಿನಂತೆ ಸೀತೆಯನ್ನು ತ್ಯಜಿಸಲು ಸಿದ್ಧನಾಗುತ್ತಾನೆ.

ಸೀತೆಯನ್ನು ಕಾಡಿಗೆ ಬಿಟ್ಟು ಬರಲು ನೆಚ್ಚಿನ ತಮ್ಮ ಲಕ್ಷ್ಮಣನಿಗೆ (ಸೌಮಿತ್ರಿ) ಆಜ್ಞಾಪಿಸಿದಾಗ ಲಕ್ಷ್ಮಣನಿಗೆ ಉಭಯಸಂಕಟ ''ಜೀಯ! ಅಣ್ಣನಾಜ್ಞೆಯಂ ಮೀರಿ ನಡೆಯೆ ಕುಂಭೀಪಾಕಂ, ನಿರ್ದುಷ್ಟೆಯಾದೀ ಅತ್ತಿಗೆಯನರಿದುಂ ನಟ್ಟಡವಿಗುಯ್ದು ಬಿಡೆ ರೌರವಂ, ಎನ್ನೊಡೆಯ! ಅದರೊಳಂ ತುಂಬಿದ ಬಸಿರಿಯಲ್ತೆ! ಭಾಗ್ಯಲಕ್ಷ್ಮಿಯ

ನ್ನೊಯ್ದು ಕಾಡಿಗೆ ಬಿಡಲೆ'' ಎಂದು ದುಃಖಿಸುತ್ತಾನೆ. ಕೊನೆಗೆ ನಿರುಪಾಯನಾಗಿ ದುಃಖಭಾರದಿಂದ ನಿಸ್ಸಹಾಯಕನಾದ ಲಕ್ಷ್ಮಣ ರಥವನ್ನು ಸಿದ್ಧಪಡಿಸಿ ಸೀತಾಮಾತೆಯನು ಕಾಡಿಗೆ ಕರೆದೊಯ್ಯುತ್ತಾನೆ. ಸಾಧ್ವಿ ಸೀತೆ, ಋಷ್ಯಾಶ್ರಮಕ್ಕೆ ಎಷ್ಟು ಬೇಗ ಹೋದೇನೋ, ಋಷಿಪತ್ನಿಯರನ್ನು ಯಾವಾಗ ಕಾಣುವೆನೋ ಎಂಬ ಸಂಭ್ರಮದಲ್ಲಿ ಬಾಗಿನವನ್ನು ಸಿದ್ಧಪಡಿಸಿಕೊಂಡು ಕಾಡಿಗೆ ಹೊರಟ ಸೀತೆ, ದಾರಿಯಲ್ಲಿ ಗಂಗಾದೇವಿಯನ್ನು ಭಕ್ತಿಯಿಂದ ಪೂಜಿಸುತ್ತಾಳೆ. ಲಕ್ಷ್ಮಣ, ರಾಮನ ಅಣತಿಯನ್ನು ಅವಳಿಗೆ ತಿಳಿಸಿ ಈ ರೀತಿಯಾಗಿ ಸೀತಾಮಾತೆಯನ್ನು ನಟ್ಟಡವಿಗೊಯ್ದು ಭೂಮಿಜೆಯನ್ನು ಬಿಟ್ಟುಬಂದನೆಂದು ಹೇಳಿ, ಮುದ್ದಣ ಇಲ್ಲಿಗೇ ಸೀತೆಯ ಕಥೆಯನ್ನು ಮೊಟಕುಗೊಳಿಸುತ್ತಾನೆ. ಇಲ್ಲಿಗೆ 'ಸೀತಾಪರಿತ್ಯಾಗಂ' ಎಂಬ ಪಂಚಮಾಶ್ವಾಸ ಮುಕ್ತಾಯಗೊಂಡಿದೆ.

ಆದರೆ ಮನೋರಮೆ ಕೇಳಿಯಾಳೆ? ''ಅಕ್ಕಟಾ! ಪೆಣ್ಗಳೊಂದು ಬಾಳ್ತೆ ಬಾಳ್ತೆಯೇ!'' ಎಂದು ಕಂಬನಿ ಮಿಡಿದು ಸೀತೆಯ ಮುಂದಿನ ಕಥೆಯನ್ನು ವಿವರಿಸಲು ಕೇಳಿಕೊಳ್ಳುತ್ತಾಳೆ. ಸೀತೆ ಏನೆಂದು ಮರುಗಿದಳೋ, ಏನಾದಳೋ ತಿಳಿಯುವ ತವಕ ಅವಳಿಗೆ. ಮುದ್ದಣ ಕಥೆಯನ್ನು ಮುಂದುವರೆಸುತ್ತಾನೆ.

ಸೀತೆ ಋಷಿಪತ್ನಿಯರನ್ನು ಕಾಣುವ ಆತುರದಲ್ಲಿ ಮುಂದೆ ಮುಂದೆ ಹೋಗುತ್ತಾಳೆ. ಲಕ್ಷ್ಮಣನಿಗೆ ''ಅಣ್ಣನಾಣತಿಯನ್ನು ಅತ್ತಿಗೆಗೆ ಎಂತೊರೆವೆನೋ, ಮೇಣೆಂತು ದೇವಿಯರಂ ತೊರೆವೆನೋ'' ಎಂಬ ದುಗುಡ. ಆದ್ದರಿಂದ ಅವನ ನಡೆ ಹಿಂದಾಗುತ್ತದೆ. ದುರ್ಮಾರ್ಗದಲ್ಲಿ ಬಸಿರಿ ಸೀತೆ ಆಯಾಸಗೊಳ್ಳದೇ ಮುಂದುವರೆಯುತ್ತ ಹಿಂದುಳಿದ ಮೈದುನನಿಗೆ ''ಏಂ ಕಂದ! ನಡೆಯೊಳ್ ಪಿಂದಾದಯ್? ಪಥದೊಳ್ ಕಲ್‌ಮುಳ್ಗಳಣಮಿಲ್ಲಂ, ಇಂತಿರೆ ಪೆಣ್ಣಾಂ ಸಾಗಿವರೆ ನೀಂ ಗಂಡುಗಲಿ ನಡೆಯಲಾರೆಯೆನೆ, ನಾಣಲೇ! ಪಿಂಚದಿರ್ ಬಾರೆನುತೆ'' ಮುನ್ನಡೆಯುತ್ತಾಳೆ. ಈ ಅರಣ್ಯವನ್ನು ದಂಡಕಾರಣ್ಯಕ್ಕೆ ಹೋಲಿಸಿ ಬಣ್ಣಿಸುತ್ತ ಮುಂದೆ ಮುಂದೆ ಸಾಗುತ್ತಾಳೆ. ಅಷ್ಟು ಸಂಭ್ರಮ ಅವಳದು. ಲಕ್ಷ್ಮಣ ಮನವಿಲ್ಲದೇ ಹೂಂಗುಟ್ಟುತ್ತ ಹಿನ್ನಡೆಯವನಾಗುತ್ತಾನೆ. ಕಾಡುದಾರಿಯಲ್ಲಿ ಬಹುದೂರ ನಡೆದು ಆಯಾಸವಾದಾಗ ಸೀತೆ ಕೊನೆಗೆ ದೆಸೆಗೆಟ್ಟು, ಕಲ್ಲನೆಡವಿ ಮೂರ್ಛೆ ಹೋಗುತ್ತಾಳೆ. ಲಕ್ಷ್ಮಣನ ಉಪಚಾರದಿಂದ ಎಚ್ಚೆತ್ತು ದುಃಖಾರ್ತಳಾಗಿ ಮೈದುನನಿಗೆ ''ಈ ದುರ್ಗಮವಾದ ಕಾಂತಾರದಡವಿಯಲ್ಲಿ ಋಷಿಗಳ ಪುಣ್ಯಾಶ್ರಮವುಂಟೆ? ನಿಶ್ಚಯವಾಗಿಯೂ ನೀನು ಬಟ್ಟೆದಪ್ಪಿರುವೆ'' ಎಂದು ಸಂದೇಹಿಸಿ, ರಾಮನನ್ನು ನೆನೆಯುತ್ತಾಳೆ - ''ನಿನ್ನಡಿದಾವರೆಯನುಳಿದು ಬಂದೊಡಿಂತೆನಗೇವಿಧಿಯಾಯ್ತೇ! ಹಾ! ಶ್ರೀರಾಮಚಂದ್ರಮಾ'' ಎಂದು ದುಃಖಿಸುವಾಗ ಲಕ್ಷ್ಮಣನ ಮನ ಇಬ್ಬಂದಿಯಲ್ಲಿ ತುಯ್ದಾಡುತ್ತದೆ. ಒಂದೆಡೆ ಅಣ್ಣನ ಕಟ್ಟಾಣತಿ; ಇನ್ನೊಂದೆಡೆ ಅತ್ತಿಗೆಯತ್ತ ಮರುಕ. ಅವನಾದರೂ ಏನೆಂದು ಸಮಾಧಾನಿಸಬೇಕು? ನೀನಂಜದಿರೆಂದು ಹೇಳಬೇಕೆ? ಪುರಕೆ ಮರಳಿಸುವೆನೆಂದೆನ್ನಬೇಕೆ? ಮುಂಗಾಣದೇ ಕಂಪಿಸುತ್ತ ರಘುವರನ ಆಜ್ಞೆಯನ್ನು ಅತ್ತಿಗೆಗೆ ಅರುಹುತ್ತಾನೆ - ''ದೇವಿಯರೆನ್ನಂ ಕಂದನೆಂದು ಸಂಬೋಧಿಸದಿರಿಂ, ಪಗೆವನೆಂದೇ ಬಗೆಯಂ'' ಎಂದು ಜರೆದುಕೊಂಡು ಅಪರಾಧೀಭಾವನೆಯಿಂದ ಕುಗ್ಗುತ್ತಾನೆ. ಆಗ ಸೀತೆಗುಂಟಾದ ಸ್ಥಿತಿ ಶೋಚನೀಯ. 'ಮುಂಗಾರಸಿಡಿಲ ಮೊಳಗಂ ಕೇಳ್ದು ಸುರುಂಟುವಣಂಬೆಯ ತಿಟ್ಟದಂತೆ, ನೆಟ್ಟನೆ ಬೀಸುವ ಬಿರುಗಾಳಿಯ ಪೊಯ್ಲಿಗರೆ ಮುರಿದು ಬಾಡುವ ಕಪ್ಪುರವಾಳೆಯುಂತೆ ಹಮ್ಮೈಸಿ ಬಿದ್ದಳಂಗನೆ ಧರೆಗೆ ನಡುನಡುಗುತೆ' ಸೀತೆ ಧರೆಗೆ ಕುಸಿದುಬೀಳುವ ಪರಿಯನ್ನು ಕವಿ ಇಲ್ಲಿ ಶೃಂಗಾರರಸದ ವರ್ಣನೆಯಲ್ಲಿ ಮನೋಹರವಾಗಿ ವರ್ಣಿಸಿದ್ದಾನೆ. ಮೂರ್ಛೆ ಹೋದ ಸೀತೆ ಲಕ್ಷ್ಮಣನ ಶೈತ್ಯೋಪಚಾರದಿಂದ ಚೇತರಿಸಿಕೊಂಡು ''ಹಾ! ನನ್ನ ಜೀವಿತೇಶನೇ ನನ್ನನ್ನು ಕಾಡಿಗಟ್ಟಿಬಾರೆಂದನೇ! ಕೂಳನೊಂದು ಪಿಸುಣ್ಣೆ ನಿರಪರಾಧಿಯನೆನ್ನಂ ಬಲಿದೆತ್ತನೇ! ಅಕ್ಕಟಾ ಬಾಳ್ಗೊಲೆಯಾದನವಾ, ಊರೋಳ್

ಮಾರಿಯೆಂದು ಮನೆವೋರಿಯಂ ಮಾರುಗುಡು ವರೇ? ಪಾಲ್ಪುಳಿತುದೆಂದಾವಂ ಪೊಯ್ವರೇ?'' ಎಂದು ತನ್ನ ನಿರಪರಾಧಿತ್ವವನ್ನು ಪ್ರಕಟಗೊಳಿಸುತ್ತಾಳೆ. ಒಂದು ವೇಳೆ ತನ್ನಲ್ಲಿ ಕೊರತೆ ಇದ್ದರೂ ಮನ್ನಿಸಿ ಕಾವುದೆಂದು ಕೈಮುಗಿದು 'ಮರಳಿ ನಿನ್ನನೆಂದು ಕಾಣ್ಬೆನೋ, ನಿನ್ನನೆಂದು ಕೂಡುವೆನೋ ರಘುವರ' ಎಂದು ಪತಿಭಕ್ತೆ ಸೀತೆ ಬೇಡಿಕೊಂಡು ಆಯಾಸದಿಂದ 'ಪೆಣ್ಣಿನ್ನೊಂದು ಬಾಳ್ಕೆ ಬಾಳ್ಕೆಯೇ' ಎಂದು ತನ್ನ ಹೆಣ್ಣು ಜನ್ಮದ ಹಣೆಯ ಬರಹಕ್ಕೆ ಹಳಿದುಕೊಳ್ಳುತ್ತಾಳೆ. ಮರುಕ್ಷಣ 'ಇದು ಅರಣ್ಯರೋದನಮಾಗದೇ' ಎಂದು ಕಂಬನಿತೊಡೆದು 'ರಾಘವನು ನನ್ನನ್ನು ಕೈಬಿಟ್ಟರೂ ನಾನು ಆತನ ಅಡಿಯನ್ನು ಬಿಡಲಾರೆ, ಆತನೇ ಗುರು, ಆತನೇ ಜೀವ, ಆತನ ಶಾಸನವು ಇಡೀ ನಾಡನ್ನು ಆಳುವಾಗ ನಾನೊಬ್ಬಳು ಹೊರತೆ? ಆತ ಕರುಣಾಸಾಗರನಲ್ಲವೆ!' ಎಂದು ನಲ್ಲನ ನೆನಪಿನಲ್ಲಿ ಸಮಾಧಾನಪಟ್ಟುಕೊಳ್ಳುತ್ತಾಳೆ. ನೋಡಿ, ರಾಮ ಅವಳನ್ನು ಸಂದೇಹಿಸಿ ತ್ಯಜಿಸಿದರೂ ಅವನನ್ನು ಬಿಡಲಾರದ ಪತಿಭಕ್ತೆ ಈಕೆ. ಅಷ್ಟೇ ಅಲ್ಲ ರಾಮನನ್ನು ನಿರ್ದೋಷಿಯನ್ನಾಗಿ ಮಾಡಿ ತನ್ನ ಔದಾರ್ಯವನ್ನು ಮೆರೆದಿದ್ದಾಳೆ ಇಲ್ಲಿ.

ದುಃಖಿಸುತ್ತ ಕಿಳ್ಳೊಗನಾಗಿ ನಿಂತ ಲಕ್ಷ್ಮಣನಿಗೆ ''ಕಂದಾ, ಏತರ್ಕೆ ನಿಂದೈ! ತಳ್ವಿದನೆಂದು ನಿನ್ನೊಳಗಗ್ರಜಂ ಕೋಪಿಸನೆ? ಅಣ್ಣನಾಜ್ಞೆ ಸಂದುದಲಾ! ಪೋಗು ಪೋಗೈ'' ಎಂದು ಕರ್ತವ್ಯವನ್ನು ನೆನಪಿಸುತ್ತಾಳೆ. ಲಕ್ಷ್ಮಣ ''ಮಾತೆ! ಇಂತಿರ್ಪಿನಂ ನಿರ್ಘೃಣನಂ ಕುಲಘಾತುಕನಂ ದುಷ್ಟನ ನುದ್ಧರಿಸೌ'' ಎಂದು ಅವಳ ಕಾಲ್ಗೆರಗಿದಾಗ ಮೈದುನನ್ನು ಸಂತೈಸಿ ''ಏಳೇಳ್ ಕಂದ, ಕೈವಿಡಿದ ನಲ್ಲನೇ ಮುನಿವೆಡೆಯೊಳಾರೇನೆಂಗುಂ ನಿನ್ನೊಳೇನಪರಾಧಂ? ಪೆಣ್ಣೆನಿಸಿ ಪುಟ್ಟಿದೆನ್ನಯ ದೋಷಂ'' ಎಂದು ಯಾರ ಮೇಲೂ ಅಪರಾಧ ಹೊರಿಸಲಿಚ್ಛಿಸದೇ ಸ್ವತಃ ತನ್ನನ್ನೇ ಅಪರಾಧಿನಿಯನ್ನಾಗಿ ಮಾಡಿಕೊಳ್ಳುತ್ತಾಳೆ. ''ನಿನ್ನಣ್ಣಂ ಕೇಳ್ದೊಡೆ ನಿನ್ನಾಣತಿಗಬಲೆ ಮರುಗಿದಳಿಲ್ಲ, ಮುನಿಸಾಂತಳಿಲ್ಲ, ಮಾರ್ನುಡಿದಳಿಲ್ಲ, ಬೆರ್ಚಿದಳಿಲ್ಲ, ದೂರಿದಳಿಲ್ಲ, ನೀನೆ ಗತಿಯೆಂದು ನಿನ್ನಡಿಯಂ ನೆನೆಯುತ್ತಿದ್ದಳೆಂದು ಬಿನ್ನಯಿಸಯ್'' ಎಂದು ದುಃಖಿತ ಲಕ್ಷ್ಮಣನನ್ನು ಸಂತೈಸಿ ಕಳುಹಿಸಿಕೊಡುತ್ತಾಳೆ. ''ಶ್ರೀರಾಮನೊಲ್ಮೆಯೊಂದೇ ಶಾಶ್ವತಂ'' ಎಂದು ನಂಬಿದ ಸೀತೆ ನಿಜಕ್ಕೂ ಪತಿಭಕ್ತಿಪರಾಯಣೆ. ಸ್ವತಃ ಸಂಕಟಪಡುತ್ತಿದ್ದರೂ ಸಹಿಸಿಕೊಂಡು ದುಃಖಿತ ಮೈದುನನ್ನು ಸಂತೈಸುವ ಅವಳ ಮನೋಧೈರ್ಯ ಮೆಚ್ಚಲೇಬೇಕು. ಸೀತೆ ತನ್ನ ಘನತೆಯನ್ನು ಮೆರೆದಿದ್ದಾಳೆ ಇಲ್ಲಿ.

ಜನಕರಾಯನ ಅಣಗುಗುವರಿಯಾಗಿ ಹುಟ್ಟಿ, ಸಾರ್ವಭೌಮರಾಘವ ಶ್ರೀರಾಮಚಂದ್ರನ ಪಟ್ಟವರಸಿಯಾಗಿಯೂ ಬಾಳಿದ ದೇವತಾಸ್ತ್ರೀ ಸೀತಾದೇವಿಗೆ; ಗರ್ಭಿಣಿಗೆ ಇಂಥ ಸ್ಥಿತಿ ಬಂತೆ! ಎಂದು ಓದುಗರು ಮರುಕಪಡುವಂತೆ ಮುದ್ದಣ ಸೀತೆಯ ಮನದ ಅಳಲನ್ನು ಇಲ್ಲಿ ಪ್ರಭಾವಪೂರ್ಣವಾಗಿ ಚಿತ್ರಿಸಿದ್ದಾನೆ.

ಸೀತೆ ದುಃಖಾರ್ತೆಯಾಗಿ ಒಬ್ಬಳೇ ಉಳಿದಾಗ ವಾಲ್ಮೀಕಿ ಮಹರ್ಷಿ ಆ ಮಾರ್ಗವಾಗಿ ಅಲ್ಲಿಗೆ ಬರುತ್ತಾನೆ. ಕಪಟತಪಸ್ವಿಯೆಂದು ಅಂಜಿದ ಅವಳಿಗೆ ನಿಜರೂಪ ತಿಳಿಸಿ ಧೈರ್ಯ ಹೇಳುತ್ತಾನೆ. ''ಆತ್ಮಹತ್ಯೆ ಭ್ರೂಣಹತ್ಯೆ ದೋಷಂಗಳೊರ್ಮೊದಲೊಳ್ ಬಂದೊದಗುವುಮೆದೆ ಮಾಣ್ಪೆಂ'' ಎಂಬ ಸೀತೆಯ ನುಡಿಗೆ ''ಅಂತಾಗದೌ! ನಿಕ್ಕುವಂ ನೀಂ ಮಕ್ಕಳಂ ಪಡೆವುದುಂಟು, ಮರುಗದಿರು ಮಗಳೆಂದೇ ನಿನ್ನಂ ಸಲಹುವೆಂ'' ಎಂದು ನುಡಿದು ಅವಳನ್ನು ತನ್ನ ಆಶ್ರಮಕ್ಕೆ ಕರೆದೊಯ್ಯುತ್ತಾನೆ. ಕವಿ ಈ ಆಶ್ವಾಸದಲ್ಲಿ ಮುಂದೆ ವಾಲ್ಮೀಕಿ ಋಷ್ಯಾಶ್ರಮವನ್ನು ವರ್ಣಿಸಿದ್ದಾನೆ. ಯೋಗಾಭ್ಯಾಸದ, ಪುರಾಣ ಶ್ರವಣದ ಋಷಿವರ್ಗದಿಂ ಕೂಡಿದ ಆ ಆಶ್ರಮಕ್ಕೆ ಸಂತಸದಿಂದ ವಾಲ್ಮೀಕಿಯೊಂದಿಗೆ ಸೀತೆ 'ಸಂಜೆಯೊಳ್ ಸಂಧ್ಯಾದೇವಿಯಂತಿರೆ' ಪ್ರವೇಶಿಸುತ್ತಾಳೆ. ಸೀತೆಯ ಪಾತ್ರ ಇಲ್ಲಿಗೇ ಮುಕ್ತಾಯವಾಗಿದೆ.

ಕರುಣರಸದೊಂದಿಗೆ ಸೀತಾಪಾತ್ರ ಚಿತ್ರಣಗೊಂಡು ಮನೋರಮೆಯೊಡನೆ ನಾವೂ.

''ಸೀತೆಯನಂತುಳಿದುಮೇತರ ಸೀತಾರಾಮಂ, ಅವನೇನು ಕಲ್ಲೆರ್ದೆಯ ರಾಮನೋ ಭೀಮನೋ'' ಎಂದು ಸೈಗುಟ್ಟವಂತಾಗುತ್ತದೆ. ರಾಮ ಲೋಕಾಪವಾದಕ್ಕಂಜಿ ಸೀತೆಯನ್ನು ಕಾಡಿಗಟ್ಟಿದ್ದಾನೆಯೇ ಹೊರತು ಸೀತೆಯಲ್ಲೇನೂ ಅವನಿಗೆ ಹಗೆಯಿಲ್ಲ. ಇದು ಸಹಜ ಉತ್ತರ. ಏನೇ ಇರಲಿ ಹಗೆಯೋ ನಗೆಯೋ ಬಡವೆಯೊಬ್ಬಳು ಕಾಡಿಗೆ ಹೋದಳಲ್ಲ ಎನ್ನುವ ಮನೋರಮೆಯ ನುಡಿಯಂತೂ ಸತ್ಯ. ಆದರೆ ಶ್ರೀರಾಮ ಕಲ್ಲೆರ್ದೆಯವನೆ!

ಏಳನೆಯ ಆಶ್ವಾಸ 'ವಿಜಯ ಪ್ರಯಾಣಂ' ದಲ್ಲಿ ರಾಮನ ಶೋಕ ಪಶ್ಚಾತ್ತಾಪದಿಂದ ಇಮ್ಮಡಿಯಾಗಿದೆ. ಜನಾಪವಾದಕ್ಕಂಜಿ ಸೀತೆಯನ್ನು ಕಾಡಿಗಟ್ಟಿದ ರಾಮ ನಿಜವಾಗಿಯೂ ಸುಖಿಯೇ? ಆತನ ವಿರಹವ್ಯಥೆ ಸೀತೆಗಿಂತ ಹೆಚ್ಚೇಯೆಂದು ಹೇಳಬಹುದು. ಆದರ್ಶ, ಸಾಧ್ವಿ ಸತಿಯನ್ನು ತೊರೆದು ಜನರ ಕಣ್ಣಿಗೆ ನಿರ್ದಯಿಯಾಗಿ ಕಂಡರೂ ಇಲ್ಲಿ ರಾಮನ ದುಃಖ ಕಂಡಾಗ ಪರಿಸ್ಥಿತಿಯ ಅರಿವಾಗದಿರದು. ಸೀತೆಯ ಅಗಲಿಕೆಯಿಂದ ಶೋಕಾಕುಲನಾಗಿ ದುಗುಡದಿಂದ ತನ್ನೊಳೆತಾಂ ''ಆಃ ಬಿದಿಯೇ ಎನ್ನೊಳಮಿಂತು ಮಾಡುವರೇ? ಎನ್ನಬಾಳ್ಕೆಯಿಂತು ನಂದಿದುದಲೇ! ನೀಂ ಎಂತಪ್ಪರುಮಂ ಬಿಟ್ಟಿರಯೆ! ನಿನ್ನೀದೂಸರಿಂ ಮದುವೆ ನಿಂದ ಮಡದಿಯಂ ಬಿಟ್ಟಿ ಪುದಾಯ್ತು'' ಎಂದು ನಿಡುಸುಯ್ದು ''ನನ್ನ ಕೈ ಹಿಡಿದಂದಿನಿಂದ ನಿನಗೆ ಒರಿದು ದಿನವಾದರೂ ಸೊಗಸುಂಟೆ? ಎಳವೆ ವನಸಂಚಾರದೊಳಾಯ್ತು; ಬಳವಿ ರಕ್ಕಸರ ಬಂದಿಯೊಳಾಯ್ತು; ಕೆಳವೆ ಪುಲಿಕರಡಿಗಳಿನುಗುರ್ವಿಸಿದ ಕಾರಡವಿಯೊಳಾಯ್ತುಲೇ! ಅಬ್ಬೆಯಿಲ್ಲದ ಹೆಣ್ಣೊಬ್ಬಳನ್ನು ಕಾಡಿಗೊತ್ತೆಯಿಡುವುದಕ್ಕಾಗಿಯೇ ಮದುವೆಯಾದೆನೆ?'' ಎಂದು ತನ್ನನ್ನೇ ಹಳಿದುಕೊಳ್ಳುತ್ತಾನೆ. ''ನಿಷ್ಕಳಂಕೆಯೆಂದರಿಯೆನೆ? ಪಾವನೆಯೆಂದರಿಯೆನೆ? ಎನ್ನಂ ಕೈವಿಡಿದ ನಿನ್ನ ಭಾಗ್ಯಮೇ!'' ಎಂದು ವ್ಯಥೆಗೊಂಡು ಕಾಡಿನಲ್ಲಿ ವಿರಹದಿಂದ ತೊಳಲಾಡುವ ಗರ್ಭಿಣಿ ಸೀತೆಯ ಚಿತ್ರ ಕಣ್ಣಿಗೆ ಕಟ್ಟಿದಾಗ ''ಇನಿಯಂ ಕೈವಿಟ್ಟನೆಂಬೊಂದು ದುಗುಡಮೊಂದು; ವನವಾಸದ ಬವಣೆ ಎರಡು; ಕಾಳ್ಮಿಗಂಗಳತ್ತಣಿಂ ಭಯಂ ಮೂರು ಬರುವೆಯೆಂಬೊಂದು ಬೇವಸಂ ನಾಲ್ಕು; ಬಸಿರಿ ಬೇನೆಯೈದು ಅಯ್ಯೋ ಅದು ಹೇಗೆ ಅಸುವಿಡಿದಿರ್ಪಳೋ'' ಎಂದು ಅಸಹಾಯಕನಾಗಿ ದುಃಖಿಸುತ್ತಾನೆ. ಕೊನೆಗೆ 'ಸುದುಸೀತೆಯಲ್ಲದೀ ನಾಡಂ!' ಎಂದು ಶಪಿಸಿ 'ಆಮಿರ್ವರುಂ ಕಾಡೊಳಾದೆವಲ್ತೆ!' ಎಂದು ಹತ್ತು ಹಲವು ಬಗೆಯಲ್ಲಿ ಬಣ್ಣಿಸಿ ಮರುಗುತ್ತಾನೆ. ಇದು ಸೋದರರನ್ನು ಹಾಗೂ ಅಗಸ್ತ್ಯರನ್ನು ದಿಕ್ಕುತಪ್ಪಿಸುತ್ತದೆ. ಪತಿಪತ್ನಿಯರಲ್ಲಿ ವಿರಹವುಂಟಾದರೆ ಇದು ಸಹಜವಲ್ಲವೇ. ''ಮನೋರಮೆ ಆನೊರ್ಮೆಯುಂ ನಿನ್ನನುಳಿದು ಬಾಳೆಂ'' ಎಂದ ಮುದ್ದಣನ ನುಡಿಯೂ ಇಲ್ಲಿ ಸಹಜವೇ ಆಗಿದೆ.

ಅಶ್ವಮೇಧ ಯಜ್ಞವನ್ನು ಕೈಕೊಂಡ ರಾಘವ ಸ್ವರ್ಣ ಸೀತಾ ಸಮೇತನಾಗಿ ದೀಕ್ಷೆ ತೊಡುತ್ತಾನೆ. ಅಗಸ್ತ್ಯ ಬ್ರಹ್ಮನಾಗಿ, ವಶಿಷ್ಠರು ಆಚಾರ್ಯರಾಗುತ್ತಾರೆ.

ವನವಾಸದ ಕಷ್ಟ ಕೋಟಲೆಗಳನ್ನು ಅನುಭವಿಸಿ ಆದರ್ಶಸತಿ, ಆದರ್ಶಮಹಿಳೆಯಾದ ಸೀತೆಯಂತೆ, ಲೋಕಾಪವಾದಕ್ಕಂಜಿ ಸ್ವಹಿತವನ್ನೂ ಕಡೆಗಣಿಸಿದ ರಾಮ ನಿಜವಾಗಿಯೂ ಇಲ್ಲಿ ಆದರ್ಶರಾಜನಾಗಿದ್ದಾನೆಂದೇ ಹೇಳಬಹುದು. ಇಲ್ಲಿ ಕವಿ ರಾಮನ ಪಾತ್ರವನ್ನೂ ಘನತೆವೆತ್ತ ಸೀತಾಪಾತ್ರದ ಮಟ್ಟಕ್ಕೆ ತರುವ ಪ್ರಯತ್ನ ಮಾಡಿದ್ದಾನೆ.

ನಂತರ ಷೋಡಶಾಶ್ವಾಸದಲ್ಲಿ 'ಕಥೋಪಸಂಹಾರ'ದಲ್ಲಿ ಸೀತೆ ಒಮ್ಮೆಲೇ ಮತ್ತೆ ಮಿಂಚುತ್ತಾಳೆ. ಅಲ್ಲಿಯವರೆಗೆ ಹದಿನೈದನೆಯ ಆಶ್ವಾಸದವರೆಗೆ ಅಶ್ವಮೇಧಯಾಗದ ಯುದ್ಧದ ವರ್ಣನೆಯಿದೆ. ಮುದ್ದಣ ಇಲ್ಲಿ ವೀರರಸಕ್ಕೆ ಸಾಕಷ್ಟು ಮಹತ್ವ ಕೊಟ್ಟು ಕೃತಿಗೆ ಚ್ಯುತಿ ಬರದಂತೆ ನೋಡಿಕೊಂಡಿದ್ದಾನೆ. ಯಜ್ಞಾಶ್ವ ಸಂಚರಿಸುತ್ತ ವಾಲ್ಮೀಕಿ ಆಶ್ರಮದ ಹತ್ತಿರ ಬರುತ್ತದೆ. ಎಳೆವರೆಯದ ಕುವರರಿಬ್ಬರು ಅಶ್ವವನ್ನು ಧೈರ್ಯದಿಂದ

ಹು[illegible]ಸಟದಿಂದ ಕಟ್ಟಿ ಹಾಕುತ್ತಾರೆ ಎಂದು [illegible] ಕಥೆ ಮುಂದುವರೆಸಿ ಮತ್ತೆ ನಿಲ್ಲಿಸಿ ''ಆ ಕಥೆ [illegible]ಮುಂತಿರಲಿ. ಮುಸಿಯೊಡನೆ ಹೋದ ಸೀತೆಯ [illegible]ಇರವನ್ನು ತಿಳಿದಿರುವೆಯಾ?'' ಎಂದು [illegible] ಕೇಳುತ್ತಾನೆ. ಅವಳು ''ಹೌದ್ಹೌದು [illegible] ಮರೆವು, ಅಂದ ಹಾಗೆ [illegible]ತೆ ಮುನಿಗಳಾಶ್ರ [illegible] ಹೇಗೆ ಇದ್ದಳು? ತವರವರು ಕರೆದೊ[illegible] ಅದನ್ನು ಮೊದಲು ಹೇಳು'' ಎಂದು [illegible] ಬಗೆಗೆ ಮತ್ತ ಕುತೂಹಲ, ಆತುರ ವ್ಯಕ್ತ ಪಡಿ[illegible]ತ್ತಾಳೆ. ಮತ್ತೆ ಸೀತೆಯ ಕಥೆ ಹೇಳಿ ಮು[illegible]ಯು ಹಾಡಿದ್ದಾನೆ ಕವಿ.

[illegible] ಮುನಿಗಳಾಶ್ರಮದಲ್ಲಿ ದಿನಗಳೆಯುತ್ತ, ಮು[illegible]ಳೋದುವ ರಾಮಚಾರಿತ್ರ್ಯವನ್ನು ಕೇ[illegible] ಮುನಿಪತ್ನಿಯರ ಸ್ನೇಹದಲ್ಲಿ, ಅವರ ಸೇ[illegible]ಲ್ಲಿ ವಿರಹವ್ಯಥೆಯನ್ನು ಸ್ವಲ್ಪವಾದರೂ ಮರೆ[illegible]ತ್ತಾಳೆ. ತನ್ನ ಕಿರುವೆರಳ ಮುದ್ರೆಯುಂ ಗು[illegible] ಶ್ರೀರಾಮಮೂರ್ತಿಗೆ ನಿತ್ಯವೂ ನಮಿಸಿ ಅಡಿ ಗ[illegible] ಅವನನ್ನೇ ನೆನೆಯುತ್ತಾಳೆ. ಈ ರೀತಿ ದಿನ ಕಳೆಯುತ್ತಿರುವ ಸೀತಾದೇವಿಗೆ ದಿನದುಂಬಿದಾಗ ವಾಲ್ಮೀಕಿ ಮಹರ್ಷಿ 'ಸೀಮಂತ ಕರ್ಮ'ವನ್ನು ಯಥಾವತ್ತಾಗಿ ಮಾಡಿಸುತ್ತಾನೆ. ಸೀತಾದೇವಿ ಕಾಡುಹೂಗಳಿಂದ ಶೃಂಗಾರಗೊಂಡು ವನದೇವಿ ಯಂತೆ ಮನೋಹರವಾಗಿ ಕಾಣುತ್ತಾಳೆ. ಆಕೆಯ ಗೆಳತಿಯರಿಗೆ ಆಕೆಯನ್ನು ಶೃಂಗರಿಸಿದಷ್ಟೂ ಸಾಲದು. ಅಲ್ಲಿಯೇ ಕೆಲ ದಿನಗಳಲ್ಲಿ ಸೀತಾಮಾತೆಗೆ ಸೋಮಕಾಮರಂತೆ ಲವಕುಶರು ಜನಿಸುತ್ತಾರೆ. ಈಗ ಸೀತಾಮಾತೆ ಸುತರ ಬಾಲಕೇಳಿಯನ್ನು ಅನುಭವಿಸಿ ಆನಂದಿಸುತ್ತಾಳೆ. 'ದಪ್ಪಡಿ, ಬಟ್ಟಮೊಗಂ, ಪುಟ್ಟಗೈ, ನಿಟ್ಟಾಲಿ, ಮೊಳೆವಲ್ಲು, ಕಿರುನಗೆ, ತೊದಲ್ನುಡಿಯ ಸೊಗಸು' ಎಲ್ಲ ಸೇರಿ ಚಿಣ್ಣರಾಟಕ್ಕೆ ಅವಳ ಸಂತಸ ಗಡಲು ತುಂಬಿತುಳುಕುತ್ತದೆ. ಆದರೇನು! ಬಳಿಯಲ್ಲಿ ನಲ್ಲನಿಲ್ಲ; ಎಂಥ ವಿಪರ್ಯಾಸ! ಸುತರಿಂದಲೇ ಆ ವ್ಯಥೆ ಮರೆಯುತ್ತಾಳೆ. ಚೌಲೋಪನಯನ ಸಂಸ್ಕೃತರಾದ ಬಾಲಕರಿಗೆ ವಾಲ್ಮೀಕಿ ಮುನಿಗಳು ಮಾರ್ಗದರ್ಶಕರಾಗಿ ಬಿಲ್ಲುವಿದ್ಯೆ, ಪುರಾಣ ಶಾಸ್ತ್ರ, ವೇದಶಾಸ್ತ್ರಗಳನ್ನೋದಿಸಿ ಪರಿಣತರನ್ನಾಗಿಸುತ್ತಾರೆ. ಗುರುಭಕ್ತಿ, ಮಾತೃಭಕ್ತಿ, ದೈವಭಕ್ತಿಗಳಿಂದ ವಟು ಸ್ನೇಹದಲ್ಲಿ ಲವಕುಶರು ಬಾಲ್ಯವನ್ನು ಕಳೆಯುತ್ತಾರೆ. ಸೀತಾಮಾತೆ ದಿನದಿನಕ್ಕೆ ಏಳ್ಗೆ ಹೊಂದುವ ಮಕ್ಕಳನ್ನು ಕಂಡು ತನ್ನ ಮೊದಲಿನ ಕಷ್ಟವನ್ನು ಮರೆತುದುದನ್ನು ಕಂಡು ವಾಲ್ಮೀಕಿ ಕೃತಕೃತ್ಯತೆಯನ್ನು ಹೊಂದುತ್ತಾನೆ. ಅವಸರದ ಒಂದು ಕಾರ್ಯಕ್ಕೆ ಮಹರ್ಷಿ ವರುಣ ಲೋಕಕ್ಕೆ ಹೋಗುತ್ತಾನೆ.

ಕಿರಿಯನಾದ ಲವ ಮುತ್ತಯ್ಯನಿಲ್ಲದ ವೇಳೆಯಲ್ಲಿ ಜನ್ನಗುದುರೆಯೊಂದು ಬಂದು ವಾಳೆಗಡಿದ ತೋಟವನ್ನು ಕಂಡು ಅದನ್ನು ಅಲ್ಲಿಯೇ ಕಟ್ಟಿ ಹಾಕುತ್ತಾನೆ. ಶತ್ರುಗಳೊಡನೆ ಧೈರ್ಯದಿಂದ ಹೋರಾಡಿ ಮೂರ್ಛೆಹೋದ ಲವನ ಸುದ್ದಿ ಆಶ್ರಮದ ಮಕ್ಕಳಿಂದ ತಿಳಿದ ಸೀತಾದೇವಿ ಮುದ್ದುಗುವರನಿಗಾಗಿ ಪ್ರಲಪಿಸುತ್ತಾಳೆ. ''ಹಾ! ಎನ್ನ ಕಣ್ಮಣಿಯನಾರುಯ್ದರ್, ಚಿಂತಾಮಣಿಯನಾರುಯ್ದರ್, ಅರಿಗಳ್ ಬಾಯ್ಗಿಂದೇ ಪೆತ್ತೆನೆ ಮಗನೆ?'' ಎಂದು ದುಃಖಿಸುವ ತಾಯಿಯನ್ನು ಕುಶ ಸಂತೈಸಿ ಲಗುಬಗೆಯಿಂದ ರಣರಂಗಕ್ಕೆ ಬಂದು ಶತ್ರುಗಳೊಡನೆ ಶೌರ್ಯದಿಂದ ಕಾದಿದಾಗ ಶತ್ರುಘ್ನ 'ಬೆಟ್ಟಿನ ನಡುಮರಂ ಬಿರುಗಾಳಿಯ ಪೊಯ್ಲಿಂಗೆ ಬೇರುಡಿದು ಬೀಳ್ವಂತೆ ದಿಮ್ಮನೆ ತಿರೆಗೆ ಕೆಡೆದಂ'. ಮಹಾರಥರೆಲ್ಲ ಗಜಬಜಿಸಿ ಗಾಬರಿಗೊಂಡರು. ಮೂರ್ಛೆ ತಿಳಿದೆದ್ದು ಲವ ಅಣ್ಣನೊಡನೆ ಜೊತೆಗೂಡಿ ಕಾದುತ್ತಾನೆ.

ಈ ಸುದ್ದಿ ತಿಳಿದು ದೀಕ್ಷೆಯಲ್ಲಿದ್ದ ರಾಘವ ತಾನೇ ಲಕ್ಷ್ಮಣನೊಡನೆ ಯುದ್ಧಭೂಮಿಗೆ ಬರುತ್ತಾನೆ. ''ಆ ಪೊಡ್ಡು ಗಾಳಿಯೊಡ್ಡಿನ ಮುಗಿಲೊಡ್ಡಾಯ್ತು ಬಾಲಕರಿದಿರೊಳ್'' ರಾಮನ ಸೈನ್ಯ ಚದುರಿಹೋದಾಗ ''ಇವರೊಳೆನಗೇನೋ ಮಮತೆ ಪುಟ್ಟುಗುಂ, ಮುನಿಸು ಬಾರದು'' ಎಂಬ ಅವನ ಶಂಕೆ ಬಲವಾಗುತ್ತದೆ. 'ಎಮ್ಮನಬ್ಬೆ ಪೆತ್ತಳ್, ಅಜ್ಜ ಸಾಕಿದಂ' ಎಂದು ಉತ್ತರಿಸುವ ಚಿಣ್ಣರು ರಾಮಬಾಣಕ್ಕೂ ಮಣಿಯರು. ಅತ್ತ ವರುಣ ಲೋಕಕ್ಕೆ ಹೋದ ವಾಲ್ಮೀಕಿ ಮಹರ್ಷಿ

ನಾರದರಿಂದ ಸುದ್ದಿ ತಿಳಿದು ತಮ್ಮಾಶ್ರಮಕ್ಕೆ ಬಂದು ಸೀತೆಯನ್ನು ಸಂತೈಸಿ ರಣರಂಗ ಪ್ರವೇಶಿಸಿ ರಾಮನಿಗೆ ಲವಕುಶರು ನಿನ್ನ ಮಕ್ಕಳೆಂದು ತಿಳಿಸಿ, ಸೀತೆ ತನ್ನ ಆಶ್ರಮದಲ್ಲಿ ಕಳೆದ ದಿನಗಳನ್ನು, ಸುತರ ಕಥೆಯನ್ನು ಸಾದ್ಯಂತವಾಗಿ ವಿವರಿಸಿ ತಮ್ಮ ಆಶ್ರಮಕ್ಕೆ ಕರೆದೊಯ್ಯುತ್ತಾರೆ. ರಾಮ ಸೀತೆ, ಲವಕುಶರನ್ನು ಕಂಡು ಸಂತಸಪಡುತ್ತಾನೆ. ಲವಕುಶರು ಅಜ್ಜ ಕಲಿಸಿದ ರಾಮಾಯಣವನ್ನು ತಾನವಿತಾನಗಳಿಂದ, ಲಯ ತಾಳಮೇಳಗಳಿಂದ, ಹಲವು ರಾಗಗಳಿಂದ ಸುಸ್ವರದಲ್ಲಿ ಹಾಡುತ್ತಾರೆ. ರಾಮ ಸೀತೆಯೊಡನೆ ಕ್ಷಮೆಯಾಚಿಸಿ ಸತಿಸುತರೊಡನೆ ಅಯೋಧ್ಯೆಗೆ ಮರಳುತ್ತಾನೆ. 'ಓ ರಾಘು ನೊಳ್ಳಿದನಕ್ಕೆ, ಸೊಗಂಬಾಳ್ಗೆ, ರಾಮಂಗೆ ಗೆಲವಕ್ಕೆ' ಮನೋರಮೆ ರಾಮನನ್ನು ಕೊಂಡಾಡುತ್ತಾಳೆ. ಇಂತು ''ಶ್ರೀ ರಾಘವಂ ಸೀತಾ ಸಮೇತಂ ಜನ್ನಮಂ ಮಾಡಿ ತನ್ನೊಂದು ಬೆಳ್ಜಸದಿಂದ ತಮ್ಮಂದಿರೊಂದಿಗೆ ರಾಜ್ಯವಾಳುವಂ, ಅವಂಗಂ ಮಂಗಳಂ ಶುಭಂ ಭದ್ರಂ ಕಲ್ಯಾಣಂ'' ಎಂದು ಕವಿ ಕಥೆಗೆ ಮಂಗಳ ಹಾಡುತ್ತಾನೆ.

ಸೀತಾ, ಲಕ್ಷ್ಮಣ, ರಾಮ ಈ ಮೂರು ಪಾತ್ರಗಳೂ 'ಶ್ರೀರಾಮಾಶ್ವಮೇಧಂ' ಕೃತಿಯಲ್ಲಿ ತೊಳಗಿ ಬೆಳಗುತ್ತವೆ. 'ಸೀತಾಪರಿತ್ಯಾಗ'ವೇ ಪ್ರಮುಖವಾಗಿ ಬರುವ ಈ ಕಥೆಯಲ್ಲಿ ಕರುಣ ರಸ ಉಕ್ಕಿ ಹರಿದು ಸೀತಾದೇವಿಯ ಪಾತ್ರ ಎಲ್ಲರಿಗಿಂತ ಉನ್ನತಮಟ್ಟದಲ್ಲಿ ಕಂಗೊಳಿಸಿದೆಯೆಂದೇ ಹೇಳಬಹುದು. ದುಃಖವೇ ಬಾಳು ಎಂದು ನಿರೂಪಿಸುವ ಈ ಪಾತ್ರ ಶೋಕ, ತ್ಯಾಗ, ಪ್ರೇಮ, ಭಕ್ತಿ, ಸಹನೆಯಲ್ಲಿ ರೂಪಿತಗೊಂಡು ಆದರ್ಶಪಾತ್ರವಾಗಿದೆ. ಆದರ್ಶಸತಿ, ಆದರ್ಶಮಹಿಳೆ, ಆದರ್ಶ ಮಾತೆ ಸೀತಾದೇವಿ 'ಶ್ರೀರಾಮರಕ್ಷೆ' ಹೊಂದಿ ವಿಜೃಂಭಿಸಿದ್ದಾಳೆ. ದುಃಖದ ಅಗ್ನಿಕುಂಡದಲ್ಲಿ ನೊಂದು ಬೆಂದಾಗಲೇ ಹೆಣ್ಣಿನ ಬಾಳಿಗೆ ಘನತೆ ಗೌರವಗಳೇನೋ!

ಮುದ್ದಣನ ಕಾವ್ಯ ಪ್ರತಿಭೆಯಿಂದಲೂ ಇಲ್ಲಿ ಸೀತಾದೇವಿ ಪೂರ್ಣ ಡಿಯಾಗಿ ಕಂಗೊಳಿಸಿ ಅಮರಳಾದಂತೆಯೇ, ಸೀತಾದೇವಿಯಂತಹ ಪವಿತ್ರ ಪಾತ್ರ ಸೃಷ್ಟಿಸಿ ಕವಿಯೂ ಅಮರನಾಗಿದ್ದಾನೆ, ಕೃತಿಯೂ ಅಮರವಾಗಿದೆ. 'ನಿನ್ನ ಪೆಸರಿಂತು ಕಬ್ಬಮಂ ಮುದ್ದು ಮುದ್ದಾಯ್ತು ಜಗಕೆ' ಎಂಬ ಮನೋರಮೆಯ ನುಡಿ ಸತ್ಯವಾಗಿ 'ಸೀತಾ ಪಾತ್ರವೂ ಮುಂತಿಲ್ಲ, ಪಿಂತಿಲ್ಲಮೆಂದಾಯ್ತು' ಎಂಬಂತೆ ಸೃಷ್ಟಿಗೊಂಡಿದೆಯಲ್ಲವೇ? ●

## ಬಿರುಕು ಬಯಲಾಗಿಸಿದ ಸಂಚು

ಅರ್ಥಶಾಸ್ತ್ರದ ಶಿಲ್ಪಿ ಕೌಟಿಲ್ಯನ ಕಣ್ಣಂಚು ಚಕ್ರವರ್ತಿ ಚಂದ್ರಗುಪ್ತನ ಶಯ್ಯಾಗಾರದ ಗೋಡೆಯಂಚಿನತ್ತ ಹೊರಳಿತ್ತು. ಇರುವೆ ಸಾಲು ಅನ್ನದಗಳನ್ನು ಕಚ್ಚಿಕೊಂಡು ಸಾಗುತ್ತಿತ್ತು. ಏನಾಶ್ಚರ್ಯ! ತನ್ನ ಅಪ್ಪಣೆ ಇಲ್ಲದೆ ಚಕ್ರವರ್ತಿಯ ಶಯ್ಯಾಗಾರದ ಬಳಿ ಊಟ ಮಾಡುವುದಂತಿರಲಿ, ಯಾರೂ ಸುಮ್ಮನೆ ಬರುವಂತಿಲ್ಲ. ಅಂದ ಮೇಲೆ ಅನ್ನದಗಳು ಇಲ್ಲಿ ಬರಲು ಹೇಗೆ ಸಾಧ್ಯ? ಮಹಾಮಂತ್ರಿ ಚಾಣಕ್ಯನ ಪಾದರಸದಂಥ ಮೆದುಳು ತರ್ಕಿಸಿತ್ತು. ಕೂಡಲೇ ಗೂಢಚಾರರ ಜಾಲ ಹರಡಿತು. ಚಂದ್ರಗುಪ್ತನನ್ನು ಹೇಗಾದರೂ ಕೊಲ್ಲಬೇಕೆಂಬ ನಂದರ ಮುಖ್ಯಮಂತ್ರಿ ಅಮಾತ್ಯರಾಕ್ಷಸನ ಆದೇಶ ಪಾಲಿಸಲು, ನಂದರ ಬೇಹುಗಾರರು ಚಂದ್ರಗುಪ್ತನ ಶಯ್ಯಾಗಾರದವರೆಗೂ ಕೊರೆದ ಸುರಂಗದಲ್ಲಿ ಅಡಗಿ ಕುಳಿತು ಸಮಯ ಕಾಯುತ್ತಿದ್ದರು. ಅವರು ಅಲ್ಲಿ ತಿಂದುದುರಿಸಿದ ಅಗಳನ್ನು ಕಚ್ಚಿಕೊಂಡು ಇರುವೆಗಳು ಬಿರುಕೊಂದರಿಂದ ಹೊರ ನಡೆದಿದ್ದವು.

(ಸಂಗ್ರಹ) ಟಿ.ಎಸ್. ಲಲಿತ, ಮೈಸೂರು

# ಇದು ಜೀವ ಇದು ಜೀವನ

ಇತ್ತೀಚೆಗೆ ನಾನು ಮತ್ತು ನನ್ನ ಗೆಳೆಯ ಕಾರ್ಯನಿಮಿತ್ತ ಪ್ರವಾಸದಲ್ಲಿದ್ದಾಗ ನಡೆದದ್ದು ಈ ಸ್ಮರಣೀಯ ಘಟನೆ.

ನಾವು ಶೃಂಗೇರಿಯಿಂದ ಕೊಪ್ಪಕ್ಕೆ ಹೋಗಲು ಒಂದು ಬಸ್ ಹತ್ತಿದೆವು. ಆದರೆ ಅಲ್ಲಿ ಸುಮಾರು ಸೀಟುಗಳಲ್ಲಿ ಕೆಲವು ವಿದ್ಯಾರ್ಥಿನಿಯರು ತಮ್ಮ ಪುಸ್ತಕಗಳನ್ನು ಇನ್ನೂ ಕೆಲವು ಜನ ತಮ್ಮ ವಸ್ತುಗಳನ್ನು ಇಟ್ಟು ಸ್ಥಳ ಕಾಯ್ದಿರಿಸಿದ್ದರಿಂದ ಜನ ಕಮ್ಮಿಯಿದ್ದರೂ ಬಸ್ ಭರ್ತಿಯಾಗಿತ್ತು.

ಆಗ 60-65 ವರ್ಷದ ವೃದ್ಧೆಯೊಬ್ಬರು ಬಸ್ ಹತ್ತಿದರು. ಆ ಮಾದರಿಯ ಕಾಯ್ದಿರಿಸುವಿಕೆಗೆ ಕೋಪಗೊಂಡು, ''ನೀವು ಈ ರೀತಿ ರಿಜರ್ವ್ ಮಾಡಿದರೆ ನಮ್ಮಂತಹ ವಯಸ್ಸಾದವರು ಏನು ಮಾಡುವುದು? ವಯಸ್ಸಾದ ನಮಗೆ ಜಾಗ ಕೊಡಬೇಕು'' ಎಂದು ಬಯ್ಯುತ್ತಿದ್ದರು. ಅವರ ಬೊಚ್ಚುಬಾಯಿಯ ಬೈಗುಳನ್ನು ಕೇಳಿ ಅಲ್ಲಿದ್ದವರು ನಕ್ಕರೇ ಹೊರತು ಜಾಗ ಕೊಡಲಿಲ್ಲ. ಕೊನೆಗೆ ದಂಪತಿಗಳೊಬ್ಬರು ಜಾಗ ಕೊಟ್ಟರು. ಆಗಲೂ ಅಜ್ಜಿ ಬಯ್ಯುತ್ತಿದ್ದರು, ಜನ ನಗುತ್ತಿದ್ದರು.

ಬಸ್ಸು ಹೊರಟು, ಅರ್ಧ ಗಂಟೆ ಪ್ರಯಾಣದ ನಂತರ ಸುಮ್ಮನೆ ಅಜ್ಜಿಯವರನ್ನು ನೋಡಲು ಅವರ ಸೀಟಿನ ಕಡೆ ನೋಡಿದರೆ ಅಲ್ಲಿ ಅವರಿಲ್ಲ! ಅವರ ಸೀಟಿನಲ್ಲಿ ಅವರಿಗಿಂತ ವಯಸ್ಸಾದ ಇನ್ನೊಬ್ಬ ವೃದ್ಧೆಗೆ ಸ್ಥಳ ಕೊಟ್ಟು ತಾವು ನಿಂತಿದ್ದರು.

ನಾನು ಅಜ್ಜಿಯವರ ಆ ಸುಸಂಸ್ಕೃತ ನಡವಳಿಕೆಗಾಗಿ ಅವರಿಗೆ ಮನಸ್ಸಿನಲ್ಲೇ ವಂದಿಸಿದೆ. ಅವರಿಗೆ ಸ್ಥಳ ಕೊಡದೆ ನಗುತ್ತಿದ್ದ ಇಂದಿನ ಯುವಜನರನ್ನು ಕಂಡು ವ್ಯಥೆಪಟ್ಟೆ.

● *ಗಿರೀಶ*

**ನಾ**ನು, ನನ್ನ ಶ್ರೀಮತಿ, ನನ್ನ ಹತ್ತು ವರ್ಷದ ಕುಮಾರ ಕಂಠೀರವ, ನನ್ನ ಮಿತ್ರ, ಆತನ ಪತ್ನಿ ಹಾಗೂ ಅವರ ಐದು ವರ್ಷದ ಮಗಳು ಸುಮತಿ ಎಲ್ಲರೂ ಒಟ್ಟಿಗೆ ಸರ್ಕಸ್‌ಗೆ ಹೊರಟೆವು. ಅಲ್ಲಿ ಸರ್ಕಸ್‌ಲ್ಲಿ ಮಾಡುತ್ತಿದ್ದ ಎಲ್ಲಾ ಸಾಹಸ ಪ್ರದರ್ಶನಗಳನ್ನು ಮೈಮರೆತು ಮಂತ್ರಮುಗ್ಧರಾಗಿ ನೋಡುತ್ತಿದ್ದೆವು. ಕೊನೆಯದಾಗಿ ಒಂದು ರೋಮಾಂಚನಕಾರಿಯಾದ ಸಾಹಸ ಪ್ರದರ್ಶನಕ್ಕೆ ಅಣಿಯಾಯಿತು. ಓರ್ವ ಯುವತಿಯನ್ನು ತಂದು ಒಂದು ಚಕ್ರಕ್ಕೆ ಕಟ್ಟಿದರು. ಹತ್ತು ಹೆಜ್ಜೆ ದೂರದಲ್ಲಿ ಒಬ್ಬ ಯುವಕ ಕಣ್ಣಿಗೆ ಪಟ್ಟಿ ಕಟ್ಟಿಕೊಂಡು ಚಕ್ರಾಭಿಮುಖವಾಗಿ ನಿಂತ. ಚಕ್ರ ತಿರುಗಲಾರಂಭಿಸಿತು. ಯುವಕ ತನ್ನ ಕೈಯಲ್ಲಿದ್ದ ಹರಿತವಾದ ಚಾಕುಗಳನ್ನು ಒಂದೊಂದಾಗಿಯೇ ಚಕ್ರದ ಕಡೆಗೆ ಎಸೆಯಲಾರಂಭಿಸಿದ. ಯುವಕ ಪ್ರತಿಸಲ ಚಾಕು ಎಸೆದಾಗಲೂ ''ಅಬ್ಬಾ ......! ಎಷ್ಟು ಸರಿಯಾಗಿ ಹಾಕುತ್ತಿದ್ದಾನೆ!!'' ಅಂತ ನಾವೆಲ್ಲಾ ಉದ್ಗಾರ ತೆಗೆಯುತ್ತಿದ್ದೆವು. ನನ್ನ ಮಿತ್ರನ ಮಗಳು ಸುಮತಿಗೆ ಏನ್ ಅನ್ನಿಸ್ತೋ ಥಟ್ಟನೇ .....! ''ಅಯ್ಯೋ .....! ಏನು ....... ಎಲ್ಲಾರು ಎಷ್ಟು ಸರಿಯಾಗಿ ಹಾಕ್ತಾ ಇದ್ದಾನೆ! ಅಂತ ಇದ್ದೀ

ರಲ್ಲಾ; ಒಂದು ಸಲವಾದರೂ ಚಾಕು ಆ ಹೆಂಗಸಿನ ಮೈಗೆ ನಾಟಿಕೊಂಡಿತಾ?'' ಎಂದಾಗ ಅಲ್ಲಿದ್ದವರೆಲ್ಲಾ ಸುಮತಿಗೆ ಏನು ಉತ್ತರ ಹೇಳಬೇಕೋ ತಿಳಿಯದೆ ಅವಕ್ಕಾದರು.

● ಜೆ.ವಿ.ಪ್ರಭು

ಮದ್ರಾಸಿನಲ್ಲಿ ಟ್ರೈನಿಂಗ್‌ಗೆ ಹೋಗುವ ಮೊದಲೇ ನನ್ನ ಸ್ನೇಹಿತನಿಗೆ ಮದುವೆಯಾಗಿತ್ತು. ಸಂಸಾರ ಪ್ರಾರಂಭಿಸಲು ಕಾತುರನಾಗಿದ್ದ ಅವನಿಗೆ ತರಬೇತಿ ಮುಗಿದ ಕೂಡಲೇ ಗಂಗಾವತಿಗೆ ಹಾಕಿದ್ದರು. ಎಪ್ಪತ್ತರ ದಶಕದಲ್ಲಿ ಗಂಗಾವತಿಯೊಂದು ದೊಡ್ಡ ಗ್ರಾಮವಾಗಿದ್ದರಿಂದ ಸುಲಭವಾಗಿ ವಿಶಾಲವಾದ ಮನೆಯೊಂದು ಸಿಕ್ಕಿ ಗರ್ಭಿಣಿಯಾಗಿದ್ದ ಹೆಂಡತಿಯ ಜೊತೆ ಆನಂದವಾಗಿ ಸಂಸಾರ ಪ್ರಾರಂಭಿಸಿದ. ಅತ್ತೆಗೆ ಮಗಳ ಮೇಲೆ ಎಲ್ಲಿಲ್ಲದ ಪ್ರೀತಿ, ಗರ್ಭಿಣಿ ಮಗಳು, ಜೊತೆಗೆ ಆಗಿನ ಬೆಂಗಳೂರಿನ ಲೆಖ್ಖದಲ್ಲಿ ಗಂಗಾವತಿಯೊಂದು ಕೊಂಪೆ; ಕೊಪ್ಪಳದವರೆಗೆ ರೈಲು ಪ್ರಯಾಣ ನಂತರ ಮುರುಕಲು ಬಸ್‌ನಲ್ಲಿ ಗಂಗಾವತಿಯನ್ನು ತಲುಪಬೇಕಿತ್ತು.

ನನ್ನ ಸ್ನೇಹಿತನ ಅತ್ತೆಯವರು; (ಪತಿಯ ನಿಧನದ ನಂತರ ವ್ಯವಹಾರವನ್ನೆಲ್ಲಾ ತಾವೇ ನಿಭಾಯಿಸುತ್ತಿದ್ದರು) ಮಗಳನ್ನು ಬೆಂಗಳೂರಿಗೆ ಕರೆದುಕೊಂಡು ಬಂದು ಬಾಣಂತಿತನ ಮಾಡಬೇಕೆಂಬ ಆಸೆಯಿಂದ ಪದೇ ಪದೇ ಅಳಿಯನಿಗೆ ಸಂಪ್ರದಾಯದಂತೆ ಮಗಳನ್ನು ತವರುಮನೆಗೆ ಕಳುಹಿಸಲು ನನ್ನಿಂದ ಕಾಗದ ಬರೆಯಿಸುತ್ತಿದ್ದರು. ನನ್ನ ಸ್ನೇಹಿತ ಮತ್ತು ಅವನ ಹೆಂಡತಿ ಇಬ್ಬರಿಗೂ ಬಾಣಂತಿತನಕ್ಕೆ ಬೆಂಗಳೂರಿಗೆ ಬರುವ ಇಷ್ಟವಿಲ್ಲ.

ಒಮ್ಮೆ ಅತ್ತೆ ನನ್ನಿಂದ ಬಹಳ ನಿಷ್ಠುರವಾದ ಕಾಗದವನ್ನು ಅಳಿಯನಿಗೆ ಬರೆಯಿಸಿದರು. ಗಂಗಾವತಿಯ ಹವಾಮಾನ ಗರ್ಭಿಣಿಯರಿಗೆ ತಕ್ಕುದಲ್ಲ, ಬೆಂಗಳೂರಿನಷ್ಟು ಸೌಲಭ್ಯಗಳಿಲ್ಲ. ಹುಟ್ಟುವ ಮಕ್ಕಳು ಕೂಡ ಆರೋಗ್ಯವಾಗಿರುವುದಿಲ್ಲ ಇತ್ಯಾದಿಗಳಲ್ಲದೆ ಯಾವ ಹೆಣ್ಣುಮಕ್ಕಳೂ ಆ ಊರಿನಲ್ಲಿ ಇರಲು ಯೋಗ್ಯವಲ್ಲವೆಂಬುದೇ ನಾನು ಅವರು ಹೇಳಿದ ಪ್ರಕಾರ ಬರೆದ ಕಾಗದದ ಒಕ್ಕಣಿ.

ಈ ಕಾಗದಕ್ಕೆ ಪ್ರತ್ಯುತ್ತರವಾಗಿ ನನ್ನ ಸ್ನೇಹಿತ ಅವನ ಅತ್ತೆಯವರಿಗೆ ಉತ್ತರಿಸಿ, ಗಂಗಾವತಿಯಲ್ಲಿ ಸುಮಾರು 5 ಸಾವಿರ ಕುಟುಂಬಗಳಿವೆಯೆಂದು, ಅದರಲ್ಲಿ ಸುಮಾರು ಹತ್ತು ಸಾವಿರ ಹೆಣ್ಣುಮಕ್ಕಳೆಂದೂ ಅವರಲ್ಲಿ ಮೂರು ಸಾವಿರ ಮಕ್ಕಳೆಂದು ಮತ್ತು ನಾಲ್ಕು ಸಾವಿರ ಹಡೆಯುವ ವಯಸ್ಸು ಮೀರಿದ ಹೆಣ್ಣುಮಕ್ಕಳೆಂದು ಉಳಿದ ಎರಡು ಸಾವಿರ ಹೆಣ್ಣುಮಕ್ಕಳು ಈಗಲೂ ಹಡೆಯುತ್ತಿದ್ದಾರೆಂದೂ ಅಲ್ಲದೆ ಹಿಂದೆ, ಇಂದೂ ಮತ್ತು ಮುಂದೂ ಕೂಡ ಅವರು ಮಕ್ಕಳುಗಳನ್ನು ಪಡೆಯುತ್ತಿದ್ದಾರೆ; ಪಡೆಯುತ್ತಾರೆ ಎಂದು ಬರೆದಿದ್ದ.

ಈ ಕಾಗದವನ್ನು ನಾನು ಓದಿದ ಕೂಡಲೇ ನನ್ನನ್ನೂ ನನ್ನ ಸ್ನೇಹಿತನನ್ನು ವಾಚಾಮಗೋಚರವಾಗಿ ಬೈಯ್ದು ನನ್ನ ಸ್ನೇಹಿತನ ಅತ್ತೆ ಅಂದೇ ರಾತ್ರಿ ರೈಲಿಗೆ ನನ್ನನ್ನು ಜೊತೆ ಮಾಡಿಕೊಂಡು ಕೊಪ್ಪಳಕ್ಕೆ ಹೊರಟರು. ಮಾರನೇ ದಿನ ಸಂಜೆಯ ವೇಳೆಗೆ ಗಂಗಾವತಿ ತಲುಪಿದೆವು. ರಸ್ತೆಯುದ್ದಕ್ಕೂ ಮುದುಕಿ ನಮ್ಮನ್ನು ಬೈಯುವುದೂ ಅಲ್ಲದೆ; ಹೆರಿಗೆಯನ್ನು ಎಷ್ಟೇ ಕಷ್ಟ ಬಂದರೂ; ಖರ್ಚಾದರೂ ಬೆಂಗಳೂರಿನಲ್ಲಿಯೇ ಮಾಡಿಸುತ್ತೇನೆಂದು ಹಲವಾರು ಸಾರೆ ಶಪಥ ಮಾಡಿದರು.

ಗಂಗಾವತಿಯ ಸ್ನೇಹಿತನ ಮನೆ ತಲುಪಿದಾಗ ಆಶ್ಚರ್ಯ ಕಾದಿತ್ತು. ನನ್ನ ಸ್ನೇಹಿತನ ಹೆಂಡತಿಗೆ ಆ ದಿನ ಮುಂಜಾನೆ ಹೆರಿಗೆಯಾಗಿ ಗಂಡುಮಗುವಿನ ತಾಯಿಯಾಗಿದ್ದಳು.

ಆರೋಗ್ಯವಾಗಿದ್ದ ಸೊಸೆ ಮೊಮ್ಮಗನನ್ನು ನೋಡಿದ ಮುದುಕಿಯ ಮುಖದಲ್ಲಿ ಸಂತಸ ಮೂಡಿತ್ತು. ಬಾಗಿಲ ಮರೆಯಲ್ಲಿದ್ದ ಸೂಲಗಿತ್ತಿ ಮುದುಕಿ ಫಕೀರವ್ವ ನಗುತ್ತಿದ್ದಳು.

● *ಎಚ್.ಎನ್. ವೆಂಕಟೇಶ*

ಚಾರ್ಲಿ ಚಾಪ್ಲಿನ್‌ನ ಮಾದರಿ :

# ನೆಮ್ಮದಿಗೆ ನಾಲ್ಕು ವಿವಾಹ

ಎಸ್. ರವಿಕುಮಾರ, ಮಾಗಳ

ಚಾರ್ಲಿ ಚಾಪ್ಲಿನ್ ಚಿತ್ರರಂಗಕ್ಕೆ, ತಾನು ನಂಬಿದ್ದ ವಿಚಾರಧಾರೆಗೆ ಅಂಟಿಕೊಂಡಂತೆ ವೈವಾಹಿಕ ಜೀವನಕ್ಕೆ ಒಗ್ಗಿಕೊಳ್ಳಲಿಲ್ಲ. ದಾಂಪತ್ಯ ಜೀವನದಲ್ಲಿ ಸುಖ-ಶಾಂತಿ-ನೆಮ್ಮದಿ ಕಾಣಲು ಈ ಮಹಾನ್ನಟ ಒಂದಲ್ಲ, ಎರಡಲ್ಲ, ನಾಲ್ಕು ಬಾರಿ ಮದುವೆಯಾದ.

ಚಾಪ್ಲಿನ್ ಮೊದಲ ಬಾರಿ ಹುಡುಗಿಯೊಬ್ಬಳ ಪ್ರೇಮಪಾಶಕ್ಕೆ ಸಿಕ್ಕಿದಾಗ ಅವರಿಗಿನ್ನೂ 15 ವರ್ಷ ಅಷ್ಟೇ. ಇದು ಅಪ್ರಾಪ್ತ ವಯಸ್ಸಿನವರಿಬ್ಬರ ಬಿಸಿ ಬಿಸಿ ಪ್ರೇಮವಾಗಿತ್ತೇ ಹೊರತು ಮದುವೆಯಷ್ಟು ಮುಂದಕ್ಕೆ ಹೋಗಲಿಲ್ಲ. ಆದರೆ ಈ ಹುಡುಗಿ ಹೆಟೀಕೆಲ್ಲಿಯ ನೆನಪು ಮಾತ್ರ ಚಾಪ್ಲಿನ್ನನ ಮನಸ್ಸಿನಿಂದ ಕಡೆಯುವರೆಗೂ ಮಾಸಲಿಲ್ಲ. ಆತ ನಿರ್ಮಿಸಿದ ಹಲವು ಚಿತ್ರಗಳಲ್ಲಿ ಒಂದಲ್ಲ ಒಂದು ಪಾತ್ರಕ್ಕೆ ಹೆಟೀಕೆಲ್ಲಿಯ ಹೆಸರನ್ನೇ ಚಾಪ್ಲಿನ್ ಇಟ್ಟರು.

ಎರಡನೆಯ ಪ್ರೇಮ ಪ್ರಕರಣ ಮೇರೀ ಡ್ರೆಸ್ಸರ್ ಜತೆ. ಮುಂದೆ 1918ರಲ್ಲಿ ಮಿಲ್ಡ್ರೆಡ್ ಹ್ಯಾರಿಸ್ ಜತೆ ಮದುವೆಯಾಗುವವರೆಗೂ ಈ ಪ್ರೇಮ ಮುಂದುವರೆದಿತ್ತು. ಹ್ಯಾರಿಸ್ ಮಹತ್ವಾಕಾಂಕ್ಷೆಯ ಸುಂದರಿ. ಆದರೆ ಈಕೆಯ ರಾಕ್ಷಸೀ ಪ್ರವೃತ್ತಿಯ ಕಾಟವನ್ನು ತಡೆಯುವುದು ಚಾಪ್ಲಿನ್ನನಿಗೆ ಸಾಧ್ಯವಾಗಲಿಲ್ಲ. ಎರಡೇ ವರ್ಷಗಳಲ್ಲಿ ಈ ಮದುವೆ ಮುರಿದು ಹೋಯಿತು.

ಚಾಪ್ಲಿನ್‌ರ ಎರಡನೆಯ ಮಡದಿಯಾಗಿ ಬಂದಾಕೆ ಲಿಟಾಗ್ರೇ. ಚಾಪ್ಲಿನ್‌ರ ಕೆಲವು ಚಿತ್ರಗಳಲ್ಲೂ ಅಭಿನಯಿಸಿದ ಈಕೆಯನ್ನು 1924ರಲ್ಲಿ ಮದುವೆಯಾದರು. ಈ ಮದುವೆಯೂ ಮುಂದಿನ ಎರಡೇ ವರ್ಷಗಳಲ್ಲಿ ಮುಗಿದ ಕಥೆಯಾಯಿತು. ಆದರೆ ಈ ದಾಂಪತ್ಯ ಚಾಪ್ಲಿನ್ ಜ್ಯೂನಿಯರ್ ಹಾಗೂ ಸಿಡ್ನಿಯ ಜನನಕ್ಕೆ ಕಾರಣವಾಯಿತು.

ಮುಂದೆ ಹತ್ತು ವರ್ಷದ ಬಳಿಕ 1936ರಲ್ಲಿ ಜಪಾನ್ ಪ್ರವಾಸ ಕಾಲದಲ್ಲಿ ಈ ನಟ ಪಾಲೆತ್ ಗೊಡಾರ್ಡ್‌ಳನ್ನು ವರಿಸಿದರು. 'ಮಾಡರ್ನ್ ಟೈಮ್ಸ್', 'ದಿ ಗ್ರೇಟ್ ಡಿಕ್ಟೇಟರ್' ಚಿತ್ರಗಳಲ್ಲಿ ನಟಿಸಿದ ಗೋಡಾರ್ಡ್‌ಗೆ ತಾರೆಯಾಗಿ ಮೆರೆಯುವ ಹಂಬಲ ಮೂಡಿತ್ತು. ಯುನೈಟೆಡ್ ಆರ್ಟಿಸ್ಟ್ ಸಂಸ್ಥೆಯೊಂದಿಗಿನ ಒಪ್ಪಂದ ಮುರಿದು ಪ್ಯಾರಾ ಮೌಂಟ್ ಕಂಪನಿ ಜತೆ ಈಕೆ ಸೇರಿದಾಗ ಚಾಪ್ಲಿನ್ ಇದನ್ನು ನಂಬಿಕೆ ದ್ರೋಹ ಎಂದು ಭಾವಿಸಿದರು. ಈ ಮದುವೆ 1942ರಲ್ಲಿ ಕೊನೆಗೊಳ್ಳಲು ಇದೇ ಕಾರಣವಾಯಿತು.

ಅದೇ ವರ್ಷ ನಾಟಕಕಾರ ಯೂಜೀನ್ ಓನೀಲ್‌ರ ಮಗಳು ಊನ್ನಾ ಓನೀಲ್ ಚಾಪ್ಲಿನ್‌ಗೆ ಮನ ಮೆಚ್ಚಿದ ಮಡದಿಯಾಗಿ ಬಂದರು. ಇವರಿಬ್ಬರ ದಾಂಪತ್ಯ ಜೀವನದ ಫಲ ಎಂಟು ಮಕ್ಕಳು. 1977ರಲ್ಲಿ ಚಾಪ್ಲಿನ್ ಸಾಯುವವರೆಗೂ ಊನ್ನಾ ಪತಿಯನ್ನು ಚೆನ್ನಾಗಿ ನೋಡಿಕೊಂಡಳು. ಈ ದಾಂಪತ್ಯ ಜೀವನ ಚಾಪ್ಲಿನ್‌ನ ಮೂರುವರೆ ದಶಕದ ನೆಮ್ಮದಿಯ ಜೀವನವಾಗಿತ್ತು. **(ಸಂಗ್ರಹ)** ●



ಪುಸ್ತಕ ವಿಭಾಗ
ಸ್ವಾಮಿ
ಮರಾಠಿ ಮೂಲ : ಜಿ.ಎ. ಕುಲಕರ್ಣಿ
ಕನ್ನಡಕ್ಕೆ : ಚಂದ್ರಕಾಂತ ಪೋಕಳೆ

ಸೂರ್ಯ ಗಿಡಗಳ ಮರೆಯಿಂದ ದಿನ್ನೆಯಾಚೆಗೆ ಹೋದಾಕ್ಷಣ ಎದುರಿಗೆ ಒಮ್ಮೆಲೆ ಕತ್ತಲೆಯಾವರಿಸಿದಂತಾಯಿತು. ಮತ್ತು ಕಾಲ ಕೆಳಗಿನ ಹಾದಿ ಸುಸ್ತಾದ ಹೆಬ್ಬಾವಿನಂತಾದಾಗ ಆತನಿಗೆ ತಾನು ಇಂಥ ಕಾಲ್ದಾರಿ ಹಿಡಿದುಹೊರಟ ಬಗ್ಗೆ ಪಶ್ಚಾತ್ತಾಪವಾಯಿತು. ಇದಕ್ಕಿಂತ ತಾನು ಬೇಗ ಹೊರಟಿದ್ದರೆ ನೇರ ರಸ್ತೆ ಹಿಡಿದು ಮುಖ್ಯ ರಸ್ತೆಗೆ ಬಂದು ನಿಲ್ಲಬಹುದಾಗಿತ್ತಲ್ಲಾ ಎಂದು ಮನಸ್ಸು ಹಳಹಳಿಸಿತು. ಆದರೆ ಆತ ಎಷ್ಟೋ ವರ್ಷಗಳ ಬಳಿಕ ಆ ಹಳ್ಳಿಗೆ ಬಂದಿದ್ದ ಮತ್ತು ಹಳೆಯ ಅಸ್ಪಷ್ಟ ನೆನಪುಗಳನ್ನು ಕೆದಕಿ ಕೆದಕಿ ಅಲೆದಾಡುತ್ತಿದ್ದಾಗ ವೇಳೆ - ಕಿಸೆಗೆ ತೂತು ಬಿದ್ದ ಹಾಗೆ - ಹೋದದ್ದೆ ಗೊತ್ತಾಗಲಿಲ್ಲ. ತಾಯಿ ಹೇಳಿದ ಮಾರುತಿ ದೇವಾಲಯಕ್ಕೆ ಹೋಗಿ ಬಂದಿದ್ದ. ತಮ್ಮ ಕೆಲಸ ಆಗುವ ಹಾಗಿದ್ದರೆ ಆ ಮೂರ್ತಿಯನ್ನು ಯಾರು ಬೇಕಾದರೂ ಸುಲಭವಾಗಿ ಎತ್ತಬಹುದಾಗಿತ್ತು. ಇಲ್ಲದಿದ್ದರೆ ಅದು ಕೂದಲಿನಷ್ಟೂ ಕದಲುತ್ತಿರಲಿಲ್ಲ. (ಆತ ಅದನ್ನು ಸುಲಭವಾಗಿ ಎತ್ತಿದ್ದ.

---

# ಜಿ.ಎ. ನೆನಪು:

1960ರ ನಂತರ ಜಿ.ಎ.ಕುಲಕರ್ಣಿಯಂಥಹ ಅನೇಕ ಹೊಸ ಲೇಖಕರು ಬೆಳಕಿಗೆ ಬಂದಾಗ ಹೆಪ್ಪುಗಟ್ಟಿದ ಮರಾಠಿ ಕತೆಗೆ ಹೊಸ ಚಾಲನೆ ಸಿಕ್ಕಂತಾಯಿತು. ಈ ಕಾಲ ಖಂಡದ ಲೇಖಕರು ಹೊಸ ಕತೆಯ ಶಕ್ತಿ ಬೆಳೆಸಿದರು. ಅದು ಒಬ್ಬ ವ್ಯಕ್ತಿಯ ಸುತ್ತಲೂ ಕೇಂದ್ರೀಕೃತವಾಗದೇ ಮಾನವ ಸಮುದಾಯದ ಚಿತ್ರಣದಲ್ಲಿ ತೊಡಗಿತು. ಅದು ಮಾನವನ ಅಪರಿಚಿತ ಕ್ಷೇತ್ರಕ್ಕೂ ಕೈಯಾಡಿಸಿತು. ಅಷ್ಟೇ ಅಲ್ಲ, ಈ ಕತೆಗಳಲ್ಲಿ ಹೊಸ ಅನುಭವದ ವಿಶ್ವವೇ ಗೋಚರಿಸಲಾರಂಭಿಸಿತು. ಕತೆಯ ಉದ್ದೇಶವಾದರೂ ಏನು ಎಂಬ ಪ್ರಶ್ನೆಯ ಹುಡುಕಾಟದ ಪ್ರಯತ್ನ ಹೊಸ ಪೀಳಿಗೆಯ ಲೇಖಕರಿಗೆ ಅವಶ್ಯವೆನಿಸಿತು.

ಭಾವ ವಿವಶತೆ, ಸಾಂಕೇತಿಕತೆ, ತಂತ್ರಬದ್ಧತೆ ಇತ್ಯಾದಿ ಬಂಧನದೊಳಗೆ ಸಿಕ್ಕು ಉಸಿರುಗಟ್ಟಿದ ಮರಾಠಿ ಕಥಾಪ್ರಕಾರಕ್ಕೆ ಗಂಗಾಧರ ಗಾಡಗೀಳರು ಮುಕ್ತಿ ದೊರಕಿಸಿಕೊಟ್ಟರು. ಮತ್ತು ಬೆಳವಣಿಗೆಯ ಮಾರ್ಗವನ್ನು ಮುಕ್ತಗೊಳಿಸಿದರು. ಜಿಎ ಕುಲಕರ್ಣಿಯವರು ಕತೆಗಳನ್ನು ಒಂದು ಹೊಸ ವಿಶ್ವಕ್ಕೊಯ್ದು ಮುಟ್ಟಿಸಿದರು. ಜೀವನದ ವಿವಿಧ ಮಜಲುಗಳ, ಮುಖಗಳ ಶೋಧ ಮಾಡುವುದು ಅವರಿಗೆ ಸಾಧ್ಯವಾಯಿತು. 'ಜಿಎ' ಯವರ ಪ್ರಥಮ ಕಥಾಸಂಗ್ರಹ 1959ರಲ್ಲಿ ಪ್ರಕಟಗೊಂಡಿತು. ಆ ಸಂಕಲನದಲ್ಲಿಯ 'ಚಂದ್ರಾವಳ', 'ಮುಖವಳಾ', 'ಸಾಂಗಡಾ', 'ಗುಂತವಳ' ಇತ್ಯಾದಿ ಕತೆಗಳನ್ನು ಓದಿದಾಗ 'ಜಿಎ' ಯವರ ಕತೆ ಒಬ್ಬ ವ್ಯಕ್ತಿಯ ವ್ಯಥೆ ಅಥವಾ ಒಂದು ಭಾವ ವೃತ್ತಿಯ ಚಿತ್ರಣ ಮಾಡದೇ, ಅವರ ನಿರ್ಮಾಣದ ಹಿಂದಿನ ಜೀವ, ಜಗತ್ತು ಮತ್ತು ಅದೃಶ್ಯ ಶಕ್ತಿಗಳ ಮೂಲಭೂತ ಪ್ರಶ್ನೆಗಳ ಜಿಜ್ಞಾಸೆ ನಡೆಸುತ್ತಿದೆ ಎಂಬುದು ಗೋಚರಿಸುತ್ತದೆ. ದುಃಖ, ಚಿಂತೆ, ವೇದನೆಯ ಹೊರೆ ಹೊತ್ತು, ನೋವನ್ನು ಮೂಕವಾಗಿ ಅನುಭವಿಸುತ್ತಿರುವ ಇಂಥ ವ್ಯಕ್ತಿಗಳ ಹಿಂದೆ ಪ್ರಬಲವಾದ ಜೀವನ ಇಚ್ಛೆಯಿದೆ. ಈ ಚರಾಚರ ಸೃಷ್ಟಿ, ಅಲ್ಲಿಯ ದುಃಖ ಚಕ್ರದಲ್ಲಿ ಗರಗರನೆ ಸುತ್ತುವ ಮನುಷ್ಯ, ಆ ಮನುಷ್ಯರನ್ನು ಪರದೆಯ ಎದುರಿಗೆ ತಂದು ನಗಲು, ಅಳಲು ಹಚ್ಚುವ ಮತ್ತು ಆಕಸ್ಮಿಕವಾಗಿ ಪರದೆಯ ಹಿಂದೊಯ್ದು ಜೀವನವನ್ನು ಆಟವಾಡಿಸುವ ರೀತಿ ಇವರ ಕುತೂಹಲದ ವಿಷಯ! ಜನನ ರಸಪೂರ್ಣ, ಮರಣ ವಿರಸಮಯ ಮತ್ತು ಹುಟ್ಟು - ಸಾವುಗಳ ನಡುವೇ ಇರುವುದೇ ಜೀವನ! ಈ ಜೀವನದ ಸ್ವರೂಪವಾದರೂ ಎಂಥದು? ಮನುಷ್ಯರ ಅಸ್ತಿತ್ವದ ಅರ್ಥವೇನು? ಪ್ರಯೋಜನವೇನು? ಇಂಥ ಪ್ರಶ್ನೆಗಳ ಚಿಂತನೆಯಲ್ಲೇ ಅವರು ತ್ರಸ್ತರಾಗುತ್ತಾರೆ. ಜೀವನದ

ಅಂಗಿಗೆ ಕುಂಕುಮದ ಕಲೆಯೂ ಹತ್ತಿತ್ತು) ಆತ ಬಾಲಕನಾಗಿದ್ದಾಗ ತಿಂದ ಮಾವಿನ ಹಣ್ಣಿನ ಆಳೆತ್ತರದ ಮರವನ್ನು ಸ್ಪರ್ಶಿಸಿದ್ದ. ಮತ್ತು ಕೊನೆಗಾತ ತಾನೆಲ್ಲಿ ಹುಟ್ಟಿದ್ದನೋ ಆ ಮನೆಯಲ್ಲಿ ಶತಪಥ ಹಾಕಿದ್ದ. ಜೇನಿನಷ್ಟು ಸಿಹಿಯಾದ ಹಣ್ಣು ನೀಡುತ್ತಿದ್ದ ಅತ್ತೀ ಮರ ಈಗ ಗಟ್ಟಿಯಾಗಿ ಬೇರೂರಿತ್ತು. ಶ್ರಾವಣದಲ್ಲಿ ಅಂಗಳದ ತುಂಬ ಪಸರಿಸುತ್ತಿದ್ದ ಪಾರಿಜಾತ ಹೂವಿನ ಗಿಡದ ಅವಶೇಷ ಈಗ ಉಳಿದಿರಲಿಲ್ಲ. ಅಲ್ಲಿಯ ಜನರು ಬೇರೊಂದು ಪಾರಿಜಾತದ ಗಿಡವನ್ನೇಕೆ ಹಚ್ಚಲಿಲ್ಲವೋ? ಯಾವ ಆರೈಕೆಯನ್ನೂ ಬಯಸದ ಸಮೃದ್ಧ ಮರವದು; ಈಗ ಅದರ ನೆರಳು ಅಂಗಳದಲ್ಲಾಗಲಿ, ಹಿತ್ತಲಿನಲ್ಲಾಗಲೀ ಇರಲಿಲ್ಲ. ಪಕ್ಕದಲ್ಲಿ ಒಂದೂ ಮರವಿಲ್ಲದ ಮನೆ ಇರುವುದು ಸಾಧ್ಯವೇ? ಮತ್ತು ಅಂಥಲ್ಲಿ ಮನುಷ್ಯ ವಾಸಿಸಬಹುದೇ? ತುಳಸಿಕಟ್ಟೆ ಇಲ್ಲದ, ಅಂಗಳ ಸಾರಿಸದ ಮನೆ ಇರುವುದು ಸಾಧ್ಯವೇ? ಆತನಿಗೆ ಒಂದು ಕ್ಷಣ ಆಶ್ಚರ್ಯವೆನಿಸಿತು, ಆದರೆ ಅದು

---

# ಜೊತೆಗೊಂದು ಕಥೆ

ಶೋಧನೆಗೆ ಹೇಗೆ ಅಂತ್ಯವಿಲ್ಲವೋ ಹಾಗೇ ಅಗೋಚರ 'ಸೂತ್ರಧಾರ' ಯಾರೋ ಅದು ಸಹ ಗೊತ್ತಿಲ್ಲ. ಅಂತೂ ಅದರ ಹುಡುಕಾಟದ ಉದ್ದೇಶವೇ ಜಿಎಯವರ ಉದ್ದೇಶ.

ಜಿಎ - ಕತೆಗಳು ಉತ್ತರವನ್ನು ಅಡಗಿಸಿಟ್ಟು ಕೇವಲ ಪ್ರಶ್ನೆಗಳನ್ನಷ್ಟೆ ನಮ್ಮ ಮುಂದೆ ಒಡ್ಡುತ್ತವೆ! ಇವು ವ್ಯಕ್ತಿ ಕೇಂದ್ರಿಕೃತವಾದ ಕತೆಗಳಲ್ಲ; ಮನುಷ್ಯ ಮನುಷ್ಯರ ನಡುವಣ ಸಂಬಂಧದ; ಮನುಷ್ಯ ಮತ್ತು ವಿಧಿಯ ಆಟದ ಸಂಬಂಧದ ಬಗ್ಗೆ ವಿಚಾರ ಮಾಡುವ ಕತೆಗಳು. ದಾಸ್ತೋವೆಸ್ಕಿಯಂತೆ 'ಜಿಎ' ಕೂಡ ಮೂಲಭೂತ ಚಿರಂತನ ಸತ್ಯವನ್ನು ವಿಚಾರ ಮಾಡುತ್ತಿರಬೇಕು.

ಜಿಎ ಕತೆಗಳು ಅವರ ಅನುಭವದಿಂದ ಹೊರಹೊಮ್ಮುತ್ತವೆ. ಅವರ ಕತೆಗಳ ವಿಷಯವೆಂದರೆ Situation! ಈ Situationನಲ್ಲಿ Vibrant tension ಇರುತ್ತದೆ. ಇದೇ ಕತೆಗಳ ಜೀವಾಳ. ಇಲ್ಲಿ ಎಷ್ಟೋ ಪಾತ್ರಗಳು ಶಾಪಗ್ರಸ್ತ ಜೀವನ ನಡೆಸುತ್ತವೆ. ಮತ್ತು ಮೃತ್ಯುವಿನ ಅಧೀನವಾಗಿರುತ್ತವೆ. ವಿಧಿಯ ಕಟ್ಟಳೆ - ಬಂಧನದಿಂದ ಮುಕ್ತಿ ದೊರಕಿಸಿ ಕೊಡುವದು ಸಾವೇ - ಸಾವಿನಿಂದಲೇ ಅವರಿಗೆ ಮೋಕ್ಷ.

ಜಿಎ ಕತೆಗಳಲ್ಲಿ ಚಿತ್ರಕತೆಗಳ ದಟ್ಟ ವಾಸನೆಯಿದೆ. ಚಿತ್ರ ಮಾಲಿಕೆಗಳ ಮುಖಾಂತರ ಒಂದು ಹೊಸ ಅನುಭವವನ್ನ ನಮ್ಮೆದುರಿಗೆ ತೆರೆದಿಡುತ್ತಾರೆ. ಈ ಚಿತ್ರಕತೆ ಸೂಚ್ಯವಾಗಿರುತ್ತದೆ. ಹೀಗಾಗಿ ಅವರ ಕತೆಯೆಂದರೆ ಚಲಿಸುವ ಚಿತ್ರಮಾಲಿಕೆ. ಇವರ ಕತೆಯ ಇನ್ನೊಂದು ವೈಶಿಷ್ಟ್ಯವೆಂದರೆ ತಮ್ಮ ಅನುಭವವನ್ನು ಪ್ರತಿಮೆಯಲ್ಲಿ ಪರಿವರ್ತನೆ ಮಾಡುತ್ತಾರೆ. 'ನೀಲಾ ಸಾವಳಾ' ದಿಂದ ಹಿಡಿದು 'ರಮಳ ಖುಣಾ'ದವರೆಗೆ ನೂರಾರು ಪ್ರತಿಮೆಗಳ ವೈವಿಧ್ಯಮಯ ಸರಮಾಲೆಯನ್ನು ಕಾಣಬಹುದು. ಇವರ ಸಂವೇದನಾ ಶೀಲತೆ ನೋಡಿ ಓದುಗ ವಿಸ್ಮಿತನಾಗುತ್ತಾನೆ. ಜಗತ್ತಿನ ವಿಲಕ್ಷಣ ಸ್ವಭಾವದ ಜನರನ್ನು ಇಲ್ಲಿ ಕಾಣುತ್ತೇವೆ. ಅವರ ವೇದನೆಯ ಉತ್ಕಟ ಚಿತ್ರಣವಿದೆ. ಅವರ ವಾಸನೆ ಅಷ್ಟೇ ದಟ್ಟ ಮತ್ತು ಭಾವನೆ ಅಷ್ಟೇ ಉತ್ಕಟ. ಇಷ್ಟಾದರೂ ಮನುಷ್ಯರೆಲ್ಲ ದೈವದ ಕೈಗೊಂಬೆಗಳು! ಆದರೂ ಅವರಲ್ಲಿ ಪ್ರಬಲವಾದ ಜೀವನೋಲ್ಲಾಸವಿದೆ. ಜಿಎ ತಮ್ಮ ಕತೆಗಳಲ್ಲಿ ಅದ್ವೈತದ ವಿಚಾರವನ್ನು ಬಳಸುತ್ತಾರೆ. ಒಮ್ಮೊಮ್ಮೆ ಇವರ ಕತೆಗಳು 'ವೃಂದಗಾನ'ದ ದಟ್ಟ ಅನುಭವ ನೀಡಿದರೆ, ಕೆಲವೊಮ್ಮೆ ಮುಕ್ತ ಚಿಂತನೆಯ ಮೂಲಕ ಚಿತ್ರಮಾಲಿಕೆಯ ಆಕಾರ ಪಡೆಯುತ್ತವೆ. ಮತ್ತೊಮ್ಮೆ 'ಫ್ಯಾಂಟಸಿ'ಯ ರೂಪಧಾರಣ ಮಾಡುತ್ತವೆ.

*ಭಾಲಚಂದ್ರ ಫಡಕೆ*

ಬಹಳ ಕಾಲ ಉಳಿಯಲಿಲ್ಲ. ಅದೇ ಕಾಲಕ್ಕೆ ಆ ಮನೆಯಿಂದ ಓರ್ವ ತರುಣಿ ಹೊರಗೆ ಬಂದಳು. ಎದುರಿಗೆ ವ್ಯಕ್ತಿಯೊಬ್ಬನನ್ನು ನೋಡಿಯೂ ಆಕೆ ಸೆರಗು ಸರಿಪಡಿಸಿಕೊಳ್ಳುವ ಗೋಜಿಗೆ ಹೋಗ ಲಿಲ್ಲ. ಆಕೆಯ ಕೊರಳಲ್ಲಿ ಮಂಗಳಸೂತ್ರ ಕಾಣು ತ್ತಿದ್ದರೂ ಹಣೆಗೆ ಕುಂಕುಮವಿರಲಿಲ್ಲ. ಕೈಗೆ ಬಳೆ ಇರಲಿಲ್ಲ. ಆತನಿಗೆ ಅನಿಸಿತು, ಮನೆ ಸಹ ಆ ಹೆಣ್ಣಿನಂತೆ ಭಣ ಭಣ ಎನ್ನುತ್ತಿದೆ. ದರಿದ್ರ ಸ್ವಭಾ ವದ ಮನುಷ್ಯರ ದರಿದ್ರ ಮನೆಗಳು!

ಆತ ಅಲ್ಲಿಂದ ಹೊರಟ. ನಿಜವಾಗಿ ಅಲ್ಲಿ ಈಗ ಆತನದೆನ್ನುವುದು ಏನೂ ಇದ್ದಿರಲಿಲ್ಲ. ಅಂದ ಮೇಲೆ ಆತನ ಗುರುತು ಹಿಡಿಯುವ ದಂತೂ ದೂರದ ಮಾತು! ಮೊದಲು ಸುತ್ತುವ ರೆದ ನಾಲ್ಕೈದು ಮಕ್ಕಳು ಅರ್ಧ ಗಂಟೆಯೊಳಗೇ ಬೇಸತ್ತು ಹೊರಟು ಹೋದವು. ಅನಂತರ ಆತ ಏಕಾಕಿಯಾಗಿ ಅಲೆದಾಡಲಾರಂಭಿಸಿದ. ಆತನಿಗೆ ಅಲ್ಲಿ ಯಾರೂ ಉಳಿದುಕೊಳ್ಳಲು ಹೇಳಲಿಲ್ಲ.

ದಿನ್ನೆ ಸರಿಯಾಗಿ ಕಾಣಿಸುತ್ತಿರಲಿಲ್ಲ. ಹತ್ತು ನಿಮಿ ಷಗಳ ಹಿಂದೆಯೇ ತಗ್ಗೊಂದರಲ್ಲಿ ಕಾಲು ಜಾರಿ ಮೊಣಕಾಲಿಗೆ ನೋವಾಗಿತ್ತು. ಆದರೂ ಇನ್ನು ಳಿದ ಹಾದಿಯನ್ನು ಆದಷ್ಟು ಬೇಗ ನಡೆದು ಮುಗಿ ಸಬೇಕು.

ಯಾಕೆಂದರೆ ಈ ಕೊನೆ ಬಸ್ಸೂ ತಪ್ಪಿತೆಂ ದರೆ ಆತ ಇನ್ನೊಂದು ದಿನ ಎಲ್ಲಾದರೂ ಕಳೆಯ ಬೇಕಾಗುತ್ತಿತ್ತು. ಅಷ್ಟರಲ್ಲಿ ಮೂಲೆಯಲ್ಲಿ ಒಮ್ಮೆಲೆ ಪ್ರಕಾಶ ಕಾಣಿಸಿತು. ಮತ್ತು ಬಸ್ಸು ದಿನ್ನೆಯ ಕಡೆ ವೇಗದಿಂದ ಬರಲಾರಂಭಿಸಿತು. ಕುಂಟುತ್ತಲೇ ಆತ ಓಡಲಾರಂಭಿಸಿದ. ಆದರೆ ಆತ ರಸ್ತೆಯನ್ನು ಸಮೀಪಿಸುವಷ್ಟರಲ್ಲಿ ಬಸ್ಸು ಹೊರಟೇ ಹೋಯಿತು. ಕೆರಳಿದ ಆತನಿಗೆ ಅನಿ ಸಿತು, ಯಾರಾದರೂ ಪ್ರಯಾಣಿಕರು ಇಳಿದಿದ್ದರೆ ಬಸ್ಸು ಒಂದೆರಡು ನಿಮಿಷವಾದರೂ ನಿಲ್ಲು ತ್ತಿತ್ತು. ಪ್ರತಿ ದಿನ ಇಲ್ಲಿ ಬಹಳಷ್ಟು ಪ್ರಯಾಣಿ ಕರು ಇಳಿಯುತ್ತಿರಬೇಕು. ಆದರೆ ಇಂದು ನಾನು

**ಪ್ರತಿಯೊಂದು ಕೃತಿಯನ್ನು ಪೂರ್ಣ ವಿಚಾರ ಮಾಡಿ ಅನಂತರ ಅದನ್ನು ಮಾಡುವ ಸಾಮರ್ಥ್ಯವಾಗಲಿ, ಸ್ವಾತಂತ್ರ್ಯವಾಗಲಿ ಮನುಷ್ಯನ ಪಾಲಿಗೆ ಬರುವುದೇ ಇಲ್ಲ. ಒಂದು ವೇಳೆ ಅಂಥ ಸ್ವಾತಂತ್ರ್ಯ ಸಿಕ್ಕರೂ ಅದು ಕೇವಲ ಕೀಳು ಕೆಲಸಕ್ಕಾಗಿ ಮಾತ್ರ. ಅಲ್ಲದೆ ಅದು ಸಾಮಾನ್ಯವಾಗಿ ಮನಸ್ತಾಪವನ್ನುಂಟು ಮಾಡುತ್ತದೆ. ಇಡೀ ದೇಹ ಬತ್ತಲೆಯಾಗಿದ್ದಾಗ ಹಣೆಗೆ ಮಾತ್ರ ಚಿಂದಿ ಅರಿವೆ ಕಟ್ಟಿ ಮರೆಯುವಂಥ ದೃಶ್ಯವದು !**

ಒಂದು ಕಪ್ಪು ಚಹಾ ಕೂಡ ಕೊಡಲಿಲ್ಲ. ಆ ಊರು ಆತನನ್ನು ಸಂಪೂರ್ಣ ತಿರಸ್ಕರಿಸಿತ್ತು.

ಅಂಥದರಲ್ಲಿ ಈಗ ಮೊದಲೇ ಸಾಕಷ್ಟು ವೇಳೆ ಯಾಗಿತ್ತು. ಅಲ್ಲದೆ ಇನ್ನೂ ಒಂದು ಫರ್ಲಾಂಗಿ ನಷ್ಟು ಅಂತರವನ್ನು ಕ್ರಮಿಸಬೇಕಾಗಿತ್ತು. ಎಲ್ಲ ಕಡೆ ಹುಲ್ಲು ಹುಲುಸಾಗಿ ಬೆಳೆದಿತ್ತು ಮತ್ತು ಅಸ್ಪ ಷ್ಟವಾದ ಮಬ್ಬು ಬೆಳಕಿನಲ್ಲಿ ಕಾಲ ಕೆಳಗಿನ ತಗ್ಗು

ಹೋಗುವವನಿದ್ದೇನಲ್ಲಾ? ಅಂದ ಮೇಲೆ ಇಂದೇಕೆ ಯಾರು ಇಳಿಯುತ್ತಾರೆ, ಸಾಯಲಿಕ್ಕೆ?

ಆತ ಮುಖ ಒರೆಸಿಕೊಂಡ. ಆದರೆ ಆತನ ಮುಂದೆ ಧುತ್ತೆಂದು ಪ್ರಶ್ನೆಯೊಂದು ಎದ್ದು ನಿಂತಿತು - ಮುಂದೇನು? ಬೆಳಗ್ಗಿನ ಎಂಟರವ ರೆಗೆ ಯಾವುದೇ ಬಸ್ಸು ಇಲ್ಲ. ಅಂದ ಮೇಲೆ ಅಲ್ಲಿಯವರೆಗೆ ಎಲ್ಲಿ ವಿಶ್ರಾಂತಿ ಪಡೆಯೋದು,

ಎಲ್ಲಿ ಮಲಗೋದು? ಈ ಮರದ ಕೆಳಗೆ ಮಲಗುವ ಹಾಗಿಲ್ಲ. ಯಾಕೆಂದರೆ ಆ ರಸ್ತೆಯ ಪಕ್ಕದಲ್ಲಿ ಒಂದೇ ಒಂದು ಜೋಪಡಿಯೂ ಇರಲಿಲ್ಲ.

ಹಾಗಾದರೆ ಮುಂದೇನು?

''ಈಗೇನು ಮಾಡ್ತೀರಿ? ಈ ಬಸ್ಸಂತೂ ಹೊರಟೇ ಹೋಯಿತಲ್ಲ?'' ಸನಿಹದಲ್ಲಿ ಯಾರೋ ಪಿಸುಗುಟ್ಟಿದಾಗ ಆತ ಗಾಬರಿಯಿಂದ ಹಿಮ್ಮೆಟ್ಟಿದ. ಆತನ ಪಕ್ಕದಲ್ಲಿ ಕೆಲ ಅಂತರದ ಮೇಲೆ ಸನ್ಯಾಸಿಯಂತೆ ಕಾಣುವ ಒಬ್ಬ ಮನುಷ್ಯ ನಿಂತಿದ್ದ. ಆತ ಉದ್ದವಾದ ನಿಲುವಂಗಿಯನ್ನು ತೊಟ್ಟಿದ್ದ. ಮತ್ತು ತಲೆಗೆ ಬಿಗಿದುಕಟ್ಟಿದ ಪೇಟಾದ ತುದಿ ಹೆಗಲ ಮೇಲೆ ತೂಗಾಡುತ್ತಿತ್ತು. ಆತ ಶಾಂತವಾಗಿ ನಕ್ಕ ಮತ್ತು ಪುನಃ ಹೇಳಿದ. ಈಗೇನು ಮಾಡ್ತೀರಿ? ಹಿಂದಿರುಗಿ ಹೋಗ್ತೀರಾ?''

ಆತ ಸ್ವಲ್ಪ ಹೊತ್ತು ವಿಚಾರ ಮಾಡಿ ಹೇಳಿದ ''ಈಗ ನನ್ನ ಮುಂದಿರುವ ಪ್ರಶ್ನೆ ಇದೇ. ನಾನು ಹಿಂದಿರುಗಿ ಹೋಗೋದಾದ್ರೂ ಹೇಗೆ? ಕತ್ತಲೆಯಲ್ಲಿ ಕಾಲ್ದಾರಿಯಲ್ಲಿ ಹೋಗೋದು ಸಾಧ್ಯವಿಲ್ಲ. ನೇರ ಹಾದಿ ಹಿಡಿದು ಹೋಗಬೇಕೆಂದರೆ ಐದಾರು ಮೈಲಿ ದೂರದ ಅಂತರ, ಅಲ್ಲದೆ ನಾನು ಆ ಹಳ್ಳಿಗೆ ಹೋಗಿ ಮಾಡೋದಾದರೂ ಏನು? ನನ್ನ ಪರಿಚಯ ಯಾರಿಗೂ ಇಲ್ಲ. ಅವರಿಗೆ ನನ್ನ ಹೆಸರೂ ಗೊತ್ತಿಲ್ಲ. ಅಂದ ಮೇಲೆ ನಾನಲ್ಲಿಗೆ ಹೋಗಿ ಇರೋದಾದರೂ ಎಲ್ಲಿ?''

ಕಡಾವಿನ ಸದ್ದು ಮಾಡುತ್ತ ಸನ್ಯಾಸಿ ಸ್ವಲ್ಪ ಮುಂದೆ ಬಂದ. ಆತನ ಗಂಭೀರ ಮುಖ ಅಗಲವಾಗಿದ್ದು, ಮಾಂಸದಿಂದ ತುಂಬಿಕೊಂಡಿತ್ತು. ಆತ ಸನ್ಯಾಸಿ ಅಷ್ಟೇ ಅಲ್ಲ, ಮಠಾಧೀಶನಂತೆಯೂ ಕಾಣುತ್ತಿದ್ದ. ''ನಿಮಗೆ ಯಾರ ಪರಿಚಯವೂ ಇಲ್ಲದಿದ್ದ ಮೇಲೆ ಆ ಹಳ್ಳಿಗಾದರೂ ಏಕೆ ಹೋಗಿದ್ದಿರಿ?'' ಆತ ಅಚ್ಚರಿಯಿಂದ ಕೇಳಿದ.

''ಅದೇ ಮೋಜಿನ ಸಂಗತಿ'' ಆತ ಸಹಜವಾಗಿ ಹೇಳಲಾರಂಭಿಸಿದ. ನಿಜವಾಗಿ ಹೇಳಬೇಕೆಂದರೆ ನಿನ್ನೆ ಯಾರಾದರೂ ಅವನಿಗೆ ನಾಳೆ ನೀನೊಂದು ಹಳ್ಳಿಯಲ್ಲಿ ರಾತ್ರಿ ಕಳೆಯುತ್ತೀ ಎಂದು ಹೇಳಿದ್ದರೆ ಆತ ನಂಬುತ್ತಲೇ ಇರಲಿಲ್ಲ. ಆದರೆ ಬಸ್ಸಿನಲ್ಲಿ ಹೊರಟಾಗ ಹಿಂದಿನ ನಿಲ್ದಾಣದಲ್ಲಿ ಅವನ ಮನಸ್ಸಿನಲ್ಲೊಂದು ವಿಚಾರ ಮೂಡಿತು. ಆತನಿಗೆ ಅನಿಸಿತು - ಇಷ್ಟು ಸಮೀಪ ಬಂದಿರುವಾಗ ತನ್ನೂರನ್ನೊಮ್ಮೆ ಯಾಕೆ ನೋಡಬಾರದು? ಇಲ್ಲಿಗೆ ನೂರಾರು ಮೈಲುಗಳಿಂದ ಇನ್ನೆಂದು ಬರುವುದು ಸಾಧ್ಯವೋ ಯಾರಿಗೆ ಗೊತ್ತು: ಈ ವಿಚಾರ ಮೂಡಿದಾಕ್ಷಣ ಆತ ಹುಚ್ಚನಂತೆ ಪ್ರವಾಸವನ್ನು ಅರ್ಧಕ್ಕೆ ಬಿಟ್ಟು ಬಸ್ಸಿನಿಂದ ಕೆಳಗಿಳಿದು ಆ ಹಳ್ಳಿಗೆ ಹೋದ. ತಾನು ಆ ಹಳ್ಳಿಗೆ ಹೋಗಲೇ ಬಾರದಾಗಿತ್ತೆಂದು ಈಗ ಮಾತ್ರ ಅನಿಸತೊಡಗಿತು. ಈಗ ಆ ಹಳ್ಳಿಯಲ್ಲಿ ತನ್ನದೆನ್ನುವುದು ಏನೂ ಉಳಿದಿರಲಿಲ್ಲ. ಹೀಗಾಗಿ ಆತ ಅಲ್ಲಿ ಉಳಿದುಕೊಳ್ಳದೇ ಹಿಂದಿರುಗಿದ. ಆದರೆ ಸ್ವಲ್ಪದರಲ್ಲಿ ಕೊನೆ ಬಸ್ಸೂ ತಪ್ಪಿತು. ಈಗ ಮುಂಜಾನೆವರೆಗೆ ಬಸ್ಸಿಲ್ಲ. ಮಠಾಧೀಶ ಸುಮ್ಮನೆ ನಿಂತಿದ್ದ. ಆದರೆ ಅವನ ದೃಷ್ಟಿ ಮಾತ್ರ ಆತನ ಮೇಲೆಯೇ ನೆಟ್ಟಿತ್ತು. ಅವನು ಪುನಃ ಕೇಳಿದ ''ನಿಮ್ಮ ಮುಂದಿನ ವಿಚಾರವೇನು?''

ಏನು ಉತ್ತರಿಸಬೇಕೆಂಬುದು ತಕ್ಷಣ ಆತನಿಗೆ ಹೊಳೆಯಲಿಲ್ಲ. ಆತ ವಿಮನಸ್ಕದಿಂದ ಹೇಳಿದ. ''ನೋಡೋಣ. ಯಾವುದಾದರೂ ಬಸ್ಸು ಬರಬಹುದು ಈ ರಸ್ತೆಯಿಂದ. ಕೊನೆಯ ಪಕ್ಷ ಮುಂದಿನ ಬಸ್‌ಸ್ಟ್ಯಾಂಡಿಗೆ ಹೋಗಲು ಯಾವುದಾದರೂ ವಾಹನ ಸಿಕ್ಕರೂ ಸಾಕು!'' ಆತ ಹೀಗೆ ಹೇಳಿದ್ದರೂ ಆ ಮಾತಿನಲ್ಲಿ ಅಡಗಿದ ಅನಿಶ್ಚಿತತೆಯನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿತ್ತು ''ಹಾಗಾದರೆ ನೀವು ಹೀಗೇಕೆ ಮಾಡಬಾರದು?'' ಮಠಾಧೀಶ ಆತನನ್ನು ಸಮೀಪಿಸಿ ಹೇಳಲಾರಂಭಿಸಿದ. ''ಇಂದು ನೀವು ನಮ್ಮ ಮಠದಲ್ಲಿ ಉಳಿದುಕೊಳ್ಳಿ. ನಿಮ್ಮ ಸ್ನಾನ, ಊಟ, ಮಲಗುವ ವ್ಯವಸ್ಥೆಯನ್ನು ತುಂಬಾ ಅಚ್ಚುಕಟ್ಟಾಗಿ ಮಾಡುತ್ತೇವೆ. ಮಠ ಕೂಡಾ ಇಲ್ಲಿಂದ ಬಹಳ ದೂರವಿಲ್ಲ. ನೀವೀಗ ದಿನ್ನೆ ದಾಟಿ ರಸ್ತೆಗೆ ಬಂದಿದ್ದೀರಿ. ಈಗ ಈ ರಸ್ತೆ ದಾಟಿ ಎದುರಿನ ಆ ದಿನ್ನೆ ಏರಿದರೆ ಸಾಕು ನಮ್ಮ ಮಠ ಕಾಣಿಸುತ್ತದೆ. ಈಗ ಕತ್ತಲೆಯಾಗು

ತ್ತಿದೆ. ಇಲ್ಲದ್ದಿದ್ದರೆ ನಿಮಗೆ ಕಾಲ್ದಾರಿ ಸ್ಪಷ್ಟವಾಗಿ ಕಾಣಿಸಬಹುದಾಗಿತ್ತು''

ಆತ ಎದುರಿಗೆ ನೋಡಿದ. ದಿಣ್ಣೆ ಮುಳ್ಳುಗೂದಲಿನ ಶ್ವಪಚನಂತೆ ಮೈಚೆಲ್ಲಿ ಕೂತ ಹಾಗೆ ಕಾಣಿಸಿತು. ದಿಣ್ಣೆಯ ಹಾದಿ ಮೇಲೆ ನೀಲಗಿರಿಯ ಎತ್ತರವಾದ ವೃಕ್ಷಗಳಿದ್ದವು. ಆ ದಟ್ಟವಾದ ಹಸಿರಿನ ನಡುವೆ ಅವುಗಳ ನೀಳವಾದ ಬಿಳಿರೆಂಬೆಗಳು ನೆಲದಲ್ಲಿ ಹುದುಗಿದ ವಿಶಾಲವಾದ ಎಲುಬಿನಂತೆ ಕಾಣಿಸುತ್ತಿದ್ದವು. ''ಛೇ ನಿಮಗೇಕೆ ತೊಂದರೆ?'' ಆತ ಸಂಕೋಚದಿಂದ ಹೇಳಿದ. ''ನನ್ನಂತಹ ಆಕಸ್ಮಿಕ ವ್ಯಕ್ತಿಯ ಆಗಮನದಿಂದ ನಿಮಗೆಲ್ಲಾ ತುಂಬ ತೊಂದರೆಯಾಗಬಹುದು''.

ಮಠಾಧೀಶ ದೊಡ್ಡದಾಗಿ ನಕ್ಕ. ಮತ್ತು ಹೇಳಿದ - ''ನಮ್ಮ ಮಠದ ಬದುಕು ತುಂಬಾ ಕಠೋರ. ನೋಡಲು ಸರಳವಾಗಿದೆಯೇನೋ ಹೌದು. ಆದರೆ ಅದರ ಮೇಲಿಂದಲೇ ಮಠದ ಬಗ್ಗೆ ಕಲ್ಪನೆ ಕಟ್ಟಬೇಡಿ. ಯಾವುದೇ ಕ್ಷಣ ನಮ್ಮ ಮಠಕ್ಕೆ ನೂರು ಜನ ಬಂದರೂ ಅವರ ಊಟದ ವ್ಯವಸ್ಥೆ ಅಷ್ಟೇ ಅಲ್ಲ, ಮಲಗುವ ವ್ಯವಸ್ಥೆಯನ್ನೂ ನಾವು ಸಹಜವಾಗಿ ಮಾಡುತ್ತೇವೆ. ನೀವು ಒಮ್ಮೆ ಬಂದು ನೋಡಿ!''

ಇಂಥ ನಿರ್ಜನವಾದ ಸ್ಥಳದಲ್ಲಿ ಊಟದ ಬಗ್ಗೆ ಸಂಶಯಗೊಂಡ ಆತನಿಗೆ ಮಠಾಧೀಶನ ಮಾತಿನಲ್ಲಿ ನಂಬಿಕೆಯುಂಟಾಗಲಿಲ್ಲ. ಆದರೂ ಆತ ಹೆಚ್ಚು ವಿಚಾರ ಮಾಡದೇ ಮಠಾಧೀಶನನ್ನು ಹಿಂಬಾಲಿಸಿದ. ಮಠಾಧೀಶ ಆ ಹಾದಿಯಲ್ಲೂ ಪಟ್ಟ ಪಟ್ಟ ಎಂದು ಕಡಾವು ಬಾರಿಸುತ್ತ ವೇಗವಾಗಿ ಹೊರಟ. ಆದರೆ ಆತ ನಡೆಯುವಾಗ ಆಗಾಗ ಮುಗ್ಗರಿಸುತ್ತಿದ್ದ.

ಹಾಂ ಒಂದು ವಿಷಯ ಹೇಳೋದನ್ನೇ ಮರೆತುಬಿಟ್ಟೆ, ಮಠಾಧೀಶ ಹೇಳಿದ ''ಸ್ನಾನದ ಬಳಿಕ ನೀವು ನಮ್ಮ ಮಠದ ಬಟ್ಟೆ ತೊಡಬೇಕು, ಅಲ್ಲದೆ ನಮ್ಮ ಹತ್ತಿರ ಬೇರೆ ಏನಿದೆ ಹೇಳಿ? ಒಳಗಿನ ತುಂಡು ಬಟ್ಟೆ ಮೇಲೆ ಕಾವಿಯ ನೀಲುವಂಗಿ. ಒಂದು ದಿನದ ಮಟ್ಟಿಗೆ ನೀವು ಕಡಾವು ಹಾಕ್ತೀರಲ್ಲಾ?''

''ಛೇ, ಅದಕ್ಕಿಂತಲೂ ಬರಿಗಾಲಲ್ಲಿ ನಡೆಯೋದೇ ಮೇಲು'' ಆತ ನಕ್ಕು ಹೇಳಿದ. ''ಕಾವಿ ತೊಡುವುದಕ್ಕೆ ನನ್ನ ಅಭ್ಯಂತರವಿಲ್ಲ. ನಿಮ್ಮಂಥ ಕಾವಿ ಬಟ್ಟೆ ನನಗೆ ತುಂಬಾ ಇಷ್ಟ. ಆದರೆ ಕಡಾವು ಮಾತ್ರ ಬೇಡ. ಸಣ್ಣವನಿದ್ದಾಗ ನಾನೊಮ್ಮೆ ಕಡಾವು ಹಾಕಿದ್ದೆ. ಆಗ ಕಾಲೊಂದು ಕಡೆ ಕಡಾವು ಇನ್ನೊಂದು ಕಡೆಯಾಗಿ ನಡೆಯುವುದೇ ಕಷ್ಟವಾಗಿತ್ತು''!

ಇದನ್ನು ಕೇಳಿ ಮಠಾಧೀಶ ನಗಲಿಲ್ಲ. ಅವನು ಇಷ್ಟು ಹೇಳಿದ ''ಇದಕ್ಕಿಂತಲೂ ಉತ್ತಮವಾದ ಕಾವಿ ನಿಲುವಂಗಿ ಕೊಡುತ್ತೇವೆ'' ಅವರು ಪೊದೆಗಳ ತಿರುವು ದಾಟಿ ಮುಂದೆ ಬಂದರು. ಅಲ್ಲೊಂದು ಸಪಾಟಾದ ನೆಲವಿತ್ತು. ಅಲ್ಲಿ ಮಠಾಧೀಶ ನಿಂತಾಗ ಆಯಾಸಗೊಂಡ ಆತನೂ ನಿಂತ ಮತ್ತು ಅಚ್ಚರಿಯಿಂದ ಎದುರಿಗೆ ನೋಡಲಾರಂಭಿಸಿದ.

ದಟ್ಟವಾದ ಗಿಡ ಮರ ಪೊದೆಗಳಿಂದ ಕೂಡಿದ ಎತ್ತರವಾದ ಗುಡ್ಡ. ಅದರ ಅಡಿಯಲ್ಲೊಂದು ತಲೆಯೆತ್ತಿದ ಸುಂದರವಾದ ಮಠ. ಎತ್ತರ ಹಾಗೂ ಭವ್ಯವಾದ ಪ್ರವೇಶ ದ್ವಾರವುಳ್ಳ ಮಠದ ವಿಶಾಲವಾದ ಕಟ್ಟಡ. ಮಠದ ಹಿಂಬದಿಯಿಂದ ಗುಡ್ಡದ ತುದಿಯವರೆಗೆ ಚಾಚಿಕೊಂಡ ನಲ್ಲಿಗಳ ಬೃಹದಾಕಾರದ ನಾಲ್ಕು ಪೈಪ್ ಲಾಯಿನ್‌ಗಳು. ಅದರ ತುದಿಗೆ ಆಚ್ಛಾದಿಸಲ್ಪಟ್ಟ ಕಬ್ಬಿಣದ ಕೊಡೆಗಳು. ಆತನನ್ನು ಚಕಿತನನ್ನಾಗಿ ಮಾಡಿದ್ದು ಬೇರೊಂದು ವಿಷಯ. ಪ್ರವೇಶ ದ್ವಾರದಲ್ಲಿ ಪ್ರಖರವಾದ ವಿದ್ಯುತ್‌ದ್ವೀಪ ಉರಿಯುತ್ತಿತ್ತು. ಅಲ್ಲದೆ ಮಠದ ಗೋಪುರದ ತುತ್ತತುದಿಯಿಂದ ಅತ್ಯಂತ ಪ್ರಖರವಾದ, ತೇಜಸ್ವಿಯಾದ ಕೆಂಡದಂತಹ ಕೆಂಪು ಪ್ರಕಾಶ ಹೊರಹೊಮ್ಮುತ್ತಿತ್ತು. ಆ ಕೆಂಪು ಪ್ರಕಾಶದ ಪಕ್ಕದಲ್ಲಿ ತ್ರಿಕೋಣಾಕೃತಿಯ ಎರಡು ಧ್ವಜಗಳು ಫಡಫಡಿಸುತ್ತಿದ್ದವು. ಮತ್ತು ಅದರ ಕೆಳಗೆ ದೀಪಾಲಂಕಾರದಿಂದ ಜಗಜಗಿಸುತ್ತಿದ್ದ ಅಕ್ಷರ 'ತಪೋನಿವಾಸ'.

''ಇದೇ ನಮ್ಮ ಮಠ'' ಮಠಾಧೀಶ ಹೇಳಿದ. ''ಇದು ಹೊರಗಿನಿಂದ ಅಷ್ಟೇನೂ ಭವ್ಯವೆನಿಸು

ವುದಿಲ್ಲ. ಅಲ್ಲದೆ ಮಠದ ಒಳ ರಚನೆಯ ಕಲ್ಪನೆಯೂ ಇಲ್ಲಿಂದ ಬರಲಾರದು. ಆದರೂ ಸ್ವಾಮಿಗಳು ಸಾಕಷ್ಟು ವಿಚಾರ ಮಾಡಿಯೆ ಈ ಮಠ ಕಟ್ಟಿದ್ದಾರೆ.'' ನಿರ್ಜನವಾದ ಇಂತಹ ಗುಡ್ಡಗಾಡಿನಲ್ಲಿ ವಿದ್ಯುತ್‌ದೀಪ ಕಂಡಾಗ ಒಮ್ಮೆಲೆ ಆತನಿಗೆ ನಂಬಿಕೆಯಾಗಲಿಲ್ಲ. ಆತ ಬೆಕ್ಕಸಬೆರಗಾಗಿ ನೋಡುತ್ತಲೆ ನಿಂತ. ಇದನ್ನು ಅರಿತು ಮಠಾಧೀಶ ಹೇಳಿದ. ''ಸುಮಾರು ಇಪ್ಪತ್ತು-ಮೂವತ್ತು ಮೈಲುಗಳವರೆಗೆ ಇಲ್ಲಿ ವಿದ್ಯುತ್ ಇಲ್ಲ ಎನ್ನುವದೇನೋ ನಿಜ. ಆದರೆ ನಮ್ಮ ಮಠ ಸ್ವಯಂಪೂರ್ಣವಾದುದು. ವಿದ್ಯುತ್, ನೀರಿನ ಸರಬರಾಜು ಎಲ್ಲಾ ನಮ್ಮದೆ. ಅಲ್ಲಿ ಬಲಗಡೆ ನೋಡಿ. ಅಲ್ಲಿದ್ದ ಹೊಲವೆಲ್ಲಾ ಮಠದ್ದೆ. ನಮ್ಮಲ್ಲಿಯ ಕೆಲವರು ಅಲ್ಲಿ ದುಡಿಯುತ್ತಾರೆ. ಇದರಿಂದ ಆಹಾರದ ಸಮಸ್ಯೆ ಬಗೆಹರಿಯುತ್ತದೆ. ಒಂದು ವೇಳೆ ಪ್ರವೇಶದ್ವಾರ ಮುಚ್ಚಿದರೂ ಸಹ ಒಂದು ವರ್ಷಕ್ಕಾಗುವಷ್ಟು ಆಹಾರ ಧಾನ್ಯ ನಮ್ಮ ಹತ್ತಿರವಿದೆ.''

ಗಿಡಮರಗಳನ್ನು ದಾಟಿ ಮಠದ ಆವಾರದೊಳಗಿದ್ದ ಎತ್ತರವಾದ ಪೊದೆಯ ಬಳಿ ಬಂದ ಕೂಡಲೇ ಮಠಾಧೀಶ ಆತನನ್ನು ಒಮ್ಮೆಲೆ ನಿಲ್ಲುವಂತೆ ಸೂಚಿಸಿದ. ''ಈಗ ಈ ಬಾಗಿಲಿನಿಂದ ನನ್ನನ್ನು ಹಿಂಬಾಲಿಸಿ. ಈ ಬೇಲಿಗೆ ವಿದ್ಯುತ್ತಿನ ತಂತಿ ಹಾಕಲಾಗಿದೆ. ಹಗಲು ರಾತ್ರಿ ಅದರೊಳಗೆ ಕರೆಂಟು ಹರಿಯುತ್ತಿರುತ್ತದೆ. ಒಳಗೆ ಪ್ರವೇಶಿಸಲು ಇದೊಂದೇ ಮಾರ್ಗ. ಇದಕ್ಕೂ ಸದಾಕಾಲ ಕೀಲಿ ಇರುತ್ತದೆ.''

ಒಳಗೆ ಬಂದ ಮಠಾಧೀಶ ಕೊರಳಲ್ಲಿದ್ದ ಕೀಲಿಯನ್ನು ನಿಲುವಂಗಿಯೊಳಗೆ ತೂರಿಸಿ ಮಠ ಸಮೀಪಿಸಿದ. ಈಗ ಮಠ ಮಾಣಿಕ್ಯ ಹೊತ್ತ ಸರ್ಪದ ಹೆಡೆಯಂತೆ ಕಾಣಿಸುತ್ತಿತ್ತು. ಅದನ್ನು ನೋಡುತ್ತಲೇ ಬರುತ್ತಿದ್ದ ಆತ ಒಂದು ಕ್ಷಣ ಭಯದಿಂದ ಕಂಪಿಸಿದ. ನೋಡನೋಡುತ್ತಿದ್ದಂತೆ ಇಂಥದೇ ಕಾವಿ ನಿಲುವಂಗಿ ತೊಟ್ಟ ಅನೇಕ ಆಕೃತಿಗಳು ದಟ್ಟ ಗಿಡಮರಗಳ ಮರೆಯಿಂದ ಹೊರಬಿದ್ದು ಅವರನ್ನು ಹಿಂಬಾಲಿಸಲಾರಂಭಿಸಿದವು. ಅಷ್ಟ



''ನಿಮ್ಮ ಮಗಳನ್ನು ಪ್ರೀತಿಸ್ತೀನಿ'' ಎಂದು ನನ್ನ ಹೆಂಡ್ತಿ ಎದುರು ಹೇಳು ... ನಿನ್ನ ಧೈರ್ಯ ಮೆಚ್ತೀನಿ .....

ರಲ್ಲಿ ತಟ್ಟನೆ ನಿಂತ ಮಠಾಧೀಶ ಎಡಕ್ಕೆ ತಿರುಗಿ ಸನಿಹದಲ್ಲಿದ್ದ ತುಳಸಿಕಟ್ಟೆಯೊಂದರ ಎದುರು ನಿಂತ. ತುಳಸಿಕಟ್ಟೆಗೆ ನಮಸ್ಕರಿಸುತ್ತ ಮಠಾಧೀಶ ಹೇಳಿದ - ''ಇದು ಆದ್ಯ ಸ್ವಾಮಿಗಳ ಸಮಾಧಿ. ಉಳಿದ ಸ್ವಾಮಿಗಳ ವಿಶ್ರಾಂತಿ ಸ್ಥಳವು ಇದೇ'' ತಾನು ನಮಸ್ಕರಿಸಬೇಕೋ ಬೇಡವೋ ಎಂದು ವಿಚಾರ ಮಾಡುವಷ್ಟರಲ್ಲಿ ಮಠಾಧೀಶ ಹೊರಳಿ ಪ್ರವೇಶದ್ವಾರದ ಸನಿಹಕ್ಕೆ ಬಂದ. ಆತ ಅದನ್ನು ಸಮೀಪಿಸುವಷ್ಟರಲ್ಲಿ ಆ ದ್ವಾರ ತೆರೆದುಕೊಂಡಿತು. ಅವರು ಒಳಗೆ ಪ್ರವೇಶಿಸಿದಾಕ್ಷಣ ಪ್ರವೇಶ ದ್ವಾರದ ಮೇಲಿನ ಆ ತೇಜಸ್ವಿ ದೀಪ ಆರಿತು. ಹಿಂದೆ ಹಳದಿ ನೆರಳಿನಂತೆ ಬರುತ್ತಿರುವವರಲ್ಲಿ ಕೊನೆಯ ಇಬ್ಬರು ಆ ಬೃಹದಾಕಾರದ ಪ್ರವೇಶ ದ್ವಾರವನ್ನು ವ್ಯವಸ್ಥಿತವಾಗಿ ಮುಚ್ಚಿದಾಕ್ಷಣ ಹೊರಜಗತ್ತಿನ ಸಂಪರ್ಕ ಕಡಿದುಕೊಂಡಂತೆ ಮಠ ಒಮ್ಮೆಲೆ ಅಲಿಪ್ತವಾಯಿತು. ಮಠಾಧೀಶ ಒಳಗೆ ಬರುತ್ತಲೇ ಸುತ್ತಲಿನ ಹಳದಿ ಬೆಳಕಿನೊಳ

ಗಿಂದ ಶಿಷ್ಯರಿಬ್ಬರು ಎದುರಿಗೆ ಬಂದರು. ಮತ್ತು ಭರ್ಜರಿಯಾದ ಶಾಲೊಂದನ್ನು ಅವರ ದೇಹದ ಮೇಲೆ ಹೊದಿಸಿ ಮತ್ತೆ ಆ ಬೆಳಕಿನಲ್ಲಿ ಕರಗಿ ಹೋದರು.

ಮತ್ತಷ್ಟು ಗಾಬರಿಯಾದ ಆತ ಸುತ್ತಲೂ ನೋಡಿದ. ಆ ದಿವಾನಖಾನೆ ಎಷ್ಟು ವಿಶಾಲವಾಗಿತ್ತೆಂದರೆ ಅಲ್ಲಿದ್ದ ದೀಪದ ಬೆಳಕು ಕೊನೆವರೆಗೂ ಮುಟ್ಟುತ್ತಲೇ ಇರಲಿಲ್ಲ. ಆದರೆ ಅಂಥದೇ ಸಡಿಲಾದ ಪೋಷಾಕು ತೊಟ್ಟ ಅನೇಕ ಆಕೃತಿಗಳು ಒಂದೆಡೆ ಚೆಲ್ಲಿದ ನೆರಳಿನಂತೆ ಗೋಡೆಯ ಹತ್ತಿರ ಸ್ತಬ್ಧವಾಗಿ ನಿಂತಿದ್ದವು. ಆ ಶಿಷ್ಯರ ತಲೆ ಸಂಪೂರ್ಣ ಬೋಳಿಸಲಾಗಿತ್ತು.

''ನೀವು ಈ ಮಠದ ಪ್ರಮುಖ ವ್ಯಕ್ತಿಯೇ?'' ಆತ ನಮ್ರವಾಗಿ ಕೇಳಿದ. ಇಷ್ಟು ಹೊತ್ತಿನ ಭೆಟ್ಟಿಯ ನಂತರ ಮಠಾಧೀಶ ಮೊಟ್ಟ ಮೊದಲು ನಕ್ಕ. ಆತ ಒಬ್ಬ ಶಿಷ್ಯನಿಗೆ ಸಂಜ್ಞೆ ಮಾಡಿದಾಕ್ಷಣ ಆತ ಅತಿಥಿಗಾಗಿ ಆಸನವನ್ನು ತಂದಿಟ್ಟ. ಆದರೆ ಮಠಾಧೀಶ ಮಾತ್ರ ಹಾಗೇ ನಿಂತ ಮತ್ತು ಹೇಳಿದ. ''ಅಲ್ಲ, ನಾನು ಮಠದ ಪ್ರಮುಖ ವ್ಯಕ್ತಿಯಲ್ಲ. ಆದರೆ ಆದ್ಯ ಸ್ವಾಮಿಗಳು ನನ್ನ ಮೇಲಿನ ಪ್ರೇಮದಿಂದ ಈ ಜವಾಬ್ದಾರಿ ನೀಡಿದ್ದಾರೆ. ಆದ್ದರಿಂದ ಇಲ್ಲಿ ಪ್ರಮುಖ ಹಾಗೂ ಸೇವಕನೆಂಬ ಭೇದವೇ ಇಲ್ಲ. ಈ ಶಿಷ್ಯರೆಲ್ಲ ಆಮೇಲೆ ಬಂದರು. ನಾನು ಇವರಿಗಿಂತ ಮೊದಲೇ ಬಂದಿರುವುದೇನೋ ಹೌದು. ಆದರೆ ನಾನು ಸಹ ಅವರಂತಯೇ ಒಬ್ಬ ಸೇವಕ, ಅನುಯಾಯಿ, ಅಷ್ಟೆ.''

''ಹಾಗಾದರೆ ಸದ್ಯ ಈ ಮಠದ ಸ್ವಾಮಿ ಯಾರು, ಅವರೆಲ್ಲಿದ್ದಾರೆ?'' ಮಠಾಧೀಶ ಏನೂ ಉತ್ತರಿಸಲಿಲ್ಲ. ಕ್ಷಣಕಾಲ ಗೋಡೆ ಬದಿಗೆ ನಿಂತ ಅನುಯಾಯಿಗಳ ಚಲನವಲನ ಕಾಣಿಸಿತು. ಆದರೆ ಮತ್ತೆ ಅವರು ಗೋಡೆಯ ಮೇಲಿನ ಚಿತ್ರಗಳಂತೆ ಸ್ತಬ್ಧರಾದರು. ಮಠಾಧೀಶ ಹೇಳಿದ. ''ನಿಮಗೆ ಈ ವಿಷಯವನ್ನೆಲ್ಲ ಹೇಳುತ್ತೇನೆ. ಆದರೆ ನಿಮಗೆ ನಡೆದು ದಣಿವಾಗಿರಬೇಕು ಆದ್ದರಿಂದ ಮೊದಲು ಸ್ನಾನ ಮಾಡಿ. ಆಮೇಲೆ ಸ್ವಲ್ಪ ತಿಂಡಿ ತಿನ್ನಿ. ರಾತ್ರಿಯ ಊಟಕ್ಕಿನ್ನೂ ವೇಳೆ ಇದೆ. ಅನಂತರ ನಿಮಗೆಲ್ಲ ವಿಷಯ ಹೇಳುತ್ತೇನೆ. ಈ ಮೊದಲೇ ನಾನು ಹೇಳಿದ ನಿಯಮವನ್ನು ನೀವು ಪಾಲಿಸಬೇಕೆಂದು ವಿನಂತಿಸುತ್ತೇನೆ. ಮಠದೊಳಗೆ ನೀವು ಎಲ್ಲಿಯವರೆಗೆ ಇರುತ್ತೀರೋ ಅಲ್ಲಿಯವರೆಗೆ ಇಲ್ಲಿಯ ಬಟ್ಟೆಯನ್ನೇ ತೊಡಬೇಕು.''

''ನಾನು ಹಾಕಿಕೊಂಡ ಈ ಬಟ್ಟೆ ವಿನಾ ನನ್ನ ಹತ್ತಿರ ಬೇರೆ ಡ್ರೆಸ್ಸೇ ಇಲ್ಲ. ಅದು ಕೂಡ ಹೊಲಸಾಗಿದೆ.'' ಆತ ಹೇಳಿದ.

ಮಠಾಧೀಶ ಮತ್ತೆ ಸನ್ನೆ ಮಾಡಿದಾಕ್ಷಣ ಒಬ್ಬ ಶಿಷ್ಯ ಅವರ ಬಳಿಗೆ ಬಂದ. ಮತ್ತು ಬಾಗಿ ನಮಸ್ಕರಿಸಿದ. ಆತ ಆ ಶಿಷ್ಯನನ್ನು ಹಿಂಬಾಲಿಸಿದ. ಸ್ನಾನಗೃಹದಲ್ಲಿ ಆತ ಬಟ್ಟೆಯನ್ನೆಲ್ಲ ಕಳಚಿದ. ಮತ್ತು ಶಿಷ್ಯ ನೀಡಿದ ಹಳದಿ ಬಟ್ಟೆ ತೊಟ್ಟು ಸ್ನಾನಕ್ಕಿಳಿದ. ಸ್ನಾನಗೃಹ ನೋಡಿದ ಕೂಡಲೇ ಇದು ವಿರಕ್ತ ಸನ್ಯಾಸಿಗಳ ಸಲುವಾಗಿಯೇ ಇದ್ದಿರಬೇಕೆಂಬ ಭ್ರಮೆ ಕ್ಷಣಕಾಲ ಮೂಡಿತು. ಶಾವರಿನಿಂದ ಬಿಸಿ ನೀರಿನ ತುಂತುರು ಹನಿ ಮೈಮೇಲೆ ಬೀಳಲಾರಂಭಿಸಿದ ಕೂಡಲೇ ಮನಸ್ಸು ಸಂತೋಷದಿಂದ ಅರಳಿತು. ಮೈ ಒರೆಸಿಕೊಂಡರೂ ಸಹ ಸಾಬೂನಿನ ಉತ್ಕಟವಾದ ಸುವಾಸನೆ ಇನ್ನೂ ಹಾಗೆಯೇ ಇದ್ದದ್ದು ಆತನಿಗೆ ಅನಿಸಿತು. ಇಂಥ ವಿಲಾಸಿ ಜೀವನ ಸಹಜವಾಗಿ ಸಿಗುವ ಹಾಗಿದ್ದರೆ ಇಡೀ ಆಯುಷ್ಯವನ್ನೇ ಇಲ್ಲಿ ಕಳೆಯಲು ಯಾವ ಅಭ್ಯಂತರವೂ ಇಲ್ಲ!

ಆತ ಹೊರಗೆ ಬಂದ ತಕ್ಷಣ ಶಿಷ್ಯ ಶ್ರೀಗಂಧದ ಮಣೆ ಮೇಲಿಟ್ಟ ಬಟ್ಟೆಯನ್ನು ಮುಂದೆ ಹಿಡಿದಾಗ ಅಚ್ಚರಿಯಿಂದ ದಿಗ್ಮೂಢನಾದ. ಅದು ರೇಶ್ಮೆಯ ಅತ್ಯಂತ ಶ್ರೇಷ್ಠ ಬಟ್ಟೆಯಾಗಿತ್ತು. ಅಲ್ಲದೆ ರೇಶ್ಮೆ ನೂಲಿನ ಕುಸುರಿ ಮಾಡಲಾಗಿತ್ತು. ಆ ಸಡಿಲಾದ ಬಟ್ಟೆಯನ್ನು ತೊಟ್ಟಾಗ ಅದರ ಮೃದು ಸ್ಪರ್ಶದಿಂದ ಆತನ ದೇಹ ನವಿರೆದ್ದಿತು. ಆತ ಹಿಂದಿರುಗಿ ಬಂದಾಗ ಇನ್ನೊಬ್ಬ ಶಿಷ್ಯ ಮಖಮಲ್ಲಿನ-ಆಸನವನ್ನು ತಂದಿಟ್ಟ. ಆ ಆಸನದ ಮೇಲೆ ಕೂಡ್ರುವಷ್ಟರಲ್ಲಿ ಮತ್ತೊಬ್ಬ ಹಾಲಿನ ಬಟ್ಟಲು ಮತ್ತು ಹಣ್ಣು

ಗಳಿಂದ ತುಂಬಿದ ಬೆಳ್ಳಿಯ ಬಟ್ಟಲನ್ನು ತಂದು ಮುಂದಿಟ್ಟ. ಆತ ಪ್ರಸನ್ನಚಿತ್ತನಾಗಿ ಬಿಸಿ ಹಾಲು ಗುಟುಕರಿಸಿದಾಗ ರೇಶ್ಮೆಯ ಮೃದು ಸ್ಪರ್ಶಕ್ಕೆ ಸೂರ್ಯ ಕಿರಣ ಅರಳಿಕೊಂಡಂತೆ ಆತ ಪ್ರಫುಲ್ಲಿತಗೊಂಡ. ಆದರೆ ತಕ್ಷಣ ಎಚ್ಚರಗೊಂಡ ಮತ್ತು ಅಸ್ವಸ್ಥಗೊಂಡ. ಮಠಾಧೀಶನಂತೆ ಉಳಿದ ಶಿಷ್ಯರೂ ಆತನನ್ನೆ ನೇರವಾಗಿ ದಿಟ್ಟಿಸುತ್ತಾ ನಿಶ್ಚಲರಾಗಿ ನಿಂತಿದ್ದರು. ''ಆ ಸುವಾಸಿತ ಸ್ನಾನ, ಈ ವೈಭವಯುತ ಆಸನಗಳು, ರೇಶ್ಮೆ ಬಟ್ಟೆ, ಬೆಲೆಯುಳ್ಳ ಬೆಳ್ಳಿಯ ಪಾತ್ರೆಗಳು ಇದೆಲ್ಲ ನೀವು ಸ್ವೀಕರಿಸಿದ ವಿರಕ್ತ ಜೀವನಕ್ಕೆ ವಿಸಂಗತವಾದುದಲ್ಲವೇ?'' ಆತ ಸುತ್ತಲೂ ನೋಡುತ್ತ ಹೇಳಿದ.

''ನೀವಿಂದು ನಮ್ಮ ಅತಿಥಿ. ನಿಮ್ಮಂತಹ ಅತಿಥಿಗಳ ಸ್ವಾಗತಕ್ಕೆ ಇದೆಲ್ಲ ಹೆಚ್ಚೇನಲ್ಲ. ಬೆಳ್ಳಿ ಬಂಗಾರದ ಬಗ್ಗೆ ಆಸಕ್ತಿ ತೋರಿಸಬಾರದೆಂದು ನಮ್ಮ ಆದ್ಯ ಸ್ವಾಮಿ ತಿಳಿಸಿದ್ದಾರೆ. ಆದರೆ ಬೆಳ್ಳಿ ಬಂಗಾರ ಸಹಜವಾಗಿ ಸಿಕ್ಕಾಗ ಅದನ್ನು ತಿರಸ್ಕರಿಸಿ ಮಣ್ಣಿನ ಪಾತ್ರೆಗಾಗಿ ಆಗ್ರಹ ಮಾಡೋದು ಸಹ ಒಂದು ಪ್ರಕಾರದ ಅಹಂಕಾರ. ನಾನು ಆ ಮಟ್ಟಕ್ಕೆ ಏರಿಲ್ಲ. ಆದರೆ ನಾನು ಮಾತ್ರ ಮಣ್ಣಿನ ಪಾತ್ರೆಯಲ್ಲಿ ಆಹಾರ ಕೊಟ್ಟರೂ ಸಹ ಅಷ್ಟೇ ನಿರ್ವಿಕಾರವಾಗಿ ಸ್ವೀಕರಿಸುತ್ತೇನೆ. ಆದರೆ ನನ್ನ ವೈಯಕ್ತಿಕ ಅನಾಸಕ್ತಿಯನ್ನು ತೋರಿಸುವ ಸಲುವಾಗಿ ಎದುರಿಗೆ ಬಂದ ಬೆಳ್ಳಿ ಪಾತ್ರೆಯನ್ನು ಬದಿಗೆ ತಳ್ಳುವ ಕೆಲಸವನ್ನು ಬಹಿರಂಗವಾಗಿ ಮಾಡಲಾರೆ. ಅಲ್ಲದೆ ಇಂದಿನ ನಿಮ್ಮ ಅತಿಥಿ ಸತ್ಕಾರ ವೈಶಿಷ್ಟ್ಯಪೂರ್ಣವಾಗಿದೆ ಎಂಬುದನ್ನು ನಾನು ಒಪ್ಪುತ್ತೇನೆ.

ನೀವು ಆಗ ಪ್ರಶ್ನೆಯೊಂದನ್ನು ಕೇಳಿದಿರಿ, ಸ್ವಾಮಿ ಬಗ್ಗೆ. ಆ ವಿಷಯ ಈಗ ಹೇಳುತ್ತೇನೆ. ಇಲ್ಲಿಯ ಸ್ವಾಮಿಯ ಮಹಾಯಾತ್ರೆ ಪೂರ್ಣಗೊಂಡು ಮೂರು ತಿಂಗಳಾದವು. ನಾವು ಬರೋ ಕಾಲಕ್ಕೆ ಒಂದು ತುಳಸಿ ವೃಂದಾವನ ನೋಡಿದೆವಲ್ಲ, ಅಲ್ಲೇ ಅವರ ಸಮಾಧಿಯೂ ಇದೆ. ಈಗ ಸದ್ಯ ಆ ಪೀಠವನ್ನು ಯಾರೂ ಅಲಂಕರಿಸಿಲ್ಲ. ನೂರಾಎಂಟು ದಿವಸದೊಳಗೆ ಹೊಸ ಸ್ವಾಮಿಯನ್ನು ಪ್ರತಿಷ್ಠಾಪಿಸುವುದು ಮಠದ ಆದ್ಯ ಕರ್ತವ್ಯ. ನಾವು ಎಲ್ಲ ಕಡೆ ಅಲೆದಾಡಿ, ಸ್ವಾಮಿಯ ಪುನರಾವತಾರದ ಚಿಹ್ನೆ ಎಲ್ಲಾದರೂ ಕಂಡು ಬರುತ್ತನೋ ಎಂದು ಹಾದಿ ಕಾಯುತ್ತಿದ್ದೇವೆ.'' ಎಂದು ಮಠಾಧೀಶ ವಿವರಿಸಿದ.

''ಅಂದರೆ ಒಬ್ಬ ಸ್ವಾಮಿಯ ಮೃತ್ಯುವಿನ ನಂತರ ನಿಮ್ಮಲ್ಲಿ ಯಾರೂ ಸ್ವಾಮಿಗಳಾಗೋದಿಲ್ಲವೇ?'' ಆತ ಉತ್ಸುಕತೆಯಿಂದ ಕೇಳಿದ.

ಆಗ ಮಠಾಧೀಶ ಗೋಣು ಅಲುಗಾಡಿಸಿ ಇಲ್ಲವೆಂದು ಸೂಚಿಸಿ ಮತ್ತೆ ಹೇಳಿದ - ''ಅಷ್ಟೇ ಅಲ್ಲ ಸ್ವಾಮಿಗಳು ತಮ್ಮ ಉತ್ತರಾಧಿಕಾರಿಯನ್ನು ಸಹ ನೇಮಿಸುವ ಹಾಗಿಲ್ಲ. ಅದಕ್ಕಾಗಿಯೆ ನೂರಾಎಂಟು ದಿನಗಳ ಅವಧಿ ಇದೆ. ಆದ್ಯ ಸ್ವಾಮಿಗಳ ನಂತರ ಬಂದ ಎಲ್ಲ ಸ್ವಾಮಿಗಳ ಹೆಸರು 'ಶಿವಚರಣ' ಎಂದೇ ಇರುತ್ತದೆ. ಒಬ್ಬ ಸ್ವಾಮಿ ಒಕ್ಕಲಿಗನಾಗಿದ್ದ. ಹಲವಾರು ವರ್ಷ ಆಸ್ಪತ್ರೆಯಲ್ಲಿ ಬಿದ್ದಿದ್ದ. ಯಾರ ಆಧಾರವೂ ಇರಲಿಲ್ಲ. ಅವರಿಗೆ ಸ್ವಾಮಿಗಳಾಗುವ ಭಾಗ್ಯ ದೊರಕಿತು. ಅನಂತರ ಒಬ್ಬ ಸ್ವಾಮಿ ಮೊದಲು ಜನಿವಾರ, ಅತ್ತರ ಮಾರಾಟ ಮಾಡುತ್ತ ಅಲೆದಾಡುತ್ತಿದ್ದರು. ಮತ್ತೊಬ್ಬ ಸ್ವಾಮಿ ಕಾಶೀರಾಮೇಶ್ವರದ ಯಾತ್ರೆಗೆ ಹೊರಟ. ಜಟಾಧಾರಿ ವಿರಾಗಿಯಾಗಿದ್ದ ಅಂದರೆ ಸ್ವಾಮಿಯಾಗಲು ಮೊದಲು ಕಠಿಣ ತಪಸ್ಸು, ಕಠೋರ ವಿರಾಗ ಜೀವನ ನಡೆಸಬೇಕಾಗಿಲ್ಲ. ಸ್ವಾಮಿ ಎಲ್ಲಿ ಪ್ರಕಟಗೊಳ್ಳುತ್ತಾರೆ, ಯಾವ ಸ್ವರೂಪದಲ್ಲಿ ದರ್ಶನ ಕೊಡುತ್ತಾರೆ, ಇದು ನಮ್ಮಂಥ ಅಜ್ಞ ಅನುಯಾಯಿಗಳಿಗೆ ತಿಳಿಯುವುದು ಹೇಗೆ ಸಾಧ್ಯ? ನೀವು ಇಂದಿಲ್ಲಿ ಅತಿಥಿಯೆಂದು ಬಂದಿದ್ದೀರಿ. ಯಾರಿಗ್ಗೊತ್ತು, ಸ್ವಾಮಿ ನಿಮ್ಮ ರೂಪದಲ್ಲಿ ಬಂದಿರಲೂಬಹುದು. ಹೀಗಾಗಿ ಅವರಿಗೆ ನಾವು ಯಾವ ಆತಿಥ್ಯ ನೀಡುತ್ತೇವೋ ಅದನ್ನೇ ನಿಮಗೂ ನೀಡಲಾಗಿದೆ ಅಷ್ಟೆ''.

''ಆದರೆ ಕೊನೆಗೆ ಇಂಥ ಮನುಷ್ಯನೇ ನಿಮ್ಮ ಸ್ವಾಮಿಯ ಅವತಾರವೆಂದು ಹೇಗೆ ನಿರ್ಧರಿಸುತ್ತೀರಿ?''

ಮಠಾಧೀಶ ಒಮ್ಮೆಲೆ ವಿನಮ್ರಗೊಂಡು ಹೇಳಿದ. ''ನಿಮಗೆ ವಿಶ್ವಾಸ ಹುಟ್ಟಲಿಕ್ಕಿಲ್ಲ. ಇದು ಈಗಾಗಲೇ ನನಗೆ ತಿಳಿದಿದೆ. ಆದರೂ ಹೇಳು ತ್ತೇನೆ ಕೇಳಿ. ಸ್ವಾಮಿಗಳ ಧ್ಯಾನ ಮಾಡುವ ಆಸನ ಕೆಳಗಿನ ಕೋಣೆಯಲ್ಲಿದೆ. ಅದರ ಮೇಲೆ ಕೂತು ನಿಮ್ಮಂಥ ವ್ಯಕ್ತಿ ಕೈ ಮೇಲಕ್ಕೆತ್ತಿದಾಗ ಮಾಡಿದಾಗ ಅವರ ಬೆರಳಿನಿಂದ ತ್ರಿದಲ ಹುಟ್ಟುತ್ತದೆ.'' ಇದನ್ನು ಕೇಳಿ ಆತ ಅವಿಶ್ವಾಸದಿಂದ ಮಠಾಧೀಶ ನನ್ನೇ ನೋಡಲಾರಂಭಿಸಿದ.

ಅನಂತರ ಆತ ಮನಸ್ವೀ ನಕ್ಕ ಮತ್ತು ಹೇಳಿದ, ''ನೀವು ನನಗೆ ಕೊಟ್ಟ ಈ ಬಟ್ಟೆ ಕ್ಷಣ ಕಾಲ ಮರೆತುಬಿಡಿ. ಆದರೆ ಒಂದು ವಿಷಯ ಮಾತ್ರ ನಾನು ವಿಶ್ವಾಸದಿಂದ ಹೇಳಬಲ್ಲೆ. ನಿಮ್ಮ ಸ್ವಾಮಿಗಳ ಆಗಮನ ಬೇರೆ ಎಲ್ಲಿಂದಲಾದರೂ ಆಗಲಿ. ಆದರೆ ನನ್ನೊಳಗೆ ಮಾತ್ರ ಕಾಣಲಾರದು. ಇದನ್ನು ನಾನು ಖಾತ್ರಿಯಿಂದ ಹೇಳಬಲ್ಲೆ. ನನ್ನಂಥ ಮನುಷ್ಯ ಪ್ರತ್ಯಕ್ಷ ಬಿಲ್ವಪತ್ರದ ಗಿಡ ಹಚ್ಚಿದರೂ ಅದು ತಾಳಲಾರದು. ಅಂಥದರಲ್ಲಿ ನನ್ನ ಬೆರಳಿನಿಂದ ಬಿಲ್ವಪತ್ರ ತಂತಾನೇ ಹುಟ್ಟೋದು ಸಾಧ್ಯವೇ?''

ಈ ಮಾತು ಕೇಳಿ ಮಠಾಧೀಶ ನಗದೇ ಇದ್ದಾಗ ಆತ ನಾಚಿ ಸುಮ್ಮನಾದ. ಮಠಾಧೀಶ ಸನ್ನೆ ಮಾಡಿದಾಕ್ಷಣ ಒಬ್ಬ ಶಿಷ್ಯ ಆತನ ಸಮ್ಮುಖದ ಹಾಲಿನ ಪಾತ್ರೆ ಎತ್ತೊಯ್ದ.

ಮಠಾಧೀಶ ಹೇಳಿದ, ''ಊಟಕ್ಕಿನ್ನೂ ಸಾಕಷ್ಟು ಅವಕಾಶವಿದೆ. ಆದ್ದರಿಂದ ನಾನು ನಿಮಗೆ ತಪೋಮಂದಿರ ತೋರಿಸುತ್ತೇನೆ. ಈ ಮಂದಿರವನ್ನು ಸ್ವಾಮಿಗಳು ವಿಶಿಷ್ಟವಾದ ರೀತಿಯಲ್ಲಿ ಕಟ್ಟಿದ್ದಾರೆ. ಈ ಹೊರಭಾಗ ನಿಮಗೆ ವಿಶಾಲವಾಗಿ ಕಾಣಿಸಿದರೂ ಅದು ಮಂದಿರದ ಚಿಕ್ಕ ಭಾಗ. ಕೇವಲ ನಿಮ್ಮಂತಹ ಅತಿಥಿಗಳಿಗಾಗಿ ಮಾತ್ರ ಮೀಸಲಾಗಿಟ್ಟಿದ್ದೇವೆ. ಮಂದಿರದ ಮುಖ್ಯ ಭಾಗ ನೆಲದೊಳಗಿದೆ.''

ಇಲ್ಲಿಯವರೆಗೆ ಸುತ್ತಲೂ ಸ್ತಬ್ಧವಾಗಿ ನಿಂತ ಹಳದಿ ಆಕೃತಿಗಳು ಸಮ್ಮುಖದ ಕತ್ತಲೆಯಲ್ಲಿ ಕ್ರಮೇಣ ಕರಗಿದವು. ಈಗ ಅವರಿಬ್ಬರ ಹೊರತಾಗಿ ಆ ದಿವಾನಖಾನೆಯಲ್ಲಿ ಬೇರೆ ಯಾರೂ ಇರಲಿಲ್ಲ. ಈ ಮಂದಿರದ ರಚನೆಗೆ ಮುಖ್ಯ ಕಾರಣ ಹೀಗಿದೆ. ಆದ್ಯ ಸ್ವಾಮಿಗಳು ಕಾಲ್ನಡಿಗೆಯಿಂದ ತೀರ್ಥಕ್ಷೇತ್ರ ದರ್ಶನ ಮಾಡುತ್ತ ಶ್ರೀಶೈಲ ಪರ್ವತದ ಬಳಿಗೆ ಬಂದರು. ಮಸ್ತಕದಲ್ಲಿ ತೇಜಃಪುಂಜವಾದ ರತ್ನ ಹೊಳೆಯುವಂತೆ ಅಲ್ಲಿ ಅವರಿಗೆ ಸಾಕ್ಷಾತ್ಕಾರವಾಯಿತು. ಭವ್ಯಶಿಖರದಂತೆ ಕಾಣುವ ಓರ್ವ ಶುಭ್ರ ಜಟಾಧಾರಿ ಋಷಿ ಅವರಿಗೆ ಕಾಣಿಸಿದ ಮತ್ತು ಆ ಋಷಿ ಸ್ವಾಮಿಗಳಿಗೆ ಹೇಳಿದ - 'ಇಲ್ಲಿಂದ ಪಶ್ಚಿಮ ದಿಕ್ಕಿನ ಅರಣ್ಯಕ್ಕೆ ಹೋಗು. ಅಲ್ಲಿ ನಿನಗೊಂದು ಸಂಪೂರ್ಣ ಒಣಗಿದ ಮಾವಿನ ಮರ ಕಾಣಿಸುತ್ತದೆ. ಆ ಮರದ ರೆಂಬೆಗೆ ಜೇನುಗೂಡಿದೆ. ಈ ಗುರುತಿನ ಹಾದಿ ಹಿಡಿದು ನಿರ್ಭಯದಿಂದ ಬಲಕ್ಕೆ ತಿರುಗು. ಅಲ್ಲಿಯ ಗುಹೆಯಲ್ಲಿ ಧ್ಯಾನ ಮಾಡು. ನೀನು ಜ್ಞಾನಿಯಾಗುತ್ತಿ' ಸ್ವಾಮಿ ಆ ಗೊಂಡಾರಣ್ಯವನ್ನು ದಾಟಿ ಗುಹೆಯ ಸಮೀಪಕ್ಕೆ ಬಂದರು. ಗುಹೆಗೆ ಹಲವು ಮಾರ್ಗಗಳಿದ್ದವು. ಕೆಲವು ಕಡೆ ಸುಂತೂ ಅಂಬೆಗಾಲಿಡುತ್ತ ಹೋಗದೆ ಗತ್ಯಂತವಿರಲಿಲ್ಲ. ಗುಹೆಯ ನಟ್ಟನಡುವೆ ಬಂದಾಗ ಅಲ್ಲೊಂದು ಶಿವಲಿಂಗ ಕಾಣಿಸಿತು. ಅದೆಂಥ ಕಲ್ಲೋ ಯಾರಿಗೆ ಗೊತ್ತು. ಆದರೆ ಆ ಕಲ್ಲು ಮಾತ್ರ ಮೃದುವಾಗಿತ್ತು. ಮತ್ತು ಅದರ ಸುತ್ತಲೂ ಬಿಸಿ ನೀರಿನ ಕಾರಂಜಿ ಇತ್ತು. ಸ್ವಾಮಿಗಳು ಅಲ್ಲಿ ನಾಲ್ವತ್ತು ದಿನ ತಪಶ್ಚರ್ಯ ಮಾಡಿದರು. ಅಲ್ಲಿಂದ ಮರಳಿದ ಬಳಿಕ ಸ್ವಂತ ಧ್ಯಾನಕ್ಕಾಗಿ ಈ ಮಂದಿರವನ್ನು ಕಟ್ಟಿಸಿಕೊಂಡರು. ನೀವು ಕೆಲವೇ ಭಾಗ್ಯವಂತರಲ್ಲಿ ಒಬ್ಬರು. ಯಾಕೆಂದರೆ ಸ್ವಾಮಿಗಳಿದ್ದಾಗ ಯಾರೂ ಆ ಪೀಠದ ಹತ್ತಿರ ಹೋಗುವ ಹಾಗಿರಲಿಲ್ಲ. ಆದರೆ ಈಗ ಮಾತ್ರ ನೀವು ಆ ಎಲ್ಲ ಪರಿಸರವನ್ನು ನೋಡಬಹುದು. ನಡೆಯಿರಿ ಹೋಗೋಣ. ಬಾಗಿಲಿನ ಚೌಕಟ್ಟಿನಲ್ಲಿ ಮಾತ್ರ ಜಾಗರೂಕತೆಯಿಂದ ಕಾಲಿಡಬೇಕು. ಯಾಕೆಂದರೆ ನೆಲಮಾಳಿಗೆಗೆ ಹೋಗುವ ಮೆಟ್ಟಿಲುಗಳು ಇಲ್ಲಿಯೇ ಇವೆ.''

ಆತ ಒಂದು ಕ್ಷಣ ಅಲ್ಲೇ ನಿಂತ. ನೋಡನೋ

ಡುತ್ತಿದ್ದಂತೆ ಸುತ್ತಲಿನವರೆಲ್ಲ ಕರಗಿ ಸ್ತಬ್ದವಾದಂತೆ ಭಾಸವಾಯಿತು. ಆತ ದ್ವಾರದ ಕಡೆಗೆ ಹೊರಟಾಗ ಮಠಾಧೀಶ ಹಿಂಬಾಲಿಸಿದ. ಮತ್ತೆ ಆತ ಬರುವಾಗ ಹಳದಿ ದೀಪ ಆರಿಸಿದ. ತಕ್ಷಣ ಉಳಿದ ದಿವಾನಖಾನೆಯು ಅದೃಶ್ಯವಾಯಿತು. ಮೊದಲು ಅವರ ಹಿಂದಿನ ಬಲಿಷ್ಠವಾದ ಪ್ರವೇಶ ದ್ವಾರ ಮುಚ್ಚಿಕೊಂಡಿತು. ಈಗ ಸುತ್ತಲಿನ ಪ್ರಕಾಶ ಬಟ್ಟೆ ಝೂಡಿಸಿದಂತೆ ಇಲ್ಲವಾಯಿತು. ಯಾರೋ ತನ್ನನ್ನು ಸೆಳೆದುಕೊಳ್ಳುವಂತೆ, ಮುಂದೆ ಮುಂದೆ ದೂಡುತ್ತಿರುವಂತೆ ಆತನಿಗೆ ಭಾಸವಾಯಿತು. ಮಠಾಧೀಶ ಆತನನ್ನು ಬೃಹದಾಕಾರದ ನೆರಳಿನಂತೆ ಹಿಂಬಾಲಿಸುತ್ತಿದ್ದ. ಕೆಳಗಿಳಿಯುವ ಮೆಟ್ಟಲು ಗೋಲಾಕಾರವಾಗಿತ್ತು. ನಾಲ್ಕು ಸುತ್ತು ಹಾಕಿದ ಬಳಿಕ ತಡವರಿಸುತ್ತಿದ್ದ ಕಾಲಿಗೆ ಸಪಾಟಾದ ಜಾಗ ಸಿಕ್ಕಿತು. ಅಲ್ಲಿ ಮಠಾಧೀಶನ ಪರಿಚಿತ ಕೈ ಬಟನ್ ಒತ್ತಿದ ಕೂಡಲೇ ಚಕ್ಕನೆ ಅನೇಕ ನೀಲಿ ದೀಪಗಳು ಹೊತ್ತಿಕೊಂಡವು. ಆದರೆ ಒಮ್ಮೆಲೇ ಆತನ ಮನಸ್ಸು ಭೀತಿಯಿಂದ ತತ್ತರಿಸಿತು. ಆತ ಮುಖದ ಮೇಲಿನ ಬೆವರು ಒರೆಸಿಕೊಂಡ. ಈ ಪ್ರಾಕಾರ ತುಂಬ ವಿಶಾಲವಾಗಿತ್ತು. ಅದರ ಒಂದು ಬದಿಗೆ ಬಾಗಿಲುಗಳಿಲ್ಲದ ಇಕ್ಕಟ್ಟಾದ ಕೋಣೆಗಳಿದ್ದವು. ಅಲ್ಲಿಯ ನೀಲಿ ಬೆಳಕು ಕತ್ತಲೆಯೊಡನೆ ಬೆರೆತು ನಿರ್ಜೀವಗೊಂಡಿತ್ತು. ಕೆಳಗಿಳಿದು ಬಂದ. ಶಿಕ್ಷಕರು ಪ್ರತ್ಯೇಕವಾದ ಆ ಕೋಣೆಯ ಎದುರು ನಿಂತಿದ್ದರು. ಆ ನೀಲಿ ಬೆಳಕಿನಲ್ಲಿ ಅವರ ಬಟ್ಟೆ ಪಾಚಿಗಟ್ಟಿದಂತೆ ಹಸಿರಾಗಿ ಕಾಣಿಸುತ್ತಿತ್ತು. ಅವರ ರುಂಡಗಳು ನೀರಿನಲ್ಲಿ ತೇಲುವ ವಿಷಕಾರಿ ಗಡ್ಡೆಗಳಂತೆ ಗೋಚರಿಸುತ್ತಿದ್ದವು.

ಮಠಾಧೀಶ ಹೇಳಿದ - ''ಯಾವ ಕ್ಷಣಕ್ಕೆ ಬೇಕಾದ್ರೂ ನೂರು ಮಂದಿಯ ಊಟದ ವ್ಯವಸ್ಥೆ ಮಾಡಬಲ್ಲೆವು ಎಂದಾಗ ನೀವು ನಂಬಲಿಲ್ಲ. ಈಗ ನೋಡಿದಿರಲ್ಲ? ಶಿಷ್ಯರೆಲ್ಲ ಇಲ್ಲೇ ಇದ್ದಾರೆ. ಇದು ಅವರು ಚಿಂತನೆ ಮಾಡುವ ಸ್ಥಳ. ಆ ಕೋಣೆ ಅವರ ವಿಶ್ರಾಂತಿಯ ಸ್ಥಳ. ಎದುರಿಗೊಂದು ನೀಲಿ ದೀಪ ಕಾಣಿಸುತ್ತಿದೆಯಲ್ಲ, ಅದು




''ಎಷ್ಟು ಅರ್ಜೆಂಟ್ ಕೇಸಾದ್ರೂ, ನನ್ನ ಕರ್ಕೊಂಡು ಹೋಗೋ ರೀತಿ ಹೀಗೇನಯ್ಯಾ?''

ನನ್ನ ಮಠ. ಆದರೆ ನಾನಾಗಲೀ, ಈ ಶಿಷ್ಯರಾಗ
ಬೇರೆಯಲ್ಲ. ಮೈಮೇಲಿನ ಬಟ್ಟೆ ಮತ್ತು
ಊಟದ ತಟ್ಟೆ ಬಿಟ್ಟರೆ ನಮ್ಮ ಬಳಿ ಏನೂ ಇಲ್ಲ.
ಈಗ ನಾವು ಕೆಳಗಿಳಿದು ಹೋಗೋಣ.''

ಮತ್ತೆ ಅಷ್ಟೇ ಮೆಟ್ಟಲು ಇಳಿದ ಬಳಿ
ಮತ್ತೊಂದು ಪ್ರಶಸ್ತವಾದ ಸ್ಥಳ ಕಾಣಿಸಿತು
ಅದು ಹಸಿರು ಪ್ರಕಾಶದಲ್ಲಿ ಫಳಫಳಿಸುತ್ತಿತ್ತು
ಈಗ ಆತನಿಗೆ ಆಳವಾದ ನೀರಿನಲ್ಲಿ, ವನಸ್ಪ
ಬೆಳೆದ ತಳಭಾಗಕ್ಕೆ ಬಂದಂತೆ ಭಾಸವಾಯಿತು
ಮಠಾಧೀಶ ಹೇಳಿದ - ''ಇಲ್ಲಿಯ ಗೋಡೆಯ
ಬಾಗಿಲು ಸರಿಸಬಹುದು. ಇಲ್ಲಿ ಊಟದ ವ್ಯವಸ
ಮಾಡಲಾಗುತ್ತದೆ. ಈಗ ಕೆಲ ಶಿಷ್ಯರು ಆ ಕೆಲ
ದಲ್ಲಿ ತೊಡಗಿದ್ದಾರೆ. ಇಲ್ಲಿಂದ ಮತ್ತಷ್ಟು ಕೆಳಗಿ
ದರೆ ನೇರವಾಗಿ ಸ್ವಾಮಿಗಳ ಪೀಠದ ಸನಿಹ
ಹೋಗುತ್ತೇವೆ ಆ ಭಾಗ ಮಂದಿರದ ಆತ
ವಿದ್ದಂತೆ.''

ಆದರೆ ಅವರ ಮಾತಿನ ಕಡೆಗೆ ಆತನ ಲಕ್ಷ್ಯವಿ
ಲಿಲ್ಲ. ಆತ ತನ್ನ ವಿಚಾರದೊಳಗೇ ಮುಳುಗಿದ್ದ
ಮುಂದೆ ಹೋಗುವಂತೆ ಮಠಾಧೀಶ ಸ್ಪರ್ಶ
ಮಾಡಿ ಸೂಚಿಸಿದಾಗ ಆತ ಕ್ಷಣ ಕಾಲ ಗೊಂ
ಲಕ್ಕೆ ಬಿದ್ದ. ಈ ಪ್ರಾಕಾರದಲ್ಲಿ ಏನೋ ಕೊರ

ಇದ್ದ ಹಾಗೆ ಅನಿಸಿತು. ತಕ್ಷಣ ನೆನಪಾಯಿತು. ಅಲ್ಲಿ ಎಲ್ಲಿಯೂ ಕಿಡಕಿಗಳೇ ಇರಲಿಲ್ಲ.

''ನಾವು ಎಷ್ಟು ಕೆಳಗಿಳಿದಿದ್ದೇವೆ ಎಂದರೆ ಇಲ್ಲಿ ಕಿಡಕಿಗಳಿರುವುದು ಸಾಧ್ಯವೇ ಇಲ್ಲ'' ಆತ ಮಠಾಧೀಶನಿಗೆ ಹೇಳಿದ. ''ಆದರೆ ಇಲ್ಲಿ ಸ್ವಚ್ಛ ವಾದ ಗಾಳಿಯಿದೆಯಲ್ಲ ಅದು ಹೇಗೆ?'' ''ಸರಿಯಾದ ಪ್ರಶ್ನೆ ಕೇಳಿದಿರಿ. ನಮ್ಮ ಮಠದ ಈ ವಿಶೇಷವನ್ನು ನಾನು ಮರೆತು ಬಿಟ್ಟಿದ್ದೆ''. ಮಠಾಧೀಶ ಉತ್ಸಾಹದಿಂದ ಹೇಳಲಾರಂಭಿಸಿದ. ''ನೀವು ಮಠದೊಳಗೆ ಬರುವಾಗ ನಾಲ್ಕು ಪ್ರಚಂಡ ನಲ್ಲಿಗಳು ಗುಡ್ಡದ ತುದಿಯವರೆಗೂ ಚಾಚಿಕೊಂಡಿದ್ದನ್ನು ನೋಡಿರಬಹುದು. ಇಲ್ಲಿಯ ಪ್ರತಿಯೊಂದು ಪ್ರಾಕಾರಕ್ಕೆ ಒಂದೊಂದು ಪ್ರತ್ಯೇಕ ನಲ್ಲಿ ಇದೆ. ಅದರ ಬಾಯಿ ಇಲ್ಲಿಯ ನೆಲದ ಸನಿಹಕ್ಕೆ ತಂದು ಬಿಡಲಾಗಿದೆ. ಇದಕ್ಕೆ ಇನ್ನೊಂದೆರಡು ನಲ್ಲಿ ಜೋಡಿಸಿ ಪ್ರಾಕಾರದಲ್ಲಿ ಸಾಕಷ್ಟು ಗಾಳಿಯಾಡುವಂತೆ ವ್ಯವಸ್ಥೆ ಮಾಡಲಾಗಿದೆ. ಅಷ್ಟೇ ಅಲ್ಲ ಸ್ವಾಮಿಗಳ ಧ್ಯಾನ ಮಂದಿರಕ್ಕೂ ಒಂದು ಮುಖ್ಯ ನಲ್ಲಿ ಇದೆ. ಹಾಗೂ ಅದಕ್ಕೆ ಇನ್ನೆರಡು ನಲ್ಲಿಗಳನ್ನು ಜೋಡಿಸಲಾಗಿದೆ. ಅದಕ್ಕಾಗಿಯೇ ಆಳವಾದ ಈ ಸ್ಥಳದಲ್ಲಿಯೂ ಸಹ ಸಾಕಷ್ಟು ಸ್ವಚ್ಛಂದ ಗಾಳಿಯಾಡುತ್ತದೆ. ಹಗಲು ರಾತ್ರಿ ನೀಲಿ ದೀಪ ಉರಿಯುತ್ತಿರುವುದರಿಂದ ಪ್ರಕಾಶದ ಪ್ರಶ್ನೆಯಂತೂ ಉದ್ಭವಿಸುವುದೇ ಇಲ್ಲ.''

''ಒಂದು ವೇಳೆ ಗುಡ್ಡದ ತುದಿಯಲ್ಲಿದ್ದ ನಲ್ಲಿಯ ಬಾಯೊಳಗೆ ಗೂಗೆಯಂಥ ಪಕ್ಷಿ ಬಿದ್ದರೆ ಅಥವಾ ಕಲ್ಲು ಕುಸಿದರೆ ಏನು ಗತಿ?''

ಮಠಾಧೀಶ ಆತನನ್ನು ವಿಸ್ಮಯದಿಂದ ದಿಟ್ಟಿಸಿದ ಮತ್ತು ಕೌತುಕದಿಂದ ಹೇಳಿದ - ''ನಿಮ್ಮ ವಿಚಾರ ಆದ್ಯ ಸ್ವಾಮಿಗಳಂತೆಯೇ ಇದೆ. ಅವರೂ ಸಹ ನನಗೆ ಈ ಪ್ರಶ್ನೆಯನ್ನೇ ಕೇಳಿದ್ದರು. ಇನ್ನು ನಿಮ್ಮ ಪ್ರಶ್ನೆಗೆ ಉತ್ತರ. ನಾವು ಆ ನಲ್ಲಿಯ ಸುತ್ತಲೂ ಜಾಳಿಗೆಯನ್ನು ಹಾಕಿದ್ದೇವೆ. ಮೊದಲು ಸಣ್ಣ ರಂಧ್ರವುಳ್ಳ ಜಾಳಿಗೆಯನ್ನು ಹಾಕಿದ್ದೆವು. ಆದರೆ ಅದರಿಂದ ಗಾಳಿ ಯಥೇಚ್ಛವಾಗಿ ಬರಲಿಲ್ಲ. ಅದಕ್ಕಾಗಿ ಈಗ ದೊಡ್ಡ ರಂಧ್ರದ ಜಾಳಿಗೆ ಹಾಕಿದ್ದೇವೆ. ಇದಕ್ಕಿಂತಲೂ ಇನ್ನೊಂದು ವೈಶಿಷ್ಟ್ಯವೆಂದರೆ ನಲ್ಲಿಯ ತುದಿಯನ್ನು ಕಟ್ಟಿಗೆಯಿಂದ ನಿರ್ಮಿಸಲಾಗಿದ್ದು ಅದಕ್ಕೆ ತಾಮ್ರದ ಉಂಗುರವಿದೆ. ಆ ತಾಮ್ರದುಂಗುರ ಮತ್ತು ಜಾಳಿಗೆಯಲ್ಲಿ ಸೌಮ್ಯ ವಿದ್ಯುತ್‌ಪ್ರವಾಹ ಹರಿಸಿದ್ದೇವೆ. ಹೀಗಾಗಿ ಯಾವ ಅಪಾಯದ ಹೆದರಿಕೆಯೂ ಇಲ್ಲ. ಇಷ್ಟು ದಿವಸಗಳಲ್ಲಿ ಒಮ್ಮೆ ಮಾತ್ರ ಬಿರುಗಾಳಿಗೆ ಸಿಕ್ಕು ಜಾಳಿಗೆ ಕುಸಿದಿತ್ತು. ಇದನ್ನು ಬಿಟ್ಟರೆ ಬೇರೆ ಯಾವ ಅನಾಹುತವು ನಡೆದಿಲ್ಲ''!

ಈಗ ಕೆಳಗಿಳಿಯಲು ಮೆಟ್ಟಿಲುಗಳು ಇರಲಿಲ್ಲ. ಅಲ್ಲಿಯ ಗೋಡೆಗೆ ಚಿಕ್ಕದೊಂದು ಮಾಡು ಇತ್ತು. ಮತ್ತು ಅಲ್ಲಿ ನಡೆಯುವಾಗ ಸಾಕಷ್ಟು ಬಗ್ಗಿ ನಡೆಯಬೇಕಾಗುತ್ತಿತ್ತು. ಹಾಗೇ ನಡೆಯುವಾಗ ಆತನಿಗೆ ತುಂಬ ತೊಂದರೆಯಾಯಿತು. ಎರಡು ಬದಿಯ ಗೋಡೆಗಳು ಭುಜಕ್ಕೆ ತಗಲುವಷ್ಟು ಸಮೀಪವಿದ್ದವು. ಸ್ವಲ್ಪ ಕಾಲ ನಿಲ್ಲಲು ಅವಕಾಶ ಸಿಕ್ಕಾಗ ಆತನಿಗೆ ಹಾಯೆನಿಸಿತು. ಆದರೆ ಕೈ ಸಡಿಲು ಮಾಡಿಕೊಳ್ಳಲು ಮೇಲಕ್ಕೆತ್ತಿದಾಗ ಮುಷ್ಠಿ ಮೇಲ್ಛಾವಣಿಗೆ ಬಡಿದು ನೋವಾಯಿತು. ಆತನ ಪ್ರವಾಸ ಇಲ್ಲಿಗೆ ಮುಗಿಯಲಿಲ್ಲ. ಯಾಕೆಂದರೆ ಕೆಳಗೆ ಇನ್ನೊಂದು ಗುಹೆ ಇತ್ತು. ಬಾವಿಯಂಥ ಆಳವಾದ ಕಂದಕ. ಸುತ್ತಲಿನ ಚೌಕಾಕೃತಿಯ ಕಲ್ಲಿನ ಮೆಟ್ಟಿಲು ಆಳದವರೆಗೆ ಚಾಚಿಕೊಂಡಿತ್ತು. ಅದರ ಮೇಲೆ ಮೆಲ್ಲಗೆ ಕಾಲಿಟ್ಟು ಕೆಳಗಿಳಿಯಬೇಕು. ಅಲ್ಲಿ ಬಲಗಡೆ ಇನ್ನೊಂದು ವರ್ತುಲಾಕಾರದ ಕೋಣೆ. ಅದನ್ನು ತಲುಪಿದಾಗ ಮಠಾಧೀಶ ಹೇಳಿದ - ''ಈಗ ಇಲ್ಲಿ ಇಳಿಯುವಾಗ ಮಾತ್ರ ಕಾಳಜಿ ವಹಿಸಬೇಕು. ನಿಜವಾಗಿ ಹೇಳಬೇಕೆಂದರೆ ನೀವು ಹಿಂಗಾಲಿನಿಂದ ಇಳಿದರೆ ಹೆಚ್ಚು ಅನುಕೂಲ. ಹೇಗೆಂದು ನಾನು ನಿಮಗೆ ಮೊದಲು ತೋರಿಸುತ್ತೇನೆ''!

ಮಠಾಧೀಶ ಆತನ ಕಡೆ ಮುಖ ಮಾಡಿದ ಮತ್ತು ಆ ಇಕ್ಕಟ್ಟಾದ ವರ್ತುಲದೊಳಗೆ ಇಳಿಯಲಾರಂಭಿಸಿದ. ಆತ ಕಾಲ ಕೆಳಗೆ ಮೆಟ್ಟಿಲು ಹುಡು

ಕುತ್ತ ಗೋಡೆಯ ಆಧಾರ ಹಿಡಿಯುತ್ತ ಮುಳುಗುತ್ತ ಹೊರಟವನಂತೆ ಇಳಿದು ಅದೃಶ್ಯನಾದ. ಈಗ ಮಾತ್ರ ಆತನಿಗೆ ಅನಿಸಿತು; ಇದೆಲ್ಲ ತನ್ನಿಂದ ಸಾಧ್ಯವಿಲ್ಲ. ಅಷ್ಟೇ ಅಲ್ಲ ಇದು ತನಗೆ ಬೇಕಾಗಿಯೂ ಇಲ್ಲ! ಅಂಕು-ಡೊಂಕಾದ ತಿರುವು ಇಳಿಯುವಾಗ ದೇಹ ಮುದುಡಿ ಎಲುಬು ನೋಯುತ್ತಿತ್ತು. ಮತ್ತು ಆಯಾಸದಿಂದ ಮುಖದ ಮೇಲೆ ಬೆವರು ಕಾಣಿಸಿಕೊಂಡಿತು. ತಂಪು ಗಾಳಿಯಿಂದಾಗಿ ಉಸಿರಾಟ ಕಷ್ಟವೆನಿಸಿತು. ಆದರೆ ಕೆಳಗಿನಿಂದ ಮಠಾಧೀಶ ಕೂಗಿ ಕರೆದಾಗ ಅದೃಶ್ಯವಾದ ದಾರದಿಂದ ಎಳೆದವರಂತೆ ಆತ ಕೆಳಗಿಳಿಯಲಾರಂಭಿಸಿದ. ಇಳಿಯುವಾಗ ಎಲ್ಲೆಲ್ಲೋ ಕಾಲು ಬಿದ್ದು ಥರಥರ ಕಂಪಿಸುತ್ತ, ತೇಕುತ್ತ ಅಂತೂ ಹೇಗೋ ಕೆಳಗಿಳಿದು ಆತ ಮಠಾಧೀಶನ ಎದುರು ನಿಂತ.

ಅದು ಕೇವಲ ಇಬ್ಬರೇ ನಿಲ್ಲುವಂಥ ಇಕ್ಕಟ್ಟಾದ ಸ್ಥಳ. ಅಲ್ಲಿ ಒಬ್ಬನೇ ಹಾದು ಹೋಗುವಷ್ಟು ಮಾತ್ರ ಹಾದಿ ಇತ್ತು. ಒಳಭಾಗದಲ್ಲಿ ಕೆಂಪು ಮಖಮಲ್ಲಿನ ಆವರ್ಣವುಳ್ಳ ಒಂದು ಆಸನ ಮತ್ತು ಎದುರಿಗೊಂದು ಅಷ್ಟೇ ಎತ್ತರವಾದ ಮೇಜಿತ್ತು. ಮಠಾಧೀಶ ಅಲ್ಲಿದ್ದ ನೀಲಾಂಜನದ ಪುಟ್ಟ ದೀಪವನ್ನು ಆರಿಸಿದ. ಆದರೆ ದೊಡ್ಡ ದೀಪ ಹಚ್ಚಿದ ಕೂಡಲೇ ಒಮ್ಮೆಲೆ ಕೆಂಪು ಪ್ರಕಾಶ ಚಿಮ್ಮಿ ಇಡೀ ಧ್ಯಾನದ ಕೋಣೆಯ ತುಂಬ ಪಸರಿಸಿತು. ಆ ಪ್ರಖರ ಬೆಳಕಿಗೆ ಆತ ಒಂದು ಕ್ಷಣ ಹೆದರಿ ಕಣ್ಮುಚ್ಚಿದ. ಆತನಿಗೆ ಅನಿಸಿತ್ತು, ತಾನೊಂದು ಕಗ್ಗತ್ತಲೆಯಲ್ಲಿ ಇಳಿದು ವಿಶಾಲವಾದ ನೀಲಿ ಕೆಂಪು ರಕ್ತನಾಳದ ಮುಖಾಂತರ ನಡೆದು ಇಲ್ಲಿ ಬಂದು ತಲುಪಿದ್ದೇನೆ. ಈ ಕಲ್ಪನೆ ಎಷ್ಟು ಆಕಸ್ಮಿಕ ಮತ್ತು ವಿಲಕ್ಷಣವಾಗಿತ್ತೆಂದರೆ, ಅದರಿಂದ ಆತನ ಇಡೀ ದೇಹ ಥರಥರ ಕಂಪಿಸಲಾರಂಭಿಸಿತು. ''ಸ್ವಾಮಿಗಳು ಧ್ಯಾನ ಮಾಡುವ ಆಸನದ ಮೇಲೆ ನೀವು ಕುಳಿತು ನೋಡಿ'' ಮಠಾಧೀಶ ಹೇಳಿದ.

''ಬೆರಳಿನಿಂದ ತ್ರಿದಲ ಹುಟ್ಟುತ್ತದೋ ಇಲ್ಲವೋ ಎಂಬುದನ್ನು ನೋಡಲೇ?'' ಆತ ಚೇಷ್ಟೆಯಿಂದ ನುಡಿದ.

''ಅದಕ್ಕಾಗಿ ಅಂತ ಅಲ್ಲ ಈ ದುರ್ಲಭವಾದ ಯೋಗ ಎಲ್ಲರ ಪಾಲಿಗೆ ಬರುವುದಿಲ್ಲ'' ಮಠಾಧೀಶ ಸಮಾಧಾನ ಪಡಿಸುವ ಸ್ವರದಲ್ಲಿ ಹೇಳಿದ. ''ನೀವು ತುಂಬಾ ಬುದ್ಧಿವಂತರು ಎನ್ನುವುದು ಸ್ವಚ್ಛಂದ ಗಾಳಿ ಬಗ್ಗೆ ಕೇಳಿದಾಗಲೇ ಗೊತ್ತಾಯಿತು. ಆದರೆ ಒಂದು ವಿಷಯ ಮಾತ್ರ ನಿಮ್ಮ ಗಮನಕ್ಕೆ ಬಂದ ಹಾಗಿಲ್ಲ. ನೀವು ಆ ಆಸನದಲ್ಲಿ ಕೂತ ಮೇಲೆ ಬಹುಶಃ ನಿಮ್ಮ ಗಮನಕ್ಕೆ ಬರಬಹುದು''.

ಅತ್ಯಂತ ಇಕ್ಕಟ್ಟಾದ ಆ ವರ್ತುಲ ದಾಟಿ
ಕೋಣೆಯೊಳಗೆ ಹೋಗಲು ಆತನಿಗೆ ಮನಸ್ಸಿರ
ಲಿಲ್ಲ. ಈಗಂತೂ ಆತ ಮತ್ತಷ್ಟು ಕಂಪಿಸಲಾರಂ
ಭಿಸಿದ ಮತ್ತು ಒಳಗಿನ ಆ ಕೋಣೆ ತಿರುಗಣೆ
ಮಡುವಿನ ಪ್ರಕಾಶದಂತೆ ಭಾಸವಾಯಿತು. ಆದರೆ
ನಿದ್ದೆಯೊಳಗಿದ್ದವನಂತೆ ಆತ ಆ ಕಡೆ ಆಕರ್ಷಿತ
ಗೊಂಡು ಒಳಗೆ ಹೊಕ್ಕ. ಚೌಕೋನಾಕಾರದ ಆ
ಕೋಣೆ ಎಷ್ಟು ಕಿರಿದಾಗಿತ್ತೆಂದರೆ ಆತ ಆಸನದ
ಮೇಲೆ ಕೂತಾಕ್ಷಣ ಮೇಲ್ಛಾವಣಿ ಆತನನ್ನು
ಹೊಸಕಿ ಹಾಕಲು ಬಂದಂತೆ ತುಂಬಾ ಸಮೀಪಕ್ಕೆ
ಬಂದವು. ''ಈಗ ಬಿಲ್ವದ ಎಲೆ ಹುಟ್ಟುತ್ತದೋ
ಇಲ್ಲವೋ ಎಂದು ನೋಡಲು ಕೈ ಮೇಲಕ್ಕೆತ್ತು
ವಷ್ಟು ಸ್ಥಳ ಸಹ ಉಳಿದಿಲ್ಲ'' ಆತ ಹುಚ್ಚನಂತೆ
ನಕ್ಕು ಹೇಳಿದ.

ಅಷ್ಟರಲ್ಲಿ ಆತನ ಹಿಂದಿನ ಇಕ್ಕಟ್ಟಾದ ವರ್ತು
ಲದ ಆಚೆಗಿದ್ದ ಬಲಿಷ್ಠವಾದ ಒಂದು ಬಾಗಿಲ
ತಟ್ಟನೆ ಸರಿಯಿತು. ಆತ ಗಾಬರಿಯಾಗಿ ಹೊರ
ನೋಡಿದಾಗ ಆ ವರ್ತುಲ ಮುಚ್ಚಿದ ಕಣ್ಣು
ಗಳಂತೆ ಕಗ್ಗತ್ತಲೆಯಲ್ಲಿ ಮುಳುಗಿತು.

ಮಠಾಧೀಶ ಹೊರಗಿನಿಂದ ಹೇಳಿದ ''ಬಿಲ್ವ
ತ್ರಿದಲ ಹುಟ್ಟಬಹುದು ಅಥವಾ ಹುಟ್ಟಲಿಕ್ಕಿಲ್ಲ
ಆದರೆ ಒಂದು ವಿಷಯ ಮಾತ್ರ ನಿಮ್ಮ ಗಮನ
ಬಂದಿರಬಹುದು''. ಮಠಾಧೀಶನ ಮಾತು ಈ
ದೂರದಿಂದ ಎಲ್ಲಿಂದಲೋ ಬಂದ ಹಾಗೆ ಅನಿಸ
ತ್ತಿತ್ತು. ಅದು ಧಗಧಗಿಸುವ ಕೆಂಪು ಪ್ರಕಾಶ
ಮೇಲೆ ಉಗಿಯಂತೆ ತೇಲುತ್ತಿತ್ತು. ''ಅದೇನೆ
ದರೆ ನೀವೇ ಈಗ ಈ ಮಠದ ಸ್ವಾಮಿ. ಉಳಿ

ಸ್ವಾಮಿಗಳಂತೆ ನೀವು ಸಹ ನಿಮ್ಮ ಉಳಿದ ಆಯುಷ್ಯವನ್ನು ಇಲ್ಲೇ ಕಳೆಯಬೇಕಾಗುತ್ತದೆ. ಆದ್ದರಿಂದ ನಾನೀಗ ಹೇಳುವ ಮಾತನ್ನು ಲಕ್ಷ್ಯಗೊಟ್ಟು ಕೇಳಿ. ''ನೀವು ಕೂತ ಆಸನದ ಎಡ ಹಾಗೂ ಬಲಕ್ಕೆ ಶ್ರೀಗಂಧದ ಚೌಕಟ್ಟಿದೆ. ಎದುರಿನ ಚೌಕಟ್ಟು ನನ್ನ ಮಠದಿಂದಲೇ ಮೇಲಕ್ಕೆತ್ತಬಹುದು. ಅಲ್ಲಿ ನಿಮಗೆ ದಿನಕ್ಕೆರಡು ಸಲ ಅಲ್ಪೋಪಹಾರ ಹಾಗೂ ಆಯುಷ್ಯದಲ್ಲೇ ಕಂಡಿರದ ಸುಗ್ರಾಸಭೋಜನ ಇಡಲಾಗುವುದು. ನಿಮ್ಮೆದುರಿನ ಮೇಜಿನ ಕೆಳಗೆ ಒಂದು ಬೆಳ್ಳಿಯ ತಾಟು ಇದೆ. ಊಟ ಬಡಿಸಿದ ತಾಟು ಬಂದಾಗ ಆ ತಾಟು ಒಂದಕ್ಕೆ ಕಳಿಸಬೇಕು. ಕಳಿಸಿದ ಊಟ ನಿಶ್ಚಿತ ವೇಳೆಯುವರೆಗೆ ಮಾತ್ರ ನಿಮಗೆ ಕಾಯುತ್ತದೆ ಎಂಬುದು ಲಕ್ಷ್ಯದಲ್ಲಿರಲಿ. ಅಷ್ಟರೊಳಗೆ ನೀವು ಊಟ ಸೇವಿಸದಿದ್ದರೆ ಅದನ್ನು ಮೇಲಕ್ಕೆ ಎಳೆದುಕೊಳ್ಳಲಾಗುವುದು. ತಾಟು ಹಾಗೂ ಬಟ್ಟೆಯನ್ನು ತಾವೇ ಸ್ವತಃ ಸ್ವಚ್ಛಗೊಳಿಸುವ ಪದ್ಧತಿ ಆದ್ಯ ಸ್ವಾಮಿಯವರದಾಗಿತ್ತು. ಉಳಿದ ಎರಡು ಚೌಕಟ್ಟು-ಬಾಗಿಲು ಮಾತ್ರ ನಿಮಗಾಗಿಯೇ ಮೀಸಲಾಗಿದೆ. ಎಡಗಡೆಯ ಚೌಕಟ್ಟು ಮೇಲೆ ಸರಿಸಿದರೆ ನಿಮಗೆ ವರ್ತುಳಾಕಾರದ ಬಾಗಿಲು ಕಾಣಿಸುತ್ತದೆ. ಅಲ್ಲಿಂದ ನೀವು ಮುಂದೆ ಹೋದರೆ ನಿಮಗಲ್ಲೊಂದು ಸ್ನಾನಗೃಹ ಕಾಣಿಸುತ್ತದೆ. ಅಲ್ಲಿ ನಿಂತು ಸ್ನಾನ ಮಾಡಲಷ್ಟೆ ಸ್ಥಳವಿದೆ. ಮೇಲಿಂದ ಸದಾ ಕಾಲ ಬಿಸಿ ನೀರು ಪೂರೈಸಲಾಗುವುದು. ಅಲ್ಲಿಯ ಮಾಡಿನಲ್ಲಿ ಸುಗಂಧ ದ್ರವ್ಯ, ಸಾಬೂನು ಇತ್ಯಾದಿ ಸ್ನಾನಕ್ಕೆ ಬೇಕಾದ ವಸ್ತುಗಳಿವೆ. ಬಲಗಡೆಯುಲ್ಲಿರುವುದೇ ನಿಮ್ಮ ಮಲಗುವ ಕೋಣೆ. ಅಲ್ಲಿ ನೀವು ಸುಖವಾಗಿ ಮಲಗಬಹುದು. ಈ ದೀಪ ಮಾತ್ರ ಹಗಲಿರುಳು ಉರಿಯುತ್ತಲೇ ಇರುತ್ತದೆ. ಒಬ್ಬ ಸ್ವಾಮಿಯ ಸಾವಿನೊಂದಿಗೆ ಆತನ ತಾಟು, ಬಟ್ಟೆಗಳೆಲ್ಲ ಆತನೊಂದಿಗೆಯೇ ಹೊರಗೆ ಬರುತ್ತವೆ. ಇಷ್ಟೇ ಅಲ್ಲ, ಆತನ ಹಾಸಿಗೆಯನ್ನು ಸುಡಲಾಗುತ್ತದೆ. ಮತ್ತು ನನ್ನ ಅತ್ಯಂತ ವಿಶ್ವಾಸಿಕ ಶಿಷ್ಯನೊಬ್ಬ ಇಡೀ ಧ್ಯಾನ ಮಂದಿರವನ್ನು ತೊಳೆದು ಶುಭ್ರಗೊಳಿಸುತ್ತಾನೆ. ಆದ್ದರಿಂದ ನೀವು ಇಲ್ಲಿಯ ಎಲ್ಲ ವ್ಯವಸ್ಥೆಯನ್ನು ನಿಸ್ಸಂಕೋಚದಿಂದ ಉಪಭೋಗಿಸಬಹುದು. ಸದ್ಯಕ್ಕೆ ನಿಮಗೆ ಯಾವ ತೊಂದರೆಯೂ ಬರಲಾರದು. ಅದರ ಬಗ್ಗೆಯೂ ಆದ್ಯ ಸ್ವಾಮಿಗಳು ಸಾಕಷ್ಟು ವಿಚಾರ ಮಾಡಿದ್ದಾರೆ. ಸ್ನಾನ ಗೃಹದ ಸುಗಂಧ ದ್ರವ್ಯಗಳು ಮುಗಿಯಬಹುದು. ನಿಮ್ಮ ಬಟ್ಟೆಗಳು ಜೀರ್ಣವಾಗಬಹುದು. ಹೀಗಾಗಿ ಆದ್ಯ ಸ್ವಾಮಿಗಳ ಹುಟ್ಟು ಹಬ್ಬದ ಕಾಲಕ್ಕೆ ಈ ಎಲ್ಲ ವಸ್ತುಗಳನ್ನು ಸರಬರಾಜು ಮಾಡಬೇಕೆಂಬ ನಿಯಮವಿದೆ. ಆದರೆ ನಮಗೆ ಬಂದ ಅನುಭವವೆಂದರೆ ಇಲ್ಲಿ ಬಂದ ಸ್ವಾಮಿಗಳಿಗೆ ಆ ವಸ್ತುಗಳ ಬಗೆಗಿನ ಆಸಕ್ತಿ ಕಡಿಮೆಯಾಗುತ್ತದೆ. ಮೈಮೇಲಿನ ಬಟ್ಟೆ ಹರಿದು ಚಿಂದಿಯಾದರೂ ಅವರಿಗೆ ಅದರ ಬಗ್ಗೆ ಬೇಸರವಿಲ್ಲ. ಹೀಗಾಗಿ ನಾವು ಆ ನಿಯಮವನ್ನು ಬಿಟ್ಟಿದ್ದೇವೆ. ಆದರೆ ನಿಮಗೆ ಒಂದು ವೇಳೆ ಆವಶ್ಯಕತೆ ಅನಿಸಿದರೆ, ನೀವು ನಿಮ್ಮ ಹರಿದ ಬಟ್ಟೆಯನ್ನು ಊಟ ನೀಡುವ ಬುಟ್ಟಿಯಲ್ಲಿಟ್ಟು ಕಳಿಸಿದರೆ ನಮಗೆ ತಿಳಿಯುತ್ತದೆ.

ನಿಮಗೆ ಬರುವ ಅತಿ ದೊಡ್ಡ ಸಮಸ್ಯೆಯೆಂದರೆ ಬೆಳೆಯುವ ಉಗುರಿನದು. ಕೂದಲಿನಿಂದಂತೂ ನಿಮಗೆ ಯಾವ ತೊಂದರೆಯೂ ಬರಲಾರದು. ಆದ್ದರಿಂದ ನಿಮ್ಮ ಸ್ವಾಮಿತ್ವ ಮತ್ತಷ್ಟು ಪ್ರಖರಗೊಳ್ಳಬಹುದು. ಆದರೆ ನೀವಿಲ್ಲಿ ತಿರುಗಾಡುವಾಗ ಬಗ್ಗಿ, ತೆವಳುತ್ತ ಹೋಗಬೇಕಾಗುತ್ತದೆ. ಆಗ ಬೆಳೆದ ಉಗುರಿನಿಂದ ಸಾಕಷ್ಟು ತೊಂದರೆಯಾಗುತ್ತದೆ. ಅದರಿಂದ ಅದನ್ನು ಕತ್ತರಿಸುವ ವ್ಯವಸ್ಥೆ ಮಾಡಲಾಗಿದೆ. ಸ್ನಾನಗೃಹದಲ್ಲಿ ಆಳೆತ್ತರದ ಎರಡು ಮಾಡುಗಳಿವೆ. ಅದರೊಳಗೆ ಒಂದರಲ್ಲಿ ಅತ್ಯಂತ ಹರಿತವಾದ ಕಬ್ಬಿಣದ ಚಿಮ್ಮಟಿಗೆ ಇದೆ. ಅದು ಮೇಲೆ ಕೆಳಗೆ ಸರಿದಾಡುತ್ತದೆ. ಆದರೆ ಕೀಳಲು ಬರುವುದಿಲ್ಲ. ನಿಮ್ಮ ಸುಖ, ಆರೋಗ್ಯಕ್ಕಾಗಿ ನಾವು ಸಾಕಷ್ಟು ಕಾಳಜಿ ತೆಗೆದುಕೊಂಡಿದ್ದೇವೆ.''

ಶಾಂತವಾಗಿ ಬರುತ್ತಿದ್ದ ಆ ಶಬ್ದಗಳೆಲ್ಲ ತನ್ನನ್ನು ಉದ್ದೇಶಿಸಿ ಹೇಳಲಾಗುತ್ತಿದೆಯೇ ಎಂಬ ಭ್ರಮೆ ಆತನಿಗೆ ಆಗದಷ್ಟು ಆ ದೇಹ ಜಡವಾ

ಗಿತ್ತು. ಆದರೆ ಮೊದಲ ಆಘಾತ ಸೋರಿದ ಬಳಿಕ ಆತ ದಿಗ್ಮೂಢನಾದ. ಮತ್ತು ಮುಂದೆ ಬಾಗಿ ಕಬ್ಬಿಣದ ಬಲಿಷ್ಠ ಬಾಗಿಲನ್ನು ಜೋರಾಗಿ ಬಡಿಯುತ್ತ ಕೂಗಲಾರಂಭಿಸಿದ.

''ಈಗ ಈ ಮೂರ್ಖ ಹಾಸ್ಯ ಸಾಕು ಮಾಡಿ. ಈಗ ಬಾಗಿಲು ತೆರೆದು ತಕ್ಷಣ ನನ್ನನ್ನು ಈ ಪಂಜರದಿಂದ ಪಾರು ಮಾಡಿ'' ಆತ ಆವೇಶದಿಂದ ಬಾಗಿಲು ಬಡಿಯಲು ಮೇಜು ಎತ್ತುವ ಪ್ರಯತ್ನ ಮಾಡಿದ. ಅದು ನಿಷ್ಫಲಗೊಂಡಾಗ ಮತ್ತೆ ಬಾಗಿಲು ಬಡಿಯಲಾರಂಭಿಸಿದ.

''ಸ್ವಾಮಿ ನಾವು ಎಲ್ಲ ವಿಷಯದ ಬಗ್ಗೆ ಸಾಕಷ್ಟು ಯೋಚಿಸಿದ್ದೇವೆ'' ಮಠಾಧೀಶ ಹೇಳಿದ. ''ನೀವು ಆ ಮೇಜು ಅಲುಗಾಡಿಸುವುದು ಸಾಧ್ಯವಿಲ್ಲ. ಯಾಕೆಂದರೆ ಅದಕ್ಕೆ ಮೊಳೆ ಬಡಿದು ನೆಲಕ್ಕೆ ಜೋಡಿಸಲಾಗಿದೆ. ಒಂದು ವೇಳೆ ಅದು ಕಿತ್ತರೂ ಅದರಿಂದ ನಿಮಗೇನು ಲಾಭ? ಅಲ್ಲಿ ಕೇವಲ ಶಾಂತವಾಗಿ ಕೂತು ಧ್ಯಾನ ಮಾಡುವಷ್ಟೇ ಸ್ಥಳವಿದೆ. ನಿರ್ಲಕ್ಷ್ಯತನದಿಂದ ಎದ್ದು ನಿಂತರೂ ಛಾವಣಿ ತಲೆಗೆ ಬಡಿಯುತ್ತದೆ. ವರ್ತುಳದಿಂದ ಸಾಕಷ್ಟು ದೂರವಿದ್ದ ಆ ಬಾಗಿಲ ಮೇಲೆ ಮೇಜನಿಂದ ಬಡಿಯುವ ಪ್ರಯತ್ನ ಮಾಡಿದರೂ ಏನೂ ಪ್ರಯೋಜನವಿಲ್ಲ. ಕಬ್ಬಿಣದ ಬಾಗಿಲ ಮೇಲೆ ಆಘಾತ ಮಾಡಿ ಮಾಡಿ ನಿಮ್ಮ ಶಕ್ತಿಯನ್ನು ಹ್ರಾಸ ಮಾಡಿಕೊಳ್ಳುತ್ತಿದ್ದೀರಿ. ಆದರೆ ಬಾಗಿಲು ಮಾತ್ರ ನಾಲ್ಕಿಂಚಿನಷ್ಟು ಬಲಿಷ್ಠವಾಗಿದೆ. ನಿಮ್ಮ ಸುತ್ತಲಿನ ಗೋಡೆ ಆರು ಅಡಿಯಷ್ಟು ದಪ್ಪವಾಗಿದೆ. ಎಲ್ಲ ಕಡೆ ಅಖಂಡ ಫರ್ಶಿ ಕಲ್ಲು ಉಪಯೋಗಿಸಲಾಗಿದೆ. ಮತ್ತು ಸುತ್ತಲಿನ ಜಾಗ ಸಾಕಷ್ಟು ಕಿರಿದಾಗಿರುವುದರಿಂದ ನೀವಾದರೂ ಏಕೆ ತ್ರಸ್ತಗೊಳ್ಳುತ್ತೀರಿ? ಒಂದು ಚೌರಸ್ ಮೈಲೂ ಅಷ್ಟೆ, ಒಂದು ಚೌರಸ್ ಫೂಟು ಅಷ್ಟೆ. ತಿರುಗಾಡುವಾಗ ಶರೀರ ವಿಸ್ತಾರಕ್ಕೆ ತಕ್ಕಂತೆ ಬೆಳೆಯುವುದೂ ಇಲ್ಲ ಕಿರಿದಾಗುವುದೂ ಇಲ್ಲ. ಅಂದ ಮೇಲೆ ದೇಹ ಓಡಾಡುವುದಕ್ಕಿಂತಲೂ ಹೆಚ್ಚು ಜಾಗ ಇರುವುದು ಮೂರ್ಖತನವಲ್ಲವೇ? ಅಲ್ಲದೆ ವಿಶ್ವವ್ಯಾಪಿಯಾದ ಆತ್ಮ ಈ



ನಿಮಗೆ ಹುಚ್ಚನ ಪಾತ್ರ ಮಾಡೋದ್ಕ್ಯೂ ಬರಲ್ವಲ್ಲ?

ಬೇಡಬಿಡಿ ..... ಹೀರೋ ಪಾತ್ರವನ್ನೇ ಕೊಡಿ

ಸಾರ್!

ದೇಹದಲ್ಲಿ ಸುಖವಾಗಿರುತ್ತದೆ. ಎಲ್ಲಿ ಅದು ಸ
ಜವಾಗಿ ಓಡಾಡುತ್ತದೋ, ಅಂಥಲ್ಲಿ ನಿಮ
ಯಾವ ತೊಂದರೆಯೂ ಬರಲಾರದು
ಅಲ್ಲವೇ? ಈಗ ನಾನಿಲ್ಲಿಂದ ಹೋದ ಬಳ
ನೀವು ಯಾರೊಂದಿಗೂ ಮಾತನಾಡುವುದ
ಸಾಧ್ಯವಿಲ್ಲ. ಆದ್ದರಿಂದ ನಿಮಗೇನಾದರೂ ಕೇಳ
ವುದಿದ್ದರೆ ಈಗಲೇ ಕೇಳಿ. ಈಗ ನಿಮಗೆ ಹೇ
ಸೂರ್ಯಪ್ರಕಾಶ ಕಾಣಿಸುವುದಿಲ್ಲವೋ, ಅದ
ರೀತಿ ಮನುಷ್ಯನ ಧ್ವನಿಯಷ್ಟೇ ಅಲ್ಲ, ಆತ
ಹೆಜ್ಜೆಯ ಸಪ್ಪಳವೂ ನಿಮಗೆ ಕೇಳಿಸಲಾರದು.''

ಆತ ಥಟ್ಟನೆ ಆಸನದ ಮೇಲೆ ಕುಳಿತ. ಮತ್ತ
ಆತನ ಕಣ್ಣು ನಿರ್ಜೀವವಾಯಿತು. ಸುತ್ತಲ
ಕೆಂಪು ಆಳ ಪ್ರಕಾಶ, ಅದರ ಮೇಲೆ ತೇಲುವ ಸ್ವ
ಆದರೆ ನಿರ್ವಿಕಾರವಾದ ಧ್ವನಿ, ಎರಡು ಕೈಗಳ
ಶಾಂತವಾಗಿ ಅಂಟಿದ, ಮತ್ತು ತನ್ನನ್ನು ಮೊ
ಹಾಕಲು ಸನ್ನೆಯ ಹಾದಿ ಕಾಯುತ್ತಿರುವ ಗೋ
- ಇದೆಲ್ಲ ಕೇವಲ ಕನಸು, ನಾನು ಚೀರಿದಾಕ್ಷ
ಇದೆಲ್ಲ ಅದೃಶ್ಯವಾಗಬಹುದು, ಎದೆಯ ಭಾ
ಕರಗಬಹುದು ಎಂದು ಒಮ್ಮೆಲೆ ಅನಿಸಿತು. ಆದ
ಜಡವಾದ ಗಂಟಲಿನಿಂದ ಧ್ವನಿ ಹೊರಬೀ
ವುದು ಎಂದು - ಎಂದು?

''ಆದರೆ ಇಂಥಲ್ಲಿ ನಾನು ಏಕಾಕಿಯಾಗಿ ಎಲ್ಲಿ ಮನುಷ್ಯರ ಸಂಪರ್ಕವಿಲ್ಲವೋ, ಸೂರ್ಯಪ್ರಕಾಶವಿಲ್ಲವೊ ಅಂಥಲ್ಲಿ ನಾನೇನು ಮಾಡಲಿ, ಹೇಗೆ ಬದುಕಲಿ? ನೀವೇಕೆ ನನ್ನನ್ನು ಇಲ್ಲಿ ಶಾಶ್ವತವಾಗಿ ಬಂಧಿಸಿಟ್ಟಿದ್ದೀರಿ?'' ಆತ ಆರ್ತನಾಗಿ ಕೇಳಿದ.

''ನೀವು ಮೊಟ್ಟಮೊದಲು ಇದೇ ಪ್ರಶ್ನೆಯನ್ನು ಕೇಳುತ್ತೀರೆಂದು ಹಿಂದಿನ ಅನುಭವದಿಂದ ನನಗನಿಸಿತ್ತು'' ಮಠಾಧೀಶ ನುಡಿದ. ''ಬೇರೆಯವರಿಗೆ ಈ ಪ್ರಶ್ನೆ ಕೃತಘ್ನತನದ್ದು ಎನಿಸಬಹುದಾಗಿತ್ತು. ಸ್ವಾಮಿಯೆಂಬ ಕಾರಣಕ್ಕಾಗಿ ನಾನು ನಿಮ್ಮ ಸಮ್ಮುಖದಲ್ಲಿ ನಮ್ರನಾಗಿದ್ದೇನೆ. ಆದರೆ ನನ್ನ ಅಪಾರ ಅನುಭವದ ಮೇಲಿನಿಂದ ನಾನು ನಿಮ್ಮನ್ನು 'ನೀನು' ಎಂದು ಸಂಬೋಧಿಸುವಷ್ಟು ಕಿರಿಯರು. ನೀನು ಹೊರಗಿದ್ದು ಏನು ಮಾಡುತ್ತಿ? ಹೊಟ್ಟೆಚೀಲ ತುಂಬಲು ಗುಲಾಮನಂತೆ ದುಡಿಯುತ್ತಿದ್ದೆ. ತುಂಡು ನೆಲದ ಮೇಲೆ ಮಲಗುತ್ತಿದ್ದೆ. ನಿನಗಿಲ್ಲಿ ಊಟ ಸುಲಭವಾಗಿ ಸಿಗುತ್ತದೆ. ಮಲಗಲು ಮಕಮಲ್ಲಿನ ಶಯ್ಯೆ ಇದೆ. ನೀನು ಈ ತುಂಡು ನೆಲದಲ್ಲಿ ಯಾರ ಗುಲಾಮನೂ ಅಲ್ಲ. ಅಂದ ಮೇಲೆ ನಿನಗಿದಕ್ಕಿಂತಲೂ ಮತ್ತೇನು ಬೇಕು? ನಾವೇನೂ ನಿನ್ನನ್ನು ಕೊಂದು ಬಲಿ ಕೊಡುವುದಿಲ್ಲ. ನೀನು ಹೊರಗೆಷ್ಟು ದಿನ ಬದುಕಿರುತ್ತಿದ್ದೆಯೋ ಅಷ್ಟೇ ದಿನ ಇಲ್ಲೂ ಬದುಕಿರುತ್ತಿ. ನಿನ್ನ ಸುಖಕ್ಕಾಗಿ ನಾವು ಸಾಕಷ್ಟು ಕಾಳಜಿ ತೆಗೆದುಕೊಂಡಿದ್ದೇವೆ. ಸ್ವಲ್ಪ ವಿಚಾರ ಮಾಡು, ನಿನ್ನ ಆಯುಷ್ಯದಲ್ಲಿ ನಿನಗಾಗಿ ಯಾರಾದರೂ ಇಷ್ಟೆಲ್ಲ ಕಾಳಜಿ ತೆಗೆದುಕೊಂಡಿದ್ದಾರೇನು?

ಇನ್ನೊಂದು ವಿಷಯ, ನೀನಿಲ್ಲಿ ಇರಲು ಪ್ರಾರಂಭಿಸಿದ ಬಳಿಕ ಹೊರಜಗತ್ತಿನ ಧ್ವನಿಯು ಕೂಡ ನಿನಗೆ ಕೇಳಿಸಲಾರದು. ನಿನ್ನ ಮನಸ್ಸಿನಲ್ಲಿದ್ದ ಹಳೇ ನೆನಪುಗಳ ಪ್ರಪಂಚ ಕ್ರಮೇಣ ಮರೆತು ಹೋಗುತ್ತದೆ. ಹೊರಗೆ ಮಹಾಪೂರ ಬರಲಿ ಅಥವಾ ಮಹಾಯುದ್ಧವೇ ನಡೆಯಲಿ ನಿನಗೆ ಆ ಆಪತ್ತಿನ ಸ್ಪರ್ಶವೂ ಆಗಲಾರದು. ಉಳಿದವರನ್ನು ಕಾಡುವ ನೋವು, ವೇದನೆ ನಿನ್ನನ್ನು ಕಾಡುವುದಿಲ್ಲ. ಯಾವ ದುಃಖ ತಪ್ಪಿಸುವ ಸಾಮರ್ಥ್ಯ ನಿನ್ನಲ್ಲಿಲ್ಲವೋ, ಯಾವುದನ್ನು ಮರೆಯುವುದು ಸಾಧ್ಯವಿಲ್ಲವೋ, ಅಂಥ ದುಃಖವನ್ನು ಅಸಹಾಯತನದಿಂದ ನೋಡುತ್ತ ಆಯುಷ್ಯ ಕಳೆಯುವುದು, ಇದೊಂದು ಕಠಿಣ ಶಿಕ್ಷೆಯೆಂದು ನಿನಗೆಂದೂ ಅನಿಸಲಿಲ್ಲವೇ? ಯಾವುದನ್ನು ತಪ್ಪಿಸುವುದು ಸಾಧ್ಯವಿಲ್ಲವೋ, ಅದನ್ನು ಸಂಪೂರ್ಣ ಮರೆಯುವಂತೆ ಮಾಡುವುದು ಮನುಷ್ಯನಿಗೆ ಸಾಧ್ಯವೇ? ಆದ್ದರಿಂದ ಎಲ್ಲ ಸುಖ ಸೌಲಭ್ಯಗಳಿಂದ ಕೂಡಿದ ಈ ಅಲಿಪ್ತತೆ ಅನಾಯಾಸವಾಗಿ ನಿನಗೆ ಸಿಕ್ಕಾಗ ನೀನು ರೋಸಿ ಅದನ್ನು ತಿರಸ್ಕರಿಸುತ್ತೀಯಾ?

ಅಲ್ಲದೆ ಮಾನವನಿಗೆ ಉಳಿದ ಮನುಷ್ಯರ ಬಗ್ಗೆ ಇರುವ ಆಕರ್ಷಣೆ ಕೇವಲ ಭ್ರಾಮಕವಾಗಿರುತ್ತದೆ. ಅನಿವಾರ್ಯದಿಂದ ಉಳಿದ ವಿಷಯಗಳ ಜೊತೆಗೆ ಆಯುಷ್ಯ ಕಳೆಯಬೇಕಾದ ಹಣೆಬರಹ ನಮ್ಮದಾಗಿರುವುದರಿಂದ ನಾವು ಅದರೊಂದಿಗೆ ಸಂಬಂಧ ಜೋಡಿಸುತ್ತೇವೆ ಅಷ್ಟೆ. ನಿಜವಾಗಿ ಅದು ನಮ್ಮ ಅಸಹಾಯಕ ಕ್ಷುದ್ರತೆ. ಸುತ್ತಲಿನ ಜನರಿಗೆ ಒಂದೇ ರುಂಡ ಇದ್ದಿದ್ದರೆ ಅದನ್ನು ನಾವು ಅತ್ಯಂತ ಆನಂದದಿಂದ ಹಿಚುಕಬಹುದಾಗಿತ್ತಲ್ಲ ಎಂದು ನಿನಗೆ ಎಂದೂ ಅನಿಸಲಿಲ್ಲವೇ? ನಾವು ಅತ್ಯಂತ ಆನಂದದ ಕ್ಷಣದಲ್ಲಿ ಇದ್ದಾಗ, ಹೊಲಸು ಕ್ರಿಮಿಯೊಂದನ್ನು ಹೊಸಕಿ ಹಾಕಿ ಸುತ್ತಲೂ ಹೊಲಸು ನಾರುವಂತೆ ಮತ್ಸರದ ಶಬ್ದ ಉಗುಳುವ, ಪಾಪ ತುಂಬಿಕೊಂಡಿದ್ದರಿಂದ ಭೂಕಂಪವಾಯಿತೆನ್ನುವ, ಗ್ರಹಣದ ಕಾಲಕ್ಕೆ ಸೂರ್ಯಚಂದ್ರರಿಗೆ ಮುಕ್ತಿ ಸಿಗಲೆಂದು ಸ್ನಾನ ಮಾಡುವ ಹುಚ್ಚು ಜನ ನಿನಗೆಂದೂ ಸಿಗಲಿಲ್ಲವೇ? ಸಂಗೀತದ ಸಾನಿಧ್ಯದಲ್ಲಿ ಹೆಣದಂತೆ ಕೂಡ್ರುವ, ಕಾವ್ಯ ಕೇಳುವಾಗ ಗರುಡ ಪುರಾಣ ಕೇಳುತ್ತ ಸತ್ತವರಂತೆ ಮುಖ ಮಾಡುವ; ಸ್ವತಃ ಸೂಳೆಗಾರಿಕೆ ಮಾಡಿದರೂ ಹೊರನೋಟಕ್ಕೆ ಸಭ್ಯತನದ ಸೋಗು ಹಾಕಿ ಸತ್ತೆ ಹಾಗೂ ಸಂಪತ್ತಿನಿಂದ ಮೆರೆಯುವ ಮನುಷ್ಯರು, ಅವರ ಜನ ದಟ್ಟಣೆ ಇದೆಲ್ಲ ಯಾರಿಗೆ ಸಹಿಸುವುದು ಸಾಧ್ಯವೋ,

ಯಾರಿಗೆ ಸೇರುತ್ತದೋ ಅಂಥವರ ಮನಸ್ಸು ಸಾಕಷ್ಟು ಗಟ್ಟಿಯಾಗಿರಬೇಕಾಗುತ್ತದೆ. ಆದ್ದರಿಂದ ಕಿಂಚಿತ್ತಾದರೂ ಸ್ವತಃ ಯೋಚಿಸುವ, ಸ್ವಾಭಿಮಾನವುಳ್ಳ ಮನುಷ್ಯ ಈ ಗದ್ದಲದಿಂದ ದೂರ ಹೋಗುತ್ತಾನೆ. ಇಷ್ಟಾದರೂ ಆತ ಏಕಾಕಿಯಾಗುತ್ತಾನೆ. ಪರಕೀಯನಾಗುತ್ತಾನೆ. ಜನದಟ್ಟಣೆಯಲ್ಲಿ ಒಬ್ಬನಾಗಿ ಬದುಕುವ ನಿನ್ನ ಈ ಆಶೆ ಸುಖ ಎಂಥ ಮೋಸಗಾರಿಕೆ ಹಾಗೂ ಪೊಳ್ಳುತನದಿಂದ ಕೂಡಿದೆ ಎಂಬ ವಿಚಾರ ನಿನಗೆ ಆದಷ್ಟು ಬೇಗ ಅರ್ಥವಾಗುತ್ತದೆ.

ಆದರೆ ನನ್ನ ದೃಷ್ಟಿಯಲ್ಲಿ ಎಲ್ಲಕ್ಕಿಂತಲೂ ದೊಡ್ಡ ಲಾಭ ಬೇರೆಯೇ ಇದೆ. ಪ್ರತಿಯೊಂದು ಕೃತಿಯ ಪೂರ್ಣ ವಿಚಾರ ಮಾಡಿ ಅನಂತರ ಅದನ್ನು ಮಾಡುವ ಸಾಮರ್ಥ್ಯವಾಗಲಿ, ಸ್ವಾತಂತ್ರ್ಯವಾಗಲಿ ಮನುಷ್ಯನ ಪಾಲಿಗೆ ಬರುವುದೇ ಇಲ್ಲ. ಒಂದು ವೇಳೆ ಅಂಥ ಸ್ವಾತಂತ್ರ್ಯ ಸಿಕ್ಕರೂ ಅದು ಕೇವಲ ಕೀಳು ಕೆಲಸಕ್ಕಾಗಿ ಮಾತ್ರ. ಮತ್ತು ಅದು ಸಾಮಾನ್ಯವಾಗಿ ಮನಸ್ತಾಪವನ್ನುಂಟು ಮಾಡುತ್ತದೆ. ಇಡೀ ದೇಹ ಬತ್ತಲೆಯಾಗಿದ್ದಾಗ ಹಣೆಗೆ ಮಾತ್ರ ಚಿಂದಿ ಅರಿವೆ ಕಟ್ಟಿ ಮರೆಯುವಂಥ ದೃಶ್ಯವದು! ಇಲ್ಲದಿದ್ದರೆ ಇಂಥ ಪ್ರಚಂಡ ಬಿರುಗಾಳಿಗೆ ಸಿಕ್ಕು ಕುರುಡರಂತೆ ಕೈಯಾಡಿಸುತ್ತ ಕೊನೆಯುಸಿರು ಎಳೆಯುತ್ತೇವೆ! ಇದನ್ನು ಏಕೆ ಮಾಡಿದೆ? ಹೀಗೆಯೇ ಏಕೆ ಮಾಡಬೇಕಾಯಿತು? ಬೇರೆ ಏನಾದರೂ ಮಾಡುವ ಸಾಧ್ಯತೆ ಇತ್ತೆ? ಇಂಥ ಪ್ರಶ್ನೆ ಹೊಳೆಯಲು ನಮಗೆ ವೇಳೆಯೇ ಇಲ್ಲ. ಇಷ್ಟು ನಾವು ಜಂಜಾಟದಲ್ಲಿ ಸಿಕ್ಕು ಒದ್ದಾಡುತ್ತಿರುತ್ತೇವೆ. ಯಾರಿಗೆ ಈ ಪ್ರಶ್ನೆ ಹೊಳೆಯುತ್ತದೋ ಅಂಥ ಕೆಲವರು, ನಾನೀಗಾಗಲೇ ಹೇಳಿದ ಹಾಗೆ ದೂರ ಹೊರಟು ಹೋಗುತ್ತಾರೆ. ಅಥವಾ ಜನಸಂದಣಿಯಲ್ಲೂ ಏಕಾಕಿಯಾಗಿ ಸವೆದು ಹೋಗುತ್ತಾರೆ. ನನಗೆ ಅನಿಸುತ್ತದೆ, ನಿನಗೀಗ ನಾಲ್ವತ್ತು ವರ್ಷವಿರಬೇಕು. ಈಗ ನಿನ್ನ ಆಯುಷ್ಯದಲ್ಲಿ ಏನಾದರೂ ಹೊಸದನ್ನು ಸಾಧಿಸುವ, ಬದಲಾಯಿಸುವ ಸಾಧ್ಯತೆ ಕಡಿಮೆ. ಇನ್ನು ಮುಂದಿನ ನಿನ್ನ ಬದುಕು ಮೇಲೆ ಹೇಳಿದಂತೆ ಸತ್ತವರಂತೆ ಬದುಕೋದು ಬಿಟ್ಟು ಬೇರೇನೂ ಇಲ್ಲ. ಆದ್ದರಿಂದ ನೀನೀಗ ಗತ ಜೀವನದ ಲೆಕ್ಕಾಚಾರವನ್ನು ಶಾಂತವಾಗಿ ಕೂತು ಮಾಡಬಹುದು. ಪರಿಶೀಲಿಸಬಹುದು. ಪ್ರತಿಯೊಂದು ದಿವಸವೆಂದರೆ, ಒಂದು ಹೊಸ ಪ್ರಶ್ನೆ - ಚಿಹ್ನೆ. ಆದರೆ ನಮ್ಮ ಅವಸರದಿಂದಾಗಿ ಅದು ಎಂದೂ ಗಮನಕ್ಕೆ ಬರಲೇ ಇಲ್ಲ. ಈ ಅವಕಾಶ ಎಲ್ಲರಿಗೂ ಸಿಗುವುದಿಲ್ಲ. ಒಂದು ವೇಳೆ ಸಿಕ್ಕರೂ ಅದರ ಉಪಯೋಗ ಮಾಡಿಕೊಳ್ಳುವ ಮನಸ್ಸು ಮಾತ್ರ ಕೊಳೆತು ಹೋಗಿರುತ್ತದೆ. ಈಗ ನಿನಗೆ ಸಂಪೂರ್ಣ ಸ್ವಾತಂತ್ರ್ಯವಿದೆ. ನೀನು ಪ್ರತಿಯೊಂದನ್ನೂ ಗಾಜಿನ ಮುಖಾಂತರ ನೋಡಬಹುದು. ಪ್ರತಿಯೊಬ್ಬ ವ್ಯಕ್ತಿ ತನ್ನನ್ನು ಮತ್ತು ಉಳಿದವರನ್ನು ಎಂದಾದರೊಮ್ಮೆ ಗಾಜಿನ ಕೆಳಗಿಟ್ಟು ಅಲಿಪ್ತವಾಗಿ ನೋಡುವುದು ಅತೀ ಅವಶ್ಯಕ. ನಿನಗೆ ಮತ್ತೇನಾದರೂ ಕೇಳುವುದಿದೆಯೇ?''

''ಇದೆಂಥ ಮಠ? ಈ ಶಿಷ್ಯರು ಯಾರು? ಎಲ್ಲಿಂದ ಬರುತ್ತಾರೆ? ನಾನಿಲ್ಲಿ ಎಷ್ಟು ದಿನ ಇರಬೇಕು? ನನ್ನ ಹತ್ತಿರ ಸ್ವಲ್ಪ ಹಣವಿದೆ. ನನ್ನನ್ನು ನೀವೊಂದು ವೇಳೆ ಬಿಟ್ಟರೆ ಎಲ್ಲ ಹಣ ಮಠಕ್ಕೆ ಕೊಡುತ್ತೇನೆ.''

''ಈ ನಿನ್ನ ಸೂಚನೆ ಉದ್ಧಟತನದಿಂದ ಕೂಡಿದ್ದು. ಮಠಕ್ಕೆ ನಿನ್ನ ಹಣಬೇಕಾಗಿಲ್ಲ'' ತಟ್ಟನೆ ಕಠೋರ ಸ್ವರದಲ್ಲಿ ಮಠಾಧೀಶ ಹೇಳಿದ. ಅನಂತರ ಆತನ ಧ್ವನಿ ಮತ್ತೆ ಸೌಮ್ಯವಾಯಿತು ''ನಿನ್ನ ಉಳಿದ ಪ್ರಶ್ನೆ ಸರಿಯಾಗಿದೆ. ಇದು ನಿಜವಾಗಿ ಮಠವಲ್ಲ, ಆಶ್ರಮ. ಮನುಷ್ಯರನ್ನು ಹೇಗಾದರೂ ಮಾಡಿ ಪತಿತಪಾವನ ಮಾಡಲು ಉದ್ಧರಿಸುತ್ತೇವೆ ಎಂಬ ಭೋಳೆ ಭಾವನೆ ನಮಗಿಲ್ಲ. ಯಾವುದಾದರೊಂದು ಮಠಕ್ಕೆ ಆದರ್ಶದ ಪಟ್ಟ ನೀಡುವದು ಮತ್ತು ಅದಕ್ಕಿಂತಲೂ ಎತ್ತರವಾಗಿದ್ದ ಮರದ ತುದಿಯನ್ನು ಕತ್ತರಿಸುವುದು, ಅದಕ್ಕಿಂತಲೂ ಗಿಡ್ಡವಾಗಿದ್ದ ಮರದ ತುದಿಯನ್ನು ಎಳೆಯುವುದು ಹುಚ್ಚುತನ. ಇಂಥ ಹುಚ್ಚುತನ ಹುಚ್ಚು ನಾಯಿಯಲ್ಲಿಯೂ ಕಂಡು ಬರುವುದಿಲ್ಲ. ಮಾನವನಿಗೆ ರಕ್ತ, ಮಾಂಸ,

ಇಂದ್ರಿಯ, ವಿವಿಧ ರೀತಿಯ ಮಿದುಳು ಇರುವು ದರಿಂದಲೇ ಅವನಲ್ಲಿ ಸಾಕಷ್ಟು ರೀತಿಯ ಗುಣ ಗಳಿವೆ. ತನಗೆ ಆ ಶರೀರವಿಟ್ಟುಕೊಂಡು, ತಾನು ಮಾನವನಾಗಿಯೇ ಇದ್ದು ಉಳಿದವರನ್ನು ಅತಿ ಮಾನವನನ್ನಾಗಿ ಮಾಡುವ ಪ್ರಯತ್ನ ಅತ್ಯಂತ ಹಾಸ್ಯಾಸ್ಪದ. ತನ್ನ ಹೊಲಸು ಕೈಯಿಂದ ಉಳಿದ ವರ ಹೊಲಸು ಬಳಿಯುವ ಒಂದು ಐಷಾರಾಮಿ ಡೊಂಬರಾಟ. ಈ ಶಿಷ್ಯರು ಎಲ್ಲಿಂದ ಬರುತ್ತಾರೆ -ಅದಕ್ಕೆ ಸೀಮೆಯೇ ಇಲ್ಲ. ಯಾರಿಗೆ ಇಚ್ಛೆ ಇದೆಯೋ ಅವರು ನಿಲ್ಲುತ್ತಾರೆ. ಆದರೆ ಇಲ್ಲಿ ಒಮ್ಮೆ ಪ್ರವೇಶ ಮಾಡಿದ ಬಳಿಕ ಹಿಂದಿರುಗುವ ಹಾಗಿಲ್ಲ. ಮೊದಲನೆಯ ವರ್ಷ ಆತ ತನ್ನ ಕೋಣೆಯಲ್ಲಿ ಕಳೆಯಬೇಕಾಗುತ್ತದೆ. ಅನಂತರ ಆತನಿಗೆ ಬೇಲಿಯೊಳಗೆ ತಿರುಗಾಡುವ ಅವಕಾಶ ನೀಡಲಾಗುತ್ತದೆ. ಈ ವಿಷಯ ನಿನ್ನ ಗಮನಕ್ಕೆ ಬಂತೋ ಇಲ್ಲವೋ ಯಾರಿಗೆ ಗೊತ್ತು. ಅವರು ಹೊರಗೆ ತಿರುಗಾಡುವಾಗ ಮೂರು ಜನರು ಇರು ತ್ತಾರೆ. ಪ್ರತಿಯೊಬ್ಬ ಇನ್ನೊಬ್ಬನ ಕೈ ಹಿಡಿದಿರು ತ್ತಾನೆ. ಇಲ್ಲಿ ಪ್ರವೇಶ ನೀಡುವಾಗ ಯಾರಿಗೂ ಅವರ ಭೂತಕಾಲದ ಬಗ್ಗೆ ಕೇಳುವುದಿಲ್ಲ. ಅಂದ ಮೇಲೆ ಅವರಲ್ಲಿ ಕೊಲೆಗಡುಕ, ದರೋಡೆ ಕೋರ, ಜೀವನದಲ್ಲಿ ಸೋತವರು, ವೈಭವ ತ್ಯಾಗ ಮಾಡಿದವರೂ ಇದ್ದಿರಬಹುದು.''

''ಇದೆಲ್ಲ ಅಸಾಧ್ಯ. ವೈಭವ ಬಿಟ್ಟು ತಾನಾ ಗಿಯೇ ಮನುಷ್ಯ ಇಂಥ ಪಂಜರದೊಳಗೆ ಏಕೆ ಬರುತ್ತಾನೆ'' ಆತ ನಡುವೆಯೇ ಹೇಳಿದ.

''ಯಾವ ಅಪಾರ ವೈಭವದ ಬಗ್ಗೆ ತಿರಸ್ಕಾರ ಮೂಡುತ್ತದೋ ಅಂಥ ವೈಭವವನ್ನು ನೀನು ಭೋಗಿಸುವುದಿರಲಿ, ಕಣ್ಣಿಂದಲೂ ಕೂಡ ನೋಡಿರಲಿಕ್ಕಿಲ್ಲ. ಇಲ್ಲಿ ಪೂರ್ವಾಯುಷ್ಯಕ್ಕೆ ಕವಡೆ ಬೆಲೆಯೂ ಇಲ್ಲ. ನೀನೊಂದು ವೇಳೆ ನನ್ನ ಭೂತಕಾಲದ ಬಗ್ಗೆ ಕೇಳಿದ್ದರೆ, ನಾನು ಉತ್ತರಿಸು ತ್ತಲೇ ಇರಲಿಲ್ಲ. ಆದರೆ ಈಗ ಹೇಳುತ್ತೇನೆ. ಸದ್ಯ ಈಗ ಇಲ್ಲಿರುವ ಶಿಷ್ಯರ ಎರಡು ಪಟ್ಟಿನಷ್ಟು ಸೇವಕರು ನನ್ನ ಕುದುರೆಗಳ ಸೇವೆಗಿದ್ದರು. ಕಾಲ ಕೆಳಗೆ ಬಂಗಾರದ ನಾಣ್ಯವಿಲ್ಲದಿದ್ದರೆ ಒಂದು ಹೆಜ್ಜೆಯನ್ನೂ ಎತ್ತಿಡುವುದಿಲ್ಲೆಂದು ನಾನೊಂದು ವೇಳೆ ಪ್ರತಿಜ್ಞೆ ಮಾಡಿದ್ದರೆ, ಇಡೀ ಬಂಗಲೆಯ ತುಂಬ ಪ್ರತಿಜ್ಞೆ ಭಂಗ ಮಾಡದೆ ತಿರುಗಾಡಬಹು ದಾಗಿತ್ತು. ಆದರೆ ಆ ಕಡೆ ನಾನು ಬೆನ್ನು ತಿರುಗಿ ಸಿದೆ. ಮತ್ತು ಆದ್ಯ ಸ್ವಾಮಿಗಳ ಹಿಂದೆ ಬಂದೆ. ಅನಂತರ ದರ್ಶನಕ್ಕಾಗಿ ಬಂದ ಮೂವರು ಸ್ವಾಮಿ ಗಳಾದರು. ಆದ್ದರಿಂದ ನೀನೀಗ ಏಕಾಕಿಯೆಂದು ಭಾವಿಸಬೇಕಾಗಿಲ್ಲ. ಯಾಕೆಂದರೆ ಅವರೆಲ್ಲ ಇಲ್ಲೆ ನಿನ್ನ ಪಕ್ಕದಲ್ಲಿಯೇ ಇದ್ದಾರೆ.''

ಆತ ಒಮ್ಮೆಲೇ ಗಾಬರಿಯಾಗಿ ಮೇಲಕ್ಕೆದ್ದ. ಆತನ ಹಣೆ ಎದುರಿನ ಗೋಡೆಗೆ ಬಡೆಯಿತು. ನೋವಿನ ಸ್ವರದಿಂದ ಹೇಳಿದ ''ಇಲ್ಲಿ ಅಂದರೆ ಎಲ್ಲಿ?''

''ನೀನಾಗಿಯೇ ಅದನ್ನು ಆಮೇಲೆ ಹುಡುಕಿ ತೆಗೆಯುತ್ತಿ. ಮೊದಲು ಕೆಲ ದಿನ ನಿನಗೆ ಕಾಲ ಅನಂತವೆನಿಸಬಹುದು, ಮನಸ್ಸಿಗೆ ತುಕ್ಕು ಹಿಡಿದು ಅಸ್ವಸ್ಥತೆ ತೊಂದರೆಯನ್ನುಂಟು ಮಾಡ ಬಹುದು. ಆಗ ನೀನು ತನ್ನಿಂದ ತಾನೆ ಅವರನ್ನು ಹುಡುಕಿ ತೆಗೆಯುತ್ತಿ. ನೀನು ಬರುವಾಗ ವೃಂದಾ ವನ ನೋಡಿದೆಯಲ್ಲ. ಪ್ರತಿಯೊಬ್ಬ ಸ್ವಾಮಿಯ ಮರಣದ ನಂತರ ಅವರನ್ನು ಅಲ್ಲಿ ಹೂಳಲಾಗು ತ್ತದೆ. ಅದಕ್ಕಿಂತ ಮೊದಲು ಈ ಮೊದಲಿನ ಸ್ವಾಮಿಯ ಅವಶೇಷವನ್ನು ಇಲ್ಲಿ ತಂದು ಜೋಪಾನವಾಗಿಡುತ್ತೇವೆ. ಹೀಗಾಗಿ ನಿನಗಿಲ್ಲಿ ಏಕಾಕಿ, ಒಂಟಿ ಎಂದು ಎಂದೂ ಅನಿಸಲಾರದು. ತುಟಿಯ ಮೇಲಿನ ಶಾಂತ ಜ್ಞಾನಿ ನಗು ಎಂದೂ ಮೃತ್ಯುವಿನ ಎದುರು ತಾಳುವುದಿಲ್ಲ. ಆದರೆ ಮೃತ್ಯುವಿನ ಪ್ರಹಾರಕ್ಕೆ ಸಿಕ್ಕು ಕಿವಿ, ಮೂಗು, ಕಣ್ಣು ಇತ್ಯಾದಿ ಇಂದ್ರಿಯಗಳು ನಾಶವಾದ ಬಳಿ ಕವೂ ಒಂದು ಮಾತ್ರ ಶಾಶ್ವತವಾಗಿ ಉಳಿಯು ತ್ತದೆ. ಅದೇನೆಂದರೆ ತಲೆಬುರುಡೆಯ ಹಾಸ್ಯ ಮತ್ತು ಆ ಹಾಸ್ಯವೇ ಬದುಕಿನ ಬಗ್ಗೆ ಮಾನವ ನೀಡಿದ ಅಂತಿಮವಾದ ತೀರ್ಪು''.

ಈಗ ಆತ ಸಂಪೂರ್ಣ ಸೋರಿ ಹೋದವನಂ ತಾದ. ಮತ್ತು ಹತಾಶೆಯಿಂದ ಆತನ ಕಣ್ಣುಗಳಲ್ಲಿ

ನೀರು ತುಂಬಿಕೊಂಡಿತು. ಆತ ದೀನವಾಣಿಯ ಸ್ವರದಲ್ಲಿ ಹೇಳಿದ. ''ನನ್ನ ಅನ್ನ ನೀರಿನ ವ್ಯವಸ್ಥೆ ಮಾಡಿದಿರಿ, ಅದೇ ರೀತಿ ಇನ್ನೊಂದು ಸಹಾಯ ಮಾಡಿ. ಅದೇನೆಂದರೆ ಒಂದು ಕಾಗದ ಹಾಗೂ ಪೆನ್ಸಿಲ್ ಕೊಡಿ. ಅಂದರೆ ಕೊನೆ ಪಕ್ಷ ನಾನು ನನ್ನೊಂದಿಗಾದ್ರೂ, ಮಾತನಾಡಲು ಸಾಧ್ಯವಾಗ ಬಹುದು.''

''ಇಲ್ಲ, ಇದನ್ನೆಂದಿಗೂ ನಿನಗೆ ಕೊಡುವುದು ಸಾಧ್ಯವಿಲ್ಲ. ಶಬ್ದ ಮತ್ತು ವಿಚಾರ ಎರಡೂ ಕೂಡಿ ದಾಗ ಅವು ಸಾಯುತ್ತವೆ. ರೆಕ್ಕೆಯಾಗುವ ಬದಲು ಅದು ಸಂಕೋಲೆಯಾಗುತ್ತದೆ. ಎಲ್ಲಿಯವರೆಗೆ ಮಾತನಾಡುವವನ ಪ್ರಾಣ ಅದರ ಹಿಂದೆ ಇರು ತ್ತದೋ ಅಲ್ಲಿಯವರೆಗೆ ಶಬ್ದಗಳಿಗೆ ರೆಕ್ಕೆ ಇರು ತ್ತದೆ. ಆದರೆ ಆತನ ಮರಣದ ಬಳಿಕ ಅದು ಕೇವಲ ಶಿಲಾಲೇಖವಾಗುತ್ತದೆ. ಮತ್ತು ಕೆಲ ಕಾಲದ ಬಳಿಕ ಆ ಲೇಖನ ಸಂಪೂರ್ಣ ಅಳಿಸಿ ಹೋಗಿ ಆ ಕಲ್ಲಿನ ಭಾರ ಮಾತ್ರ ಅನುಯಾಯಿ ಗಳ ಕುತ್ತಿಗೆಗೆ ಸದಾ ಕಾಲ ಜೋತು ಬೀಳುತ್ತದೆ. ಇದನ್ನು ನೀನು ಬಹುಶಃ ನೋಡಿರಲೂ ಬಹುದು. ಆದ್ದರಿಂದ ಆದ್ಯ ಸ್ವಾಮಿ ಇಂಥ ಪುರಾಣ ಗ್ರಂಥಗಳನ್ನು ಓದಲಿಲ್ಲ, ಬರೆಯ ಲಿಲ್ಲ, ಬರೆಸಲೂ ಇಲ್ಲ''.

''ಇನ್ನು ಕೊನೆಗೊಂದು ಪ್ರಶ್ನೆ. ಇದೆಲ್ಲ ಸತ್ಯ ವಾಗಿದ್ದರೆ ನಿಮಗೆ ಸ್ವಾಮಿಯ ಅವಶ್ಯಕತೆ ಏನಿದೆ? ನನ್ನನ್ನು ವಿನಾಕಾರಣ ಯಾಕೆ ಬಲಿ ಕೊಡುತ್ತೀರಿ? ನನ್ನ ಸಂಬಂಧಿಕರು ಹುಡುಕುತ್ತಿರ ಬಹುದು, ದುಃಖದಿಂದ ವಿಹ್ವಲಗೊಂಡಿರ ಬಹುದು. ನನ್ನೊಂದಿಗೆ ಅವರ ಆಯುಷ್ಯವೂ ಹಾಳಾಗಬಹುದು''.

''ಇದು ಮನುಷ್ಯನ ಇನ್ನೊಂದು ಭ್ರಾಂತಿ'' ಮಠಾಧೀಶ ಹೇಳಿದ. ''ಯಾರೂ ನಿನಗಾಗಿ ವೇದನೆ ಪಡುವುದಿಲ್ಲ. ಸ್ವಲ್ಪ ಕಾಲ ಹುಡುಕ ಬಹುದು. ಕದಾಚಿತ್ ಪತ್ರಿಕೆಯಲ್ಲಿ ಪ್ರಕಟಣೆ ಕೊಡಬಹುದು. ಆದರೆ ನನ್ನ ಮಾತು ಕೇಳು, ವಾರದೊಳಗೆ ಎಲ್ಲರೂ ನಿನ್ನನ್ನು ಮರೆತುಬಿಡು ತ್ತಾರೆ. ಬದಲಿಗೆ ನೀನಿಲ್ಲ ಎಂಬುದು ಕೇಳಿ ಕೆಲವ



''ತಿಂಗಳಿಗೆ ಒಂದು ಟಿ.ವಿ. ಸಿನಿಮಾ ನೋಡಲು ಅವಕಾಶ ಕೊಡ್ತೀನಿ ..... ಇನ್ನಾದ್ರೂ ಅಡಿಗೆ ಮಾಡ್ತೀರಾ?''

ರಿಗೆ ಸಂತೋಷವೂ ಆಗಬಹುದು. ನೀನು ನಿನ್ನ ನಂತರ ಕಾಯಿದೆ ಪ್ರಕಾರ ಉಯಿಲು ಬರೆದಿಟ್ಟಿಲ್ಲ ವೆಂದು ನಿನ್ನನ್ನು ದೂರಬಹುದು. ಆದರೆ ಸಾಕಷ್ಟು ಜನರಿಗೆ ಇದರಿಂದ ಯಾವ ಹಾನಿಯೂ ಆಗುವುದಿಲ್ಲ. ನೀನಾಗಲಿ, ನಾನಾಗಲಿ ಅಥವಾ ಯಾವುದೇ ಸಮ್ರಾಟನಾಗಲಿ ಒಂದು ಸ್ಥಳವನ್ನು ಬಿಟ್ಟ ನಂತರ ಅದು ಬರಿದಾಗಿರದೇ ಬೇಗೊಂದು ಗುಳ್ಳೆಯಿಂಬ ತಕ್ಷಣ ತುಂಬಿಕೊಳ್ಳುತ್ತದೆ. ಸ್ವಾಮಿ ಏಕೆ ಬೇಕು ಎಂದು ಕೇಳಿದೆಯಲ್ಲ? ಅಲ್ಲಯ್ಯಾ, ನನಗೆ ಎಷ್ಟೋ ಜನರೊಂದಿಗೆ ಸಂಬಂಧವಿದೆ. ಅವರಿಗೆ ನಾನೊಂದು ಮಾತು ಹೇಳಿದರೆ ಕೇಳುವು ದಿಲ್ಲೆಂದಲ್ಲ, ಆದರೆ ಇದು ಸ್ವಾಮಿಗಳ ಆಜ್ಞೆ ಎಂದು ಹೇಳಿದರೆ, ನನ್ನ ಶಬ್ದಕ್ಕೆ ದೈವೀ ಶಕ್ತಿ ಬರುತ್ತದೆ. ನನ್ನ ಹೊರತು ಯಾರೂ ಸ್ವಾಮಿಯ

ಪತ್ತಿರ ಹೋಗುವ ಹಾಗಿಲ್ಲ. ಎಲ್ಲಿ ಕೇವಲ ನಾನಷ್ಟೇ ಪ್ರವೇಶಿಸಬಹುದೋ ಮತ್ತು ಎಲ್ಲಿ ನನ್ನ ಮಾತನ್ನು ಖಾತ್ರಿ ಮಾಡಿಕೊಳ್ಳುವುದು ಉಳಿದವರಿಗೆ ಅಸಾಧ್ಯವೋ ಅಂಥ ಒಂದು ಅಮಾನವೀಯ ಶಕ್ತಿ ಕೈಯಲ್ಲಿರುವುದೇ ಧರ್ಮದ ದೃಷ್ಟಿಯಿಂದ ತುಂಬಾ ಅವಶ್ಯಕ. ಮತ್ತು ಅಷ್ಟೇ ಲಾಭದಾಯಕ.''

''ನಾನಿನ್ನು ಹೋಗುತ್ತೇನೆ. ಇನ್ನು ಮುಂದೆ ನಮ್ಮ ಭೆಟ್ಟಿ ಇಲ್ಲ. ನಾನು ಮೊದಲೇ ಸತ್ತರೆ ಅದು ನಿನ್ನ ತನಕ ಬಂದು ತಲುಪುವುದೂ ಇಲ್ಲ. ಒಂದು ವೇಳೆ ನೀನೇ ಮೊದಲು ಸತ್ತರೆ ನಾನು ಪುನಃ ಇಲ್ಲಿಗೆ ಬರುತ್ತೇನೆ. ಆದ್ದರಿಂದ ನಮ್ಮ ಈ ಭೆಟ್ಟಿ ಕೊನೆಯದು.''

ಮಠಾಧೀಶ ಹೋಗಿರಬೇಕು. ಆತ ಅಸಹಾಯಕನಾಗಿ ಆಸನದ ಮೇಲೆ ಬಹಳಷ್ಟು ಹೊತ್ತು ಕೂತೇ ಇದ್ದ. ನೀಲಿ ಕೆಂಪು ಬಣ್ಣದ ಇಕ್ಕಟ್ಟಾದ ಈ ಮಾರ್ಗದಿಂದ ಗರ್ಭಾಶಯದವರೆಗೆ ಬಂದು ತಲುಪಿದ್ದೇನೆ. ಇನ್ನು ಇಲ್ಲಿಂದ ಪಾರಾಗುವುದು ಸಾಧ್ಯವಿಲ್ಲ ಎಂಬ ವಿಚಾರ ಏನು ಮಾಡಿದರೂ ಆತನಿಂದ ಮರೆಯುವುದೂ ಸಾಧ್ಯವಾಗಲಿಲ್ಲ. ಮತ್ತು ಸಂಪೂರ್ಣ ಸ್ವೀಕರಿಸಲೂ ಮನಸ್ಸೊಪ್ಪಲಿಲ್ಲ. ಹಾಗಾದರೆ ಒಂದು ವೇಳೆ ನಾನು ಸತ್ತರೆ ಯಾರಿಗೂ ಏನೂ ಅನಿಸಲಿಕ್ಕಿಲ್ಲವೆ? ಯಾರಿಗೂ ನನ್ನ ನೆನಪು ಬರಲಿಕ್ಕಿಲ್ಲವೆ? ಹಾಗಾದರೆ ಇಲ್ಲಿಯವರೆಗಿನ ನನ್ನ ಬದುಕೆಂದರೆ ಹರಿದ ಹಾಳೆಯ ಹಾಗೆ ಅರ್ಥಹೀನವಾಯಿತೆ? ನನ್ನ ಸಂಬಂಧಿಕರಿಗಾಗಿ ನಾನು ಬೆವರಿನಂತೆ ರಕ್ತ ಸುರಿಸಿದೆ. ನನ್ನ ಕಾಲಿನಲ್ಲಿ ಚಪ್ಪಲಿ ಇಲ್ಲದಿದ್ದರೂ ತಮ್ಮನಿಗೆ ರೇಷ್ಮೆ ಅಂಗಿ ಹೊಲಿಸಿದೆ. ಹಲವು ದಿನ ಹಣ ಸಂಗ್ರಹಿಸಿ ಹೆಂಡತಿಗೆ ಹರಳಿನ ಉಂಗುರ ತೊಡಿಸಿದೆ. ಒಬ್ಬ ರೋಗಿ ಸ್ನೇಹಿತನನ್ನು ಮನೆಗೆ ಕರೆತಂದು ಎರಡು ತಿಂಗಳ ಕಾಲ ಆರೈಕೆ ಮಾಡಿದೆ. ಇವರಿಗೂ ಏನೂ ಅನಿಸಲಿಕ್ಕಿಲ್ಲವೆ? ಒಮ್ಮೆ ಬಿರುಗಾಳಿಗೆ ಉರುಳಿ ಬಿದ್ದ ಮಲ್ಲಿಗೆ ಮಂಟಪವನ್ನು ಮಳೆಯಲ್ಲಿ ನೆನೆದು ಇಡೀ ರಾತ್ರಿ ಕಷ್ಟಪಟ್ಟು ಪುನಃ ನಿಲ್ಲಿಸಿದೆ. ಕೋಳಿಯನ್ನು ಹಿಡಿಯಲು ಪ್ರಯತ್ನಿಸುತ್ತಿದ್ದ ಗಿಡುಗನನ್ನು ಹೊಡೆದೋಡಿಸಿದೆ. ಇದೆಲ್ಲ ಮಲ್ಲಿಗೆಗೆ, ಆ ಕೋಳಿಗೆ ನೆನಪಾಗಬಹುದೆ? ಅಥವಾ ರೇಷ್ಮೆ ಸೂಟಿನ ಬದಲಿಗೆ ಕೇವಲ ರೇಷ್ಮೆಯಂಗಿ ಸಿಕ್ಕಿತೆಂದು ಬೇಸರಪಟ್ಟ ತಮ್ಮ, ನೆಕ್ಲೇಸ್ ಬದಲಿಗೆ ಉಂಗುರ ಕೊಟ್ಟಿದ್ದಕ್ಕಾಗಿ ಕೆರಳಿದ ಹೆಂಡತಿ, 25 ರೂ. ಬೇಡಿದಾಗ ನಿರ್ದಾಕ್ಷಿಣ್ಯವಾಗಿ ನಿರಾಕರಿಸಿದ ಆ ಗೆಳೆಯ - ಇವರು ಇದನ್ನೆಲ್ಲ ನೆನಪಿಟ್ಟು ನನ್ನನ್ನು ಮಾತ್ರ ಮರೆಯುತ್ತಿರಬಹುದೆ? ಹಾಗೆ ನೋಡಿದರೆ ಮಲ್ಲಿಗೆಗೆ ನನ್ನ ನೆನಪಾಗುವುದು ಹೇಗೆ ಸಾಧ್ಯ ಹೇಳಿ? ಯಾಕೆಂದರೆ ಆ ಮೇಲೆ ಅದು ಮುರಿದೇ ಹೋಯಿತಲ್ಲ. ಕೋಳಿ ಗಿಡುಗದಿಂದ ಪಾರಾದರೂ ಅದರ ದೇಹವೆಲ್ಲ ಪರಚಿದ ಉಗುರಿನ ಗಾಯವಾಗಿದ್ದರಿಂದ ರಕ್ತಮಯವಾಗಿತ್ತು. ಅಂದ ಮೇಲೆ ಅವುಗಳಿಗೆ ನೆನಪಾಗುವುದು ಸಾಧ್ಯವೆ? ಪಂಢರಪುರಕ್ಕೆ ಹೊರಟ ಒಬ್ಬ ಆಚಾರಿಗೆ ನಾನೈದು ರೂಪಾಯಿ ಕೊಟ್ಟೆ, ಮನೆಗೆಲಸದ ಲಕ್ಷ್ಮಿ ಮೇಲೆ ಬೆಳ್ಳಿ ಬಟ್ಟಲು ಕದ್ದ ಆರೋಪ ಬಂದಾಗ ನಾನೇ ಅದನ್ನು ಹುಡುಕಿ ಕೊಡಲಿಲ್ಲವೆ? ಪಕ್ಕದ ಮನೆ ರಾಜುವಿಗೆ ನವಿಲುಗರಿ ತಂದುಕೊಟ್ಟೆ. ಕೊನೆಗೆ ಈ ಜನರಿಗಾದರೂ ನನ್ನ ನೆನಪಾಗಬಹುದೆ? ಇದಾದರೂ ಹೇಗೆ ಸಾಧ್ಯ ಹೇಳಿ? ರಕ್ತ ಸಂಬಂಧವುಳ್ಳ ನೆಂಟರೇ ಮರೆತಾಗ, ಉಳಿದ ನೆರೆಹೊರೆಯವರು ನೆನಪಿಡುವುದು ಸಾಧ್ಯವೆ?

ಆದರೆ ನನಗೆ ಮಾತ್ರ ಇಲ್ಲಿ ಕುಳಿತು ಎಲ್ಲ ನೆನಪಾಗುತ್ತಿದೆ! ಆ ಬದುಕಿನ ಉದ್ದಕ್ಕೂ ಪ್ರತಿಕ್ಷಣ ಹೋರಾಡುತ್ತಲೇ ಜೀವಿಸುತ್ತಿದ್ದ ತಂಗಿ ಅಪರ್ಣಾ ನೆನಪಾಗುತ್ತಾಳೆ. ಕಾಲೇಜಿನ ಮೊದಲ ದಿನ, ಪುಸ್ತಕಗಳಿಂದ ತುಂಬಿದ ಗ್ರಂಥಾಲಯ ನೋಡಿ ಗರಿಗೆದರಿದ ಮನ, ಸಾದಾ ಬಟ್ಟೆಯ ಪೋಷಾಕು ನೋಡಿ ಎಲ್ಲರೂ ಚೇಷ್ಟೆ ಮಾಡಿದಾಗ ಮನಸ್ಸು ಮುದುಡಿ ಏಕಾಕಿ ಕೂತಾಗ ಸಹಾಯಕ್ಕೆ ಬಂದ ಮಂದಾ ದೇಶಪಾಂಡೆ, ಆಕೆಯ ಭವ್ಯ ಆಕಾರ ಹಾಗೂ ಆಕರ್ಷಕ ರೂಪ, ಪರಿಚಯ ಎಲ್ಲದಿದ್ದರೂ ಸನಿಹಕ್ಕೆ ಬಂದು ಇದನ್ನೆಲ್ಲ ಹೇಳಿ

ದಳು. ಇಂಥ ವಿಷಯವನ್ನು ಮನಸ್ಸಿಗೆ ಹಚ್ಚಿಕೊಂಡರೆ ಹೇಗೆ? ಕಳೆದ ನಾಲ್ಕು ವರ್ಷಗಳಿಂದ ಇಲ್ಲಿ ಕಲಿಯುತ್ತಿದ್ದೇನೆ. ನನ್ನನ್ನು ನೋಡಿ ಸಾರ್ಜಂಟ್ ಸಹ್ಯಾದ್ರಿ, ಎಂದು ಕೂಗುತ್ತಾರೆ. ಆದರೂ ನಾನು ಇಲ್ಲಿ ನಾಲ್ಕು ವರ್ಷ ಕಳೆದಿದ್ದೇನೆ - ಇಂಥ ಎಷ್ಟೊ ಜನರು, ಅವರ ಪ್ರೀತಿಯ ಸ್ಪರ್ಶ, ಅವರ ಬೆಚ್ಚಗಿನ ಸ್ಪರ್ಶದ ಹೊಳಪಿನ ಹೊದಿಕೆಯನ್ನು ಹೊದ್ದು ಇಲ್ಲಿಯವರೆಗಿನ ಆಯುಷ್ಯ ಕಳೆದೆನಲ್ಲ!

ಆತನಿಗೆ ಅನಿಸಿತು, ಮಠಾಧೀಶ ಹೇಳಿದ್ದು ಒಂದರ್ಥದಲ್ಲಿ ಸತ್ಯವಾಗಿರಬಹುದೆ? ಜಗತ್ತಿನ ಸಂಬಂಧ ಹೀಗೆ ತಟ್ಟನೆ ಕಡಿದುಕೊಂಡರೆ ಎಲ್ಲರ ಬಗೆಗಿನ ನನ್ನ ದೃಷ್ಟಿ ನಿಷ್ಕಳಂಕವಾಗುತ್ತದಲ್ಲ. ಇಷ್ಟು ಹೊತ್ತಿನವರೆಗೆ ಮರೆತ ಗಂಟೆ ಮತ್ತೆ ಮಂದವಾಗಿ ಕೇಳಲಾರಂಭಿಸಿತು. ಅಪರ್ಣಾಳನ್ನು ಎಂದೂ ಮರೆಯುವುದು ಸಾಧ್ಯವೇ ಇಲ್ಲ; ಆದರೆ ಬಹಳ ದಿವಸಗಳಿಂದ ಮಂದಾ ದೇಶಪಾಂಡೆಯ ನೆನಪೇ ಆಗಲಿಲ್ಲವಲ್ಲ. ಈಗ ಆಕೆ ಎಲ್ಲಿ ಇರಬಹುದು? ಬಾಲ್ಯದಲ್ಲಿ ನಾನು ತೆಗೆದ ಚಿತ್ರವನ್ನು ಒಂದಾಣೆಗೆ ಕೊಂಡುಕೊಳ್ಳುತ್ತಿದ್ದ ದಾತಾರ ಭಾವು ಅವನ ನೆನಪಂತೂ ಎಷ್ಟೋ ವರುಷಗಳ ಬಳಿಕವಾಯ್ತಲ್ಲ? ಮೋಸಂಬಿಯನ್ನು ನವಿರಾಗಿ ಸುಲಿಯುವ ಆ ವ್ಯಕ್ತಿ ಮೂರು ತಿಂಗಳ ವೇದನೆಯಿಂದ ಒದ್ದಾಡಿ ಏಕೆ ಸತ್ತ?

ಕೆಂಪು ಪ್ರಕಾಶದೊಳಗಿಂದ ಹೊರ ಬೀಳುವ ನೆನಪಿನ ಗುಳ್ಳೆಗಳಿಂದ ಆತ ವ್ಯಾಕುಲಗೊಂಡ. ಆದರೂ ತನ್ನ ಮನಸ್ಸಿಗೆ ಹತೋಟಿ ತಂದುಕೊಂಡ. ತಲೆ ಮೇಲಿನ ಛಾವಣಿಯು ದಪ್ಪ ಚೌಕೋನಾಕೃತಿಯ ಗಾಜಿನಿಂದ ನಿರ್ಮಿಸಲಾಗಿತ್ತು. ಆದರೆ ಅದರೊಳಗಿನಿಂದ ತಿಳಿ ರಕ್ತದಂತೆ ಹೊರಬೀಳುವ ಪ್ರಕಾಶ ಸಾಕಷ್ಟು ಎತ್ತರದಿಂದ ಬರುತ್ತಿತ್ತು. ಅಲ್ಲಲ್ಲಿ ಅನಿಮಿಷವಾಗಿ ಹಗಲಿರುಳು ಪಹರೆ ಮಾಡುವ ಚೌಕೋನಾಕೃತಿಯ ತಟಸ್ಥ ಕೆಂಪು ದೀಪಗಳು! ಹಗಲಿರುಳೇ? ಆತ ಚಕಿತನಾದ. ಈಗ ರಾತ್ರಿಯಾಗಿರಬಹುದೇ? ರಾತ್ರಿ ಆದರೇನಾಯಿತು? ಎಷ್ಟು ಹೊಡೆದಿರಬಹುದು. ಎಂಟು, ಒಂಬತ್ತು, ಹತ್ತು? ಆತ ಕಿವಿಗೊಟ್ಟು ಸದ್ದೇನಾದರೂ ಕೇಳಿಸುತ್ತಿದೆಯೇ ಎಂದು ಆಲಿಸಿದ. ಆದರೆ ಹೊರಗಿನಿಂದ ಬರುವ ಸದ್ದು ದಪ್ಪ ಗೋಡೆಯಾಚೆಗೆ ಕರಗುತ್ತಿರಬೇಕು. ಒಳಗಡೆ ಕೇವಲ ಶಾಂತತೆ, ಸ್ತಬ್ಧತೆಯ ದಪ್ಪ ಕಬ್ಬಿಣದ ಸ್ಪರ್ಶ ಸುತ್ತಲೂ ಆವರಿಸಿಕೊಂಡಂತೆ ಅನಿಸುತ್ತಿತ್ತು. ಎಂಟು - ಒಂಬತ್ತು - ಹತ್ತೇ? ಪ್ರತಿದಿನ ಈ ಅಂಕೆಗೆ ಬಹಳ ಮಹತ್ವವಿತ್ತು. ಹಗಲಿನ ಒಂದು ತುದಿಯಿಂದ ಇನ್ನೊಂದು ತುದಿಗೆ ಇದೇ ನೆಲದ ಮೇಲೆ ವ್ಯವಹರಿಸುತ್ತಿದ್ದೆ. ರಾತ್ರಿಯಂತೂ ಸದ್ದು ಎಷ್ಟೆಲ್ಲ ಗೆರೆಗಳನ್ನು ಹೊರಡಿಸುತ್ತದೆ. ಗಿಡಗಳ ಅಲುಗಾಟ. ರಸ್ತೆ ಮೇಲೆ ಓಡಾಡುವ ಎತ್ತಿನ ಗಾಡಿ, ರೆಂಬೆಗಳ ಮೇಲೆ ಫಡಫಡಿಸುವ ಹಕ್ಕಿಗಳು, ಎದುರಿನ ಮನೆಯಿಂದ ಕೇಳಿಸುವ ಎತ್ತಿನ ಕೊರಳ ಗಂಟೆ, ಆಗಾಗ ಕೇಳಿಸುವ ಮಗುವಿನ ಅಳು, ನಾಯಿಗಳ ವಿಕಾರ ಧ್ವನಿ, ಕೆರಳಿದ ಉಗ್ರ ಹೆಂಡತಿಯಂತೆ ದೂರದ ಕತ್ತಲೆಯಲ್ಲಿ ಚಲಿಸುವ ರೈಲು - ಆದರೆ ಈಗ ಇದೆಲ್ಲ ಕೇಳಿಸುವ ಹಾಗಿಲ್ಲ. ಬೆಳಕು ಹರಿಯಿತೇ? ಎಲ್ಲ ಕಡೆ ಕೆಂಪು ಪ್ರಕಾಶವಿದೆ. ಅಥವಾ ರಾತ್ರಿಯಾಗಿರಬಹುದೇ? ಆಗಲೂ ಎಲ್ಲೆಡೆ ಕೆಂಪು ಪ್ರಕಾಶ. ಈಗ ಕಾಲ ಪುರುಷನೇ ಮೈಮೇಲಿನ ಹಗಲು.ರಾತ್ರಿಯ ಹಳೆ ಬಟ್ಟೆಯನ್ನು ಕಿತ್ತೊಗೆದು ಕೆಂಪಾದ ಹೆಣದ ಬಟ್ಟೆ ಧರಿಸಿ ನನ್ನನ್ನು ದಿಟ್ಟಿಸುತ್ತಾ ಕೂತಿದ್ದಾನೆ.

ಮತ್ತು ನಾನು ಆತನನ್ನೆ ದಿಟ್ಟಿಸುತ್ತಿದ್ದೇನೆ!

ಈಗ ಇಲ್ಲಿ ದಟ್ಟವಾದ ಶಾಂತತೆ ಇದೆ. ನಾನು ಕೂಗದ ವಿನಾ ಇಲ್ಲಿ ಶಬ್ದ ಹುಟ್ಟುವ ಹಾಗಿಲ್ಲ. ನನ್ನ ಸಂಗಾತಿಯಾದ ನೆರಳನ್ನು ಹೊತ್ತು ಅಲುಗಾಡಿದರೇನೆ ನನ್ನ ಚಲನವಲನ, ಸದ್ದು; ಚಲನವಲನದಲ್ಲಿ ಎಷ್ಟು ತನ್ಮಯನಾಗಿದ್ದೆನೆಂದರೆ ಅದೆಲ್ಲ ಮಾಯವಾದ ಕೂಡಲೆ ನನಗೆ ಒಮ್ಮೆಲೆ ಎಲ್ಲವೂ ಶೂನ್ಯವೆನಿಸುತ್ತದೆ. ಪರಿಚಿತ, ಕೌಟುಂಬಿಕ ಧ್ವನಿಗಳ ಬದುಕಿಗೆ ಇಂಥ ಬೆಚ್ಚಗಿನ ಒಳ ಆವರಣಗಳ ಇರುತ್ತದೆಯೇನು? ಮುಂಜಾನೆ ದೇವಾಲಯದಲ್ಲಿ ಮೊಳಗುವ ಭಜನೆ, ಮೇಯುವ ಆಕಳಿನ

ಕೊರಳ ಗಂಟೆಯ ನಾದ, ಕಾಲ್ಗೆಜ್ಜೆಯ ಝುಣ ಕಾರ, ಪಕ್ಕದಲ್ಲಿ ಹಾದು ಹೋಗುವ ಹೆಂಗಸರ ಹೊಸ ರೇಶ್ಮೆ ಸೀರೆಯ ಸರಭರ ಸಪ್ಪಳ .....

ಈಗ ಇದೆಲ್ಲ ಮರೆಯಾಗುತ್ತಿದೆ. ಈ ಕೆಂಪು ಪ್ರಕಾಶದ ಪ್ರಖರತೆಯಲ್ಲಿ ನನ್ನ ಆಸೆಆಮಿಷ ಗಳೆಲ್ಲ ಸುಟ್ಟು ಹೋಗುತ್ತಿವೆ. ಇದಕ್ಕಾಗಿ ಮನುಷ್ಯ ಇಷ್ಟೆಲ್ಲ ಹಪಾಹಿಯಾಗುತ್ತಾನೋ? ಇಂದ್ರಿಯಗಳನ್ನು ತುಚ್ಛವಾಗಿ ಕಾಣುತ್ತಾನೋ? ಅನಂತರ ಕೊನೆಗುಳಿಯುವುದು ಏನು - ಸುಲಿದ ಊದು ಬತ್ತಿಯ ಒಂದು ನಗ್ನ ರೇಖೆ? ನಮ್ಮ ಮೋಕ್ಷ ಮತ್ತು ಬದುಕು ಅಂದರೆ ಅದರ ಚಿಂತನೆ. ಬಟ್ಟೆಯ ಅಡ್ಡ-ಅಗಲ ಎಳೆಗಳನ್ನು ಒಂದೊಂ ದಾಗಿ ಕಿತ್ತೊಗೆದ ಬಳಿಕ ಕೊನೆಗೇನು ಉಳಿಯು ತ್ತದೋ ಅದರ ಚಿಂತನೆ ಮಾಡುತ್ತ ಕರಗುವುದು! ಕರಗಲು 'ನಾನು' ಎನ್ನುವುದು ಉಳಿಯುವುದೇ ಇಲ್ಲ. ಚಿಂತನೆಯಲ್ಲಿ ಕರುಳಿನ ವೇದನೆ ಇಲ್ಲ. ಮತ್ತು ಅದರೊಳಗೆ ಕರಗುವಂಥದ್ದು ಏನೂ ನಿರ್ಮಾಣವಾಗುವುದಿಲ್ಲ. ಕೊನೆಗೆ ರಾಜನ ಮೈಮೇಲೆ ಬಟ್ಟೆಯೇ ಇಲ್ಲ, ಬಟ್ಟೆಯೊಳಗೆ ರಾಜನಿಲ್ಲ. ಯಾಕೆಂದರೆ ಬಟ್ಟೆ ಮತ್ತು ರಾಜ ಎರಡೂ ಮೂಲತಃ ಇಲ್ಲವೇ ಇಲ್ಲ ....!''

ಅಷ್ಟರಲ್ಲಿ ಆತನ ಎದುರಿನ ಗೋಡೆಯ ಮೇಲೆ ಏನೋ ಚಲಿಸಿದಂತಾಯಿತು. ಮತ್ತು ಕಟ್ಟಿಗೆಯ ಬಾಗಿಲ ಚೌಕಟ್ಟು ಒಂದು ಗೇಣಿನಷ್ಟು ಮೇಲೆ ಸರಿಯಿತು. ಆತ ಚಕಿತನಾಗಿ ಅತ್ತ ನೋಡ ಲಾರಂಭಿಸಿದ. ಅದರೊಳಗಿಂದ ಊಟದ ತಟ್ಟೆ ಒಳಗೆ ಬಂತು, ಆತ ಬಡಿಸಿದ ತಾಟು ಒಳಗೆಳೆದು ಕೊಂಡು ಮೂಲೆಯಲ್ಲಿದ್ದ ಖಾಲಿ ತಾಟು ಮುಂದೆ ಸರಿಸಿದ. ತಕ್ಷಣ ಚೌಕಟ್ಟು ಮುಚ್ಚಿಕೊಂ ಡಿತು. ಆತ ಊಟದ ತಾಟು ಮೇಜಿನ ಮೇಲಿಟ್ಟ. ಅಂದರೆ ಈಗ ಸಾಕಷ್ಟು ರಾತ್ರಿಯಾಗಿಲ್ಲ! ಈಗ ಹಗಲು ರಾತ್ರಿಯನ್ನು ಬೆಳ್ಳಿಯ ತಾಟಿನಲ್ಲಿ ಎಣಿಸ ಬೇಕಾಗಬಹುದು. ವಾಸ್ತವಿಕವಾಗಿ ಆತನಿಗೆ ಅಷ್ಟೇನು ಹಸಿವೆಯಾಗಿರಲಿಲ್ಲ. ಈಗಂತೂ ತಾಟು ನೋಡಿದಾಕ್ಷಣ ಅಳಿದುಳಿದ ಹಸಿವೆಯೂ ಸತ್ತುಹೋಯಿತು. ಅಷ್ಟೇ ಅಲ್ಲ ಅನ್ನದ ಮೇಲೆ ಹೇಸಿಗೆ ಮೂಡಿತು. ತಾಟಿನ ಮೇಲೆ ಕೆಂಪು ಬೆಳಕು ಬಿದ್ದಿತ್ತು. ಮತ್ತು ಅದು ಮಾಂಸದ ಊಟದಂತೆ ಕಾಣಿಸುತ್ತಿತ್ತು. ಆತನಿಗೆ ಅನಿಸಿತು, ತಾನು ಬಣ್ಣದ ಗುಲಾಮನೂ ಆಗಿದ್ದೇನಲ್ಲ. ಆದರೆ ಕೆಂಪು ಹಣ್ಣು ತಿನ್ನುತ್ತೇವೆ. ಕೆಂಪು ಪಾನೀಯ ಸೇವಿಸುತ್ತೇವೆ. ಆದರೆ ಕೆಂಪು ಅನ್ನ, ಕೆಂಪು ಹಾಲು ಏಕೆ ನಿರಾಕರಿಸುತ್ತೇವೆ. ಆತ ಹೇಸಿದವನಂತೆ ತಾಟನ್ನು ಹಾಗೇ ಬದಿಗೆ ಸರಿಸಿ ಮೇಲಕ್ಕೆದ್ದ.

ಎಡಗಡೆಯ ವರ್ತುಳದ ಕೋಣೆಗೆ ಹೋಗ ಬೇಕಾದರೆ ತೆವಳದೆ ಗತ್ಯಂತರವಿಲ್ಲ. ತನ್ನ ದೇಹ ಸಂಕುಚಿತಗೊಳಿಸಿ ತೆವಳುತ್ತಿದ್ದಾಗ ಆತನಿಗೆ ಅನಿ ಸಿತು; ಎದ್ದು ನಿಂತಿದ್ದರೆ, ಕೂತಿದ್ದರೆ ಕೊನೆಪಕ್ಷ ಮನುಷ್ಯ ಎಂದಾದರೂ ಅನಿಸಬಹುದಿತ್ತು. ಆದರೆ ಈಗ ಮರ್ಯಾದೆಯು ಉಳಿಯಲಿಲ್ಲ. ಈಗ ನಾನು ಮನುಷ್ಯನಲ್ಲ, ಆದರೆ ಕತ್ತಲೆಯಲ್ಲಿ ಉಸಿ ರಾಡಿಸುವ, ಬೆಳೆಯುವ ಮತ್ತು ಕೊನೆಗೊಂದು ದಿನ ಸಾಯುವ ಒಂದು ಕ್ಷುಲ್ಲಕವಾದ ಉರಗ! ನೀಲಿ ಕೆಂಪು ಮಿಶ್ರಿತವಾದ ಬೆಳಕಿನಲ್ಲಿ ಇಳಿಯುತ್ತ ನಾನು ಗರ್ಭಾಶಯಕ್ಕೆ ಬಂದು ತಲುಪಿದ್ದೇನೆ. ಅಷ್ಟೆ ಅಲ್ಲ, ಈಗ ಉತ್ಪತ್ತಿ ಮಾರ್ಗದಿಂದ ಹಿಮ್ಮುಖವಾಗಿ ಹೊರಟಿದ್ದೇನೆ. ಮೊದಲು ಮನುಷ್ಯ ನಂತರ ಉರಗ, ಆಮೇಲೆ ಅಣುಜೀವಿ ಕೊನೆಕೊನೆಗೆ ಮಾತ್ರ ಶೂನ್ಯ, ಶರೀರದ ದೃಷ್ಟಿ ಯಿಂದಲೂ ಶೂನ್ಯ!

ಸ್ನಾನಗೃಹದಲ್ಲಿ ಕೇವಲ ಸ್ನಾನ ಮಾಡು ವಷ್ಟೇ ಇಕ್ಕಟ್ಟಾದ ಸ್ಥಳವಿತ್ತು. ಅಲ್ಲೊಂದು ಸರ್ವಸಾಕ್ಷಿಯಾಗಿ ನಿಂತ ಕೆಂಪು ದೀಪ. ಗೋಡೆಗೆ ಅಮೃತ ಶಿಲೆಯ ಕಲ್ಲು. ಒಂದು ಮಾಡಿನಲ್ಲಿ ಸೌಂದರ್ಯ ಪ್ರಸಾದನದ ವಸ್ತುಗಳಿದ್ದವು. ಆತ ಎದುರಿನ ನಲ್ಲಿಯನ್ನು ತಿರುಗಿಸಿದಾಗ ಬಿಸಿ ನೀರು ಚಿಮ್ಮಿತು. ಆತ ಕೈ ತೊಳೆದು ನಲ್ಲಿಯನ್ನು ನಿಲ್ಲಿ ಸಿದ. ಮತ್ತು ಅಲ್ಲಿಂದ ಬೇರೊಂದು ಮಾರ್ಗ ದಿಂದ ತೆವಳುತ್ತ ಮಲಗುವ ಕೋಣೆಗೆ ಬಂದ. ಅಲ್ಲೆ ಗೋಡೆಯೊಳಗೊಂದು ಹಲಿಗೆ ಇತ್ತು. ಅದರ ಮೇಲೊಂದು ತುಪ್ಪಳದ ಹಾಸಿಗೆ ಇತ್ತು. ಅದನ್ನು ಕೆಳಗಿನ ಹಲಿಗೆಗೆ ಶಾಶ್ವತವಾಗಿ ಜೋಡಿಸ

ಲಾಗಿತ್ತು. ಆತ ಅದನ್ನೇರಿ ಮೈ ಚಾಚಿದ. ಅಂಥ ಸ್ಥಿತಿಯಲ್ಲೂ ಆತನಿಗೆ ತುಪ್ಪಳದ ಹಾಸಿಗೆ ಸುಖಕರವೆನಿಸಿತು. ಆದರೆ ಚಾಚಿದ ಕಾಲು ಎದುರಿನ ಗೋಡೆಗೆ ಬಡಿಯಿತು. ಮತ್ತು ತಲೆಯ ಬಳಿ ಕೇವಲ ನಾಲ್ಕೇ ಬೆರಳಿನಷ್ಟು ಸ್ಥಳ ಉಳಿಯಿತು. ಕೈ ಚಾಚಿದರೆ ಎದುರಿಗೆ ಗೋಡೆ. ಆತನಿಗೆ ಅನಿಸಿತು; ಇಷ್ಟೆ, ಅಂಗಾತು ಮಲಗೋದು, ನಿಲ್ಲೋದು, ಮತ್ತು ಕಾಲು ಮಡಚಿ ಕೂಡ್ರುವುದು. ಇದೇ ನನ್ನ ಈಗಿನ ಮೂರು ಅವಸ್ಥೆಗಳು. ಇದು ಬದುಕಿನ ಸಲಾಕೆಯ ಮೇಲೆ ನಿಂತ ಒಂದು ತ್ರಿಶೂಲ!

ಮೊದಲ ಸಲ ಆ ತುಪ್ಪಳದ ಹಾಸಿಗೆ ಮೇಲೆ ಆತನಿಗೆ ನಿದ್ದೆ ಹತ್ತಲಿಲ್ಲ. ಕೆಂಪು ತೆರೆಗಳ ಮೇಲೆ ಸತತವಾಗಿ ಹೊಯ್ದಾಡುವಂತೆ ಆತ ಅಸ್ವಸ್ಥಗೊಂಡು ಆಗಾಗ ಎಚ್ಚರಗೊಳ್ಳುತ್ತಿದ್ದ. ಆತನಿಗೊಮ್ಮೆ ಅನಿಸಿತು; ಸುತ್ತಲಿನ ಗೋಡೆಯೊಳಗಿನಿಂದ ಹುರಿಯಂಥ ಸ್ನಾಯುವುಳ್ಳ ಒಂದು ಭಯಂಕರ ಕಪ್ಪು ಕೈ ಹೊರಚಾಚಿ ಆತನ ಗಂಟಲನ್ನು ಹಿಚುಕಿತು; ಉಸಿರು ಗಟ್ಟಿದಂತಾಗಿ ಆತ ಒಮ್ಮೆಲೇ ಚೀರಿದ. ತಕ್ಷಣ ಆ ಕೈ ಮಾಯವಾಯಿತು. ಮತ್ತು ಗೋಡೆಯ ರೂಪ ಧರಿಸಿ ತಟಸ್ಥವಾಯಿತು. ಆದರೆ ಅದು ಪಿಸುಗುಟ್ಟಿತು; ಇಂದಿಲ್ಲ ನಾಳೆ, ನೀನೆಲ್ಲಿ ಹೋಗ್ತೀಯಾ? ನಾವು ಗಂಟಲು ಹಿಚುಕುವಾಗ ಪ್ರತಿಸಲ ನಿನಗೆ ಎಚ್ಚರವಾಗುತ್ತದೆಂದು ತಿಳಿಯಬೇಡ ......!

........ ಕೆಲ ಕ್ಷಣ ಕೆಂಪು ದೀಪ ಮಾಯವಾಯಿತು. ಈಗಾತ ಸ್ನಾನಗೃಹದಲ್ಲಿ ನಿಂತಿದ್ದ. ಸುತ್ತಲಿನ ಗೋಡೆ ಅದರೊಳಗಿನ ಕಪ್ಪು, ಮಂಜು ಕರಗಿದಂತೆ ಪಾರದರ್ಶಕವಾಯಿತು. ಅಲ್ಲದೆ ಆತನಿಗೆ ಎದುರಿಗೆ ಹಸಿರಾದ ಹುಲ್ಲು, ಅದರೊಳಗೆ ದೀವಟಿಗೆ ನೆಟ್ಟಂತೆ ಕಾಣುವ ಕೆಂಪು ಹಳದಿ ಎಲೆಗಳ ಗಿಡಗಳು ಕಾಣಿಸಿದವು. ಕೆಲ ಅಂತರದಲ್ಲಿ ಗುಡ್ಡದ ಪಕ್ಕದಲ್ಲಿ ಹರಿಯುವ ಪ್ರಶಾಂತ ನದಿ, ಮತ್ತೆ ಮೇಲೆ ನಭದಲ್ಲಿ ಸಾಲಾಗಿ ಹಾರಾಡುವ ಬೆಳ್ಳಕ್ಕಿಗಳು ಗೋಚರಿಸಿದವು. ನೀರಿನೊಳಗೆ ಕೆಲವು ನಗ್ನ ತರುಣಿಯರು ಜಲ ಕ್ರೀಡೆಯಾಡುತ್ತಿ



ದ್ದರು. ಅವರಲ್ಲಿ ಒಬ್ಬಾಕೆ ಈ ಪಾರದರ್ಶಕ ಗೋಡೆಯ ಸನಿಹಕ್ಕೆ ಧಾವಿಸಿ ಬಂದು ಆತನ ಎದುರು ನಿಂತು ಹೊಳೆಯುವ ಬಂಗಾರದ ನಾಣ್ಯದಂತೆ ನಕ್ಕಳು. ಆಕೆಯ ಹಾದಿ ಕಾಯುತ್ತ ನಿಂತ ಗೊಂಬೆಯಂಥ ಒಬ್ಬ ತರುಣ ಆಕೆಯ ಪಕ್ಕದಲ್ಲಿ ಬಂದು ನಿಂತ. ಕೂದಲಿನ ಕೇದಗೆಯಂತೆ ಆ ಬಳುಕುವ ದೇಹಗಳು ಪರಸ್ಪರ ತೆಕ್ಕೆ ಹಾಕಿದವು. ಅನಂತರ ಆ ತರುಣ ಮೆಲ್ಲಗೆ ಆಕೆಯನ್ನು ದಟ್ಟ ಗಿಡಗಳ ಮರೆಗೆ ಕರೆದೊಯ್ದ.

ಅವರನ್ನು ನೋಡುತ್ತಿದ್ದಂತೆ ಪಾರದರ್ಶಕ ಗೋಡೆಯ ಈ ಕಡೆ ನಿಂತ ಆತನಿಗೆ ತಣ್ಣೀರು ಸುರಿದಂತಾಯಿತು. ಕಾಲ ಕೆಳಗಿನ ಹಸಿ ಹುಲ್ಲು ಹಿಚುಕಲ್ಪಟ್ಟಿತು. ರಕ್ತ ಮಾಂಸದ ಬೆಚ್ಚಗಿನ ಹೊಂಬಣ್ಣ, ಸೂರ್ಯ ಕಿರಣದೊಳಗೆ ಬೆರೆತಂತೆ ಕಾಣುವ ಆ ತರುಣಿಯ ನೆನಪಿನಿಂದ ಆತನ ಇಡೀ ದೇಹ ಕಾಮವಾಸನೆಯಿಂದ ಭುಗಿಲ್ಲೆಂದು ಕೆರಳಿತು. ಆದರೆ ಈಗ ಪಾರದರ್ಶಕ ಗೋಡೆಗಳು ಮತ್ತಷ್ಟು ಸನಿಹಕ್ಕೆ ಬರಲಾರಂಭಿಸಿದವು. ಅಷ್ಟರಲ್ಲಿ ಒಂದು ದೈತ್ಯಾಕಾರ ನೀರಿನೊಳಗಿಂದ ಹೊರಬಿದ್ದು ಆಕಾಶದವರೆಗೆ ಬೆಳೆದು ನಿಂತಿತು. ಅದು ತನ್ನ ಕೈಯೊಳಗಿದ್ದ ಖಡ್ಗದಿಂದ ಒಂದೊಂದೆ ಬೆಳ್ಳಕ್ಕಿಯನ್ನು ಕತ್ತರಿಸಿದಾಕ್ಷಣ ಇಡೀ ನದಿಯ ನೀರು ಕೆಂಪಾಯಿತು. ಅನಂತರ ಅದು ಜಲಕ್ರೀಡೆಯಾಡುವ ತರುಣಿಯರನ್ನು ಕಾಲಿನಿಂದ ತುಳಿಯಿತು. ನೀರು ಕೆಂಪಾಗಿ ಗೋಡೆಗೆ ಬಂದು ಅಪ್ಪಳಿಸಲಾರಂಭಿಸಿತು. ಕೈಯನ್ನು ಬಲವಾಗಿ ಅಪ್ಪಳಿಸಿ ಗಿಡಗಳನ್ನೆಲ್ಲ

ವಿಧ್ವಂಸ ಮಾಡಿತು. ತಲ್ಲೀನರಾಗಿದ್ದ ಆ ತರುಣ-ತರುಣಿಯರನ್ನು ಮೇಲಕ್ಕೆತ್ತಿ ಸೀಳಿ ಒಗೆಯಿತು. ಕೆಂಪು ಬಿಸಿ ನೀರಿನ ಪ್ರವಾಹದ ವೇಗ ಒಮ್ಮೆಲೆ ಹೆಚ್ಚಾಯಿತು. ಎಲ್ಲ ಕಡೆಯಿಂದ ಒಳ ನುಗ್ಗಿದ ನೀರು ಛಾವಣಿಯವರೆಗೂ ಏರಿತು. ಇದನ್ನು ಕಂಡು ಆತ ಒಮ್ಮೆಲೆ ಚೀರಿದ - ನಾನೀಗ ಮುಳುಗುತ್ತಿದ್ದೇನೆ! ಮೂಗು ಬಾಯೊಳಗೆ ನೀರು ಸೇರುತ್ತಿದೆ! ದೂರದಲ್ಲಿದ್ದ ಆ ದೈತ್ಯ ಮಠಾಧೀಶನ ಸ್ವರದಲ್ಲಿ ಹೇಳಿದ. ನಿನ್ನ ಮೂಗು, ಬಾಯೊಳಗೆ ಹೇಗೆ ನೀರು ಸೇರುತ್ತದೆ? ನಿನ್ನ ತಲೆ ನನ್ನ ಬಳಿಯಿದೆ. ಮತ್ತು ಆತ ಆ ತಲೆಯನ್ನು ಜೋರಾಗಿ ಬೀಸಿ ಒಗೆದ. ಅದು ಮೆಟ್ಟಲಿಗೆ ಅಪ್ಪಳಿಸಿ ಗುಹೆಯ ಮಾರ್ಗದಿಂದ ಉರುಳುತ್ತ - ಉರುಳುತ್ತ ಆತನ ಬಳಿಗೆ ಬಂದಿತು. ಭಯಂಕರವಾದ ತಲೆ ಸಿಡಿಯುವ ವೇದನೆಯಿಂದ ಬಳಲುತ್ತ ಆತನನ್ನು ಅಂಟಿಕೊಂಡಿತು. ಆಗ ಆತನ ಸ್ವರ ಮತ್ತೆ ಸಹಾಯಕ್ಕೆ ಬಂತು. ಆತ ಎಚ್ಚರಗೊಂಡ. ಮೂರ್‍ನಾಲ್ಕು ಕಡೆ ಗೋಡೆಗೆ ಬಡಿದು ನೋಯುತ್ತಿದ್ದ ತಲೆಯನ್ನು ಆತ ಗಟ್ಟಿಯಾಗಿ ಹಿಡಿದುಕೊಂಡ - ಹಾಗೂ ಮೇಲೆ ಎದ್ದು ಕುಳಿತ.

ಬಹಳ ಹೊತ್ತು ಆತನಿಗೆ ತನಗೇನಾಗುತ್ತಿದೆ ಎನ್ನುವುದೇ ತಿಳಿಯಲಿಲ್ಲ ಅನಂತರ ಆತನಿಗೆ ಹಸಿವೆಯಾಗಿದ್ದರ ಅರಿವು ಆಯಿತು. ಆತನು ದೇಹ ಎಳೆಯುತ್ತ ಆಸನದ ಸಮೀಪ ಬಂದ. ಮೇಜಿನ ಮೇಲೆ ಊಟದ ತಟ್ಟೆ ಇನ್ನೂ ಹಾಗೆ ಇತ್ತು. ಆತ ಕ್ಷಣ ಕಾಲ ಗೊಂದಲಕ್ಕೊಳಗಾದ. ಕೆಂಪು ಅನ್ನದ ಮೇಲಿನ ವಾಸನೆ ಇನ್ನೂ ಹೋಗುತ್ತಿರಲಿಲ್ಲ. ದೀಪ ಮತ್ತು ತಾಟಿನ ನಡುವೆ ಎಡಗೈ ಹಿಡಿದ. ಕೆಂಪು ಅನ್ನಕ್ಕಿಂತಲೂ ಕಪ್ಪು ಅನ್ನ ಹೆಚ್ಚು ರುಚಿ ಅನಿಸಬಹುದೇ? ಆತ ಒಂದು ತುತ್ತು ತಿಂದು ನೋಡಿದ. ಪರವಾಗಿಲ್ಲ, ರುಚಿಯಾಗಿದೆ. ಎರಡು ತುತ್ತು ತಿಂದ ಬಳಿಕ ಅಂಗೈ- ತೆಗೆದ. ಕೆಂಪು ಬಣ್ಣದಿಂದ ರುಚಿ ಬದಲಾಗದೇ ಇರುವುದನ್ನು ಕಂಡು ಆತ ಕೆಲ ಕ್ಷಣಗಳಲ್ಲಿ ತಾಟು ಖಾಲಿ ಮಾಡಿದ. ತೊಳೆದ ತಾಟು ಮೇಜಿನ ಮೇಲಿಡುವಾಗ ಅದು ಹೊಳೆಯಿತು. ಅದರ ಪ್ರತಿಬಿಂಬ ಗೋಡೆ - ಛಾವಣಿ ಮೇಲೆ ಮೂಡಿತು. ಆತನಿಗೆ ಇದರ ಬಗ್ಗೆ ಕುತೂಹಲ ಹುಟ್ಟಿತು. ಈಗ ಆತ ಮತ್ತೊಮ್ಮೆ ತಾಟನ್ನೆತ್ತಿ ಬೆಳಕಿಗೆ ಹಿಡಿದ. ಒಂದು ಅದೃಶ್ಯ ಕೈ ತಡಕಾಡುತ್ತ ಗೋಡೆಯನ್ನು ಸವರುವಂತೆ ಬೆಳಕು ಮೂಡುತ್ತ ಹೋಯಿತು. ಅನಂತರ ಆತ ತಾಟು ಮೇಜಿನ ಕೆಳಗಿಟ್ಟು ಹಾಸಿಗೆಯಿದ್ದ ಕಡೆ ಹೊರಟ. ಹೋಗುವಾಗ ಆತನಿಗೆ ಅನಿಸಿತು; ಇಲ್ಲಿ ಬದುಕಿ ಉಳಿಯಬೇಕಾದರೆ ಈವರೆಗಿನ ತನ್ನ ಬದುಕಿನ ಮಗ್ಗುಲನ್ನೇ ಬದಲಾಯಿಸಬೇಕು!

ಆದರೆ ಕೆಲಕ್ಷಣಗಳ ಬಳಿಕ ತುಪ್ಪಳದ ಹಾಸಿಗೆಯ ಬಗ್ಗೆಯೂ ಹೇಸಿಗೆ ಮೂಡಿತು. ಊಟದ ಬಳಿಕ ಹಾಸಿಗೆ ಮೇಲೆ ಹೊರಳಿದರೂ ನಿದ್ದೆ ಬರುತ್ತಿಲ್ಲ. ಈಗ ಎಷ್ಟು ಹೊಡೆದಿರಬಹುದು? ರಾತ್ರಿ ಆಗಿರಬಹುದೇ? ಅಥವಾ ಹೊರಗೆ ಮಧ್ಯಾಹ್ನದ ಬಿಸಿಲಿದ್ದಾಗ ತಾನು ಮಾತ್ರ ರಾತ್ರಿಯ ನಿದ್ದೆಯ ಹಾದಿ ಕಾಯುತ್ತಿಲ್ಲವಲ್ಲ? ಮೊದಲನೇ ತಾಟು ರಾತ್ರಿಯದು. ಅನಂತರ ಮಧ್ಯಾಹ್ನದ್ದು. ಮತ್ತೆ ರಾತ್ರಿ ಪುನಃ ಹಗಲು. ಆದರೆ ಆಮೇಲೆ ಮಾತ್ರ ಲೆಕ್ಕಾಚಾರದಲ್ಲಿ ಏನೋ ಗೊಂದಲವಾಯಿತು. ತಾಟು ನಿಯಮಿತವಾಗಿ ಬರುತ್ತಿದ್ದರೂ ಕಾಲ ಮಾತ್ರ ತಪ್ಪಿಸಿಕೊಂಡಿತು. ಅಂದ ಮೇಲೆ ಮಲಗುವ ವೇಳೆಯಾದರೂ ಯಾವುದು? ಕೊನೆಗೆ ಸಮಯದ ನಿಜವಾದ ಅಳತೆ ಗೋಲು ಯಾವುದು? ನಿದ್ದೆ ಯಾವಾಗ ಬರುತ್ತದೋ ಅದೇ ನಿದ್ದೆಯ ವೇಳೆ, ಹಸಿವಾದಾಗ ಊಟದ ವೇಳೆ! ಸೂರ್ಯ ಫಾಲತೂ ಮನುಷ್ಯ. ಆತನಿಗೂ ಜಠರಕ್ಕೂ, ಕಣ್ಣಿಗೂ ಯಾವ ಸಂಬಂಧವೂ ಇಲ್ಲ. ಆತ ಮಲಗಿದಲ್ಲೇ ಎದುರಿನ ಗೋಡೆ ನೋಡುತ್ತಿದ್ದ. ಆತ ಎದ್ದು ಕುಳಿತು ಪುನಃ ದಿಟ್ಟಿಸಿದ. ಗೋಡೆ ಮೇಲೆ ಸ್ವಲ್ಪ ಎತ್ತರಕ್ಕೆ ಒಂದು ಅಗಲವಾದ ರೇಖೆ ಇದೆ. ಅದರ ಮೇಲೊಂದು ಚೌಕೋನವಿದೆ, ಕೆಳಗಿನ ರೇಖೆಯ ಬಳಿ ಒಂದು ಚಿಕ್ಕ ಚಿಲಕವನ್ನು ಗೋಡೆಯೊಳಗೆ ನೆಡಲಾಗಿದೆ. ತಾನಿಷ್ಟು ಹೊತ್ತು ಮಲಗಿದ್ದರೂ ನನ್ನ ಗಮನಕ್ಕೆ ಇದು ಬರಲೇ ಇಲ್ಲವಲ್ಲ ಎಂದು ಆತನಿಗೆ ಅಚ್ಚರಿಯಾಯಿತು. ಆತ ಮೇಲಕ್ಕೆದ್ದ. ಆ ಚೌಕೋನಾ

ಕೃತಿಯ ಮೇಲೆ ಬಡಿದು ನೋಡಿದ. ಆದರೆ ಅಲ್ಲಿಂದ ಜಡ ಹಾಗೂ ನಿರ್ಜೀವ ಸದ್ದು ಹೊರಟಿತು. ಆತ ಉಗುರಿನಿಂದ ಆ ಚಿಲಕದ ಬಳಿಯಿದ್ದ ಹಳಿಯನ್ನು ಕೆದರಿದ. ಅದನ್ನು ಮುಂದಕ್ಕೆಳೆಯಲು ಪ್ರಯತ್ನಿಸಿದ. ಆದರೆ ಅದು ಮುಂದೆ ಬರದೆ, ತಟ್ಟನೆ ಮೇಲೆ ಸರಿಯಿತು. ಪರಿಣಾಮ, ಗೋಡೆ ಮೇಲಿನ ಇಡಿ ಚೌಕೋನವೇ ಮೇಲೆ ಸರಿದಿತ್ತು. ಅನಂತರ ಅಲ್ಲಿ ನೋಡಿದ ದೃಶ್ಯದಿಂದ ಆತ ಸ್ಥಂಬೀಭೂತನಾದ. ಭಯದಿಂದ ಹಾಸಿಗೆಯ ಮೇಲೆ ಉರುಳಿದ. ಗೋಡೆಯೊಳಗೊಂದು ದೊಡ್ಡ ಗೂಡಿತ್ತು. ಚೌಕೋನ ಮೇಲೆ ಸರಿಯಲಾರಂಭಿಸಿದಾಗ ಒಳಗಿನ ಮೂರು ಭಾಗದಲ್ಲಿದ್ದ ದೀಪ ಒಮ್ಮೆಲೇ ಹೊತ್ತಿಕೊಂಡಿತು. ಗೂಡಿನೊಳಗೆ ರೇಶ್ಮೆ ಬಟ್ಟೆಯಿಂದ ಸುತ್ತಿದ ಒಂದು ಹಲಗೆ ಇತ್ತು. ಅದರ ಎದುರಿಗೆ ಗಟ್ಟಿಯಾದ ಒಂದು ಗಾಜು ಜೋಡಿಸಲಾಗಿತ್ತು. ಆ ಗಾಜಿನ ಹಿಂದಿನ ಕರಿ ಮಖಮಲ್ಲಿನ ಪರದೆಯ ಎದುರು ಕಾಲು ಮಡಚಿ ಕೂತ ಮೂರು ಅಸ್ಥಿಪಂಜರಗಳಿದ್ದವು. ತಮ್ಮ ಹೆಗಲ ಮೇಲಿಂದ ಕೆಂಪು ಪ್ರಕಾಶವನ್ನು ಹೊರಚೆಲ್ಲುತ್ತ ಆ ಶುಷ್ಕ ಅಸ್ಥಿಪಂಜರಗಳು ಬಹಳ ದಿವಸಗಳಿಂದ ಹಾದಿಕಾಯುತ್ತ ಕೂತವರಂತೆ ಅವನನ್ನೇ ದಿಟ್ಟಿಸಲಾರಂಭಿಸಿದವು.

ಅವು ಕಿವಿಯಿಂದ ಕಿವಿಯವರೆಗೆ ತಮ್ಮ ಅಗಲವಾದ ಹೊಲಸು ಹಲ್ಲುಗಳನ್ನು ಕಿರಿಯುತ್ತ ನಗುತ್ತಿದ್ದವು!

ಒಂದು - ಎರಡು - ಮೂರು. ಇವರು ನನಗಿಂತ ಮೊದಲಿನ ಸ್ವಾಮಿಗಳು. ತುಳಸೀ ವೃಂದಾವನದಲ್ಲಿ ಕೆಲ ದಿನ ವಾಸಿಸುವುದಕ್ಕಾಗಿ ಅವರು ಹೊರಗಿನ ಪ್ರವಾಸಕೈಕೊಂಡರು. ಅನಂತರ ಮತ್ತೆ ತಮ್ಮ ಸ್ವಸ್ಥಾನಕ್ಕೆ ಹಿಂದಿರುಗಿದ್ದರು. ಇಷ್ಟು ದಿನ ಮಾಂಸಲ ತುಟಿಯೊಳಗೆ ಹುದುಗಿದ್ದ ಆ ಹಾಸ್ಯ ಈಗ ಮುಕ್ತವಾಗಿ ವ್ಯಕ್ತಪಡಿಸುತ್ತಿದ್ದರು. ಅಲ್ಲದೆ ಅವರ ಪಕ್ಕದಲ್ಲಿ ಇನ್ನೂ ಎರಡು ಸ್ಥಳ ಖಾಲಿ ಇತ್ತು. ಅದರೊಳಗಿನ ಒಂದು ಸ್ಥಳ ಮಾತ್ರ ತನಗಾಗಿಯೇ ಮೀಸಲಾಗಿತ್ತು. ಹಾಸಿಗೆಯ ಹಲಿಗೆಯಿಂದ ಅಲ್ಲಿಯವರೆಗೆ ಕೇವಲ ಒಂದು ಕೈಯಗಲದ ಪ್ರವಾಸ.

ಆಕಸ್ಮಿಕವಾದ ಭಯದಿಂದ ಥರಥರ ಕಂಪಿಸುತ್ತಿದ್ದ ಆತನ ದೇಹ ಸ್ಥಿಮಿತಕ್ಕೆ ಬರಲು ಸಾಕಷ್ಟು ವೇಳೆ ಹಿಡಿಯಿತು. ಆತ ಚಿಲಕವನ್ನು ಕೆಳಗೆ ಜಗ್ಗಿದ. ಆಗ ಕೆಂಪು ದೀಪ ಆರಿತು. ಭೂಮಿಯಿಂದ ತಲೆಯೆತ್ತಿದ ಗಡ್ಡೆಗಳಂತೆ ಅಸ್ಥಿಪಂಜರಗಳು ಮಾಯವಾದವು. ಬಾಗಿಲು ಪೂರ್ಣ ಕೆಳಗಿಳಿದ ಬಳಿಕ ಮೇಲ್ಭಾಗದಲ್ಲೆಲ್ಲೋ ಖಟ್ಟೆಂದು ಸಪ್ಪಳವಾಯಿತು. ಆತ ಮೇಲಕ್ಕೆದ್ದು ಆಸನದ ಕಡೆಗೆ ಹೊರಟ. ಪಕ್ಕದಲ್ಲಿದ್ದ ಆ ಅಸ್ಥಿಪಂಜರಗಳು ಬಾಗಿಲಿನಿಂದ ಪಹರೆ ಮಾಡುತ್ತಿರುವಾಗ, ಅಂಥಲ್ಲಿ ಮಲಗುವ ಧೈರ್ಯವಾಗಲಿಲ್ಲ. ಆತ ಆಸನದ ಮೇಲೆ ಮುದ್ದೆಯಾಗಿ ಕುಳಿತ ಕುಳಿತಲ್ಲೇ ನಿದ್ದೆ ಮಾಡಲು ಪ್ರಯತ್ನಿಸಿದ. ಆಗ ಆತನಿಗೆ ತನ್ನ ಹಣೆ ಒದ್ದೆಯಾಗಿರುವುದು ಗಮನಕ್ಕೆ ಬಂತು. ಅದನ್ನು ತನ್ನ ಕೈಯಿಂದ ಒರೆಸಿದ ಹಾಗೂ ಹುಚ್ಚನಂತೆ ಸುಮ್ಮನೆ ಅಂದರೆ ಈಗ ಪ್ರಾಣಿಯಂತೆ ಹೀಗೆಯೇ ಕೂತು ಮಲಗುವ ಅಭ್ಯಾಸ ಮಾಡಬೇಕೇನೋ! ಎಲ್ಲ ಹಣೆ ಬರಹ. ಗಂಟೆ ಗಟ್ಟಲೆ ಕಾಲು ಮಡಚಿ ಕೂತು ಅತ್ತಿತ್ತ ತೆವಳುತ್ತಲೆ ಕಾಲ ಕಳೆಯಬೇಕು. ಕೊನೆ ಪಕ್ಷ ಹಾಸಿಗೆಯ ಮೇಲೆ ಉರುಳುವ ಸುಖವಾದರೂ ಇತ್ತು, ಈಗ ಅದೂ ಸಹ ಕೈ ತಪ್ಪಿ ಹೋಗುತ್ತದೋ ಏನೊ?

ಆದರೆ ಮೃತ್ಯುವಿನ ತ್ರಿಶೂಲದಂತಿರುವ ಈ ಮೂರು ಸ್ವಾಮಿಗಳು ಪಕ್ಕದಲ್ಲಿದ್ದಾಗ ನಿದ್ದೆಯಾದರೂ ಬಂದೀತೆ? ಆತನಿಗೆ ತಾನು ಅಸಹಾಯಕನಾದಂತೆನಿಸಿತು. ಆದರೆ ತಕ್ಷಣ ಕೆರಳಿದ. ಎಲ್ಲರೂ 'ನನ್ನ'ನ್ನು ಮೂಲೆಗೆ ತಳ್ಳಿ ಕತ್ತು ಹಿಚುಕುವ ಪ್ರಯತ್ನ ಮಾಡುತ್ತಿರಬಹುದೇ? ಈ ನಿರ್ಜೀವ ಎಲುಬಿನ 'ನಾನು' ಇಲ್ಲೇ ಮಲಗಬೇಕು, ಇಂಥಲ್ಲಿ ಮಲಗಬಾರದು ಎಂದು ಹೇಳಲು ಈ ಅಸ್ಥಿಪಂಜರ ಯಾರು? ನಾನು ನಾಳೆಯ ಅಸ್ಥಿಪಂಜರವಾಗಿದ್ದರೂ ಈ ಕ್ಷಣಕ್ಕೆ, ಸಂಪೂರ್ಣ ಜೀವಂತವಾಗಿದ್ದೇನೆ. ಆತ ತೆರಳಿ ಮೇಲಕ್ಕೆದ್ದು ಸಿಟ್ಟಿನಿಂದ ಹಾಸಿಗೆ ಮೇಲೆ ಬಂದು ಕುಳಿತ. ಅಂಜಿಕೆ ಹೋಗಲಾಡಿಸಲು ಆತನು

ಬೇಕೆಂದೆ ತನ್ನ ಕಣ್ಣುಗಳಿಂದ ಎದುರಿನ ಗೋಡೆ
ಯನ್ನು ದಿಟ್ಟಿಸಿ ಹೇಳಿದ, 'ನನ್ನನ್ನು ಏನು ಮಾಡ
ಬೇಕೆಂದಿದ್ದಿರೋ ಒಮ್ಮೆ ಮಾಡಿ ಬಿಡಿ!' ಕರಡಿಯ
ಚರ್ಮ ಹೊದ್ದ ಮನುಷ್ಯನನ್ನು ಕಂಡು ಹೆದರು
ವಂತಿದೆ! ಅಲ್ಲಯ್ಯಾ, ಮೇಲಿನ ಚರ್ಮ ಕಿತ್ತೊಗೆ
ದರೆ ನೀನೂ ಅವರಂತೆ ಕಾಣಿಸುತ್ತಿ. ಈಗ ನಮ್ಮ
ನಡುವಿನ ವ್ಯತ್ಯಾಸವೆಂದರೆ ಕೇವಲ ಚರ್ಮ
ಹಾಗೂ ರಕ್ತ - ಮಾಂಸದ್ದು. ಅದೂ ಕೂಡ ಕೆಲ
ಕಾಲದವರೆಗೆ ಮಾತ್ರ. ಅನಂತರ 'ನಾನು' ಕೂಡ
ಅಲ್ಲೇ ಪಕ್ಕದಲ್ಲಿ ಕುಳಿತುಕೊಳ್ಳುತ್ತೇನೆ!

ಆತ ಆವೇಶದಿಂದ ಹುಚ್ಚು ಕಣ್ಣುಗಳಿಂದ
ದಿಟ್ಟಿಸುತ್ತ ಕುಳಿತ. ಆತ ಬೆಳೆದ ಕೂದಲನ್ನು
ಹಿಂದಕ್ಕೆ ಸರಿಸಿ ಉದ್ಧಟತನದಿಂದ ಹಾಸಿಗೆಯ
ಮೇಲೆ ಉರುಳಿದ.

ತಾಟಿನ ಚಕ್ರ ಉರುಳುತ್ತಲೇ ಇತ್ತು. ಆದರೆ
ಪ್ರತಿ ಸಲ ವಿಲಕ್ಷಣವಾದದ್ದೇನಾದರೂ ನಡೆಯು
ತ್ತದೆ ಎಂದು ಆತ ಮೇಲೆ ಸರಿಯುವ ಆ ಚೌಕ
ಟ್ಟನ್ನೇ ನೋಡುತ್ತಿದ್ದ. ಅದು ಪುನಃ ಮುಚ್ಚಿದಾ
ಕ್ಷಣ ಬಿಗಿಯಾದ ಮನಸ್ಸು ಮತ್ತೆ ಸಡಿಲಾಗು
ತ್ತಿತ್ತು, ಅದೂ ಆತನ ಊಟ ಮುಗಿಯುವವರೆಗೆ
ಮಾತ್ರ? ಇಂಥಲ್ಲಿ ಏನಾದರೂ ನಡೆಯಬಹು
ದೆಂದು ಆತನಿಗೆ ಅನಿಸುತ್ತಿರಲಿಲ್ಲ ಅಥವಾ ಏನಾ
ದರೂ ನಡೆಯಬೇಕೆಂಬ ಅಪೇಕ್ಷೆಯೂ ಇರ
ಲಿಲ್ಲ. ಆದರೆ ಚೌಕಟ್ಟು ಮೇಲೆ ಸರಿಯತೊಡಗಿ
ದಾಗ ಎಂಥದೋ ಉತ್ಕಟತೆ ಆತನಲ್ಲಿ ಕಾಣಿಸಿಕೊ
ಳ್ಳುತ್ತಿತ್ತು. ಒಮ್ಮೆ ಆತ ತಾಟು ತೊಳೆದು ತರು
ವಾಗ ಮಧ್ಯದಲ್ಲೆ ನಿಂತ. ಕೆಂಪು ಪ್ರಕಾಶದಲ್ಲಿ
ಆತನ ಬೆರಳುಗಳು ಕಪ್ಪು ಹುಳಗಳಂತೆ ಕಾಣಿಸುತ್ತಿ
ದ್ದವು. ಉಗುರು ಸಾಕಷ್ಟು ಬೆಳೆದಿದ್ದವು. ಆತನಿಗೆ
ಅನಿಸಿತು, ಇದು ತನ್ನ ಬೆಳವಣಿಗೆ ಅಷ್ಟೆ! ತನ್ನದೇ
ಒಂದು ಭಾಗವಾದರೂ ನಿರ್ಜೀವ ಮತ್ತು ನಿರುಪ
ಯೋಗಿ ಉಗುರುಗಳು! ಅದನ್ನು ಕತ್ತರಿಸಲು
ಆತನು ಸ್ನಾನ ಗೃಹಕ್ಕೆ ಬಂದ. ತಿರುಗಾಡುವಾಗ
ಗೋಡೆಯ ಮೇಲೆ ಬಿದ್ದ ಆತನ ನೆರಳು ಆತನನ್ನು
ಭೂತದಂತೆ ಹಿಂಬಾಲಿಸುತ್ತಿತ್ತು. ಎದುರಿನ
ಮೂಲೆಯಲ್ಲಿ ದೀಪವಿದ್ದುದರಿಂದ ಆ ಇಕ್ಕ

ಟ್ಟಾದ ಸ್ಥಳದಲ್ಲಿ ಮಂದ ಪ್ರಕಾಶ ಮಾತ್ರ ಬೀಳು
ತ್ತಿತ್ತು. ಅಲ್ಲಿ ಉಗುರು ಕತ್ತರಿಸುವ ಚಿಮ್ಮಟಿಗೆ
ಯೊಂದನ್ನು ಕಬ್ಬಿಣದ ಸಲಾಕೆಗೆ ಜೋಡಿಸಲಾ
ಗಿತ್ತು. ಆತ ಒಂದು ಬೆರಳಿನ ಉಗುರನ್ನು ಕತ್ತರಿಸಿ
ಹಾಗೇ ನಿಂತ. ಆತನಿಗೆ ಅನಿಸಿತು, ಈ ಪ್ರಕಾಶ
ಮಂದವಾಗಿದೆಯೇ ಅಥವಾ ಕೆಂಪು ದೀಪದ
ಕೆಳಗೆ ಓಡಾಡುತ್ತಿದ್ದುದರಿಂದ ತನ್ನ ದೃಷ್ಟಿ
ಒಮ್ಮೆಲೇ ಅಸ್ಪಷ್ಟವಾಗಿದೆಯೇ? ಎಲ್ಲಿ ದೃಷ್ಟಿ
ಗೋಡೆಯಾಚೆಗೆ ಹೋಗುವ ಸಾಧ್ಯತೆ ಇಲ್ಲವೋ
ಅಂಥಲ್ಲಿ ಕಣ್ಣೇಕೆ ಹೆಚ್ಚು ಶ್ರಮ ಪಡಬೇಕು, ಆತ
ಮತ್ತೆ ದಿಟ್ಟಿಸಿದ. ಬೆರಳಿನ ತುದಿ ಅಸ್ಪಷ್ಟವಾಗಿ
ಕಾಣಿಸುತ್ತಿತ್ತು. ಕ್ಷಣ ಕಾಲ ಆತನಿಗೆ ಏನು ಮಾಡ
ಬೇಕೋ ತಿಳಿಯದಾಯ್ತು. ಅನಂತರ ಆತನಿ
ಗೇನೋ ಹೊಳೆಯಿತು. ಆತನು ಉತ್ಸಾಹದಿಂದ
ನಕ್ಕ. ಆಸನದ ಕಡೆಗೆ ಹೋಗಿ ಊಟದ ತಾಟು
ತಂದ. ಅದನ್ನು ಗೋಡಗೆ ಆನಿಸಿ ಇಟ್ಟ. ತಾಟಿನ
ಪ್ರಕಾಶ ಪ್ರತಿಫಲನಗೊಂಡು ಚೌಕಟ್ಟಿನ ಮೇಲೆ
ಬಿತ್ತು. ಇದರಿಂದ ಆತ ಉತ್ಸಾಹಗೊಂಡು ಮಕ್ಕ
ಳಂತೆ ನಕ್ಕ. ಆದರೆ ಒಂದೇ ಒಂದು ಉಗುರು
ತೆಗೆದು ಮುಗಿಸುವಷ್ಟರಲ್ಲಿ ಆ ತಾಟು ಜಾರಿ
ಗಿರಗಿರನೆ ತಿರುಗುತ್ತ ನೆಲಕ್ಕುರುಳಿತು. ಆದರ
ಪ್ರಕಾಶ ಇಡೀ ಗೋಡೆ ತುಂಬ ವ್ಯಾಪಿಸಿ ಕೊನೆಗೆ
ಛಾವಣಿ ಮೇಲೆ ಸ್ಥಿರವಾಯಿತು. ತಕ್ಷಣ ಆತನಿಗೆ
ಮಿಂಚು ಹೊಡೆದಂತಾಯಿತು. ಆತ ಸ್ಥಂಬೀಭೂ
ತನಾದ. ಪ್ರಕಾಶವು ಹಿಂದಿನ ಕಪ್ಪು ಗೋಡೆಯ
ಮೇಲೆ ಹಾದು ಹೋಗಿತ್ತು. ಅದೇ ಕಾಲಕ್ಕೆ ಆತ
ನಿಗೆ ಗೋಡೆ ಮೇಲೆ ಬರೆದ ಕೆಲವು ಸಾಲುಗಳು
ಕಾಣಿಸಿದವು. ಆತ ಪುನಃ ತಾಟು ತಿರುಗಿಸಿ ಪ್ರಕಾಶ
ವನ್ನು ಗೋಡೆಯ ಮೇಲೆ ಬೀಳುವಂತೆ ಮಾಡಿದ.
ಕೈಯಗಲದ ಫರಶಿ ಕಲ್ಲಿಗೆ ಒಂದು ರೀತಿಯ
ಬುರುಸು ಹಿಡಿದಿತ್ತು. ಆತ ಕೈಯಾಡಿಸಿದ ಬಳಿಕ
ಸ್ವಲ್ಪ ಸ್ವಚ್ಛವಾಯಿತು. ಆದರೆ ಅದರ ಮೇಲಿದ್ದ
ಅಂಕುಡೊಂಕು ಗೆರೆಗಳ ಬರವಣಿಗೆ ಮಾತ್ರ
ಅರ್ಥವಾಗಲಿಲ್ಲ. ಅದನ್ನು ಓದಲು ಇನ್ನಷ್ಟು
ಮುಂದೆ ಸರಿದ. ಆದರೆ ಅದರ ಮೇಲೆ ಆತನ
ನೆರಳು ಬಿದ್ದು ಅದು ಮಸಕಾಯಿತು. ಆ ಸಾಲು

ಗಳು ಯಾರೋ ಕೊರೆದಂತೆ ಸಮಾಂತರವಾಗಿತ್ತು. ಆದರೆ ಅಕ್ಷರಗಳು ಮಾತ್ರ ಅರ್ಥವಾಗುತ್ತಿರಲಿಲ್ಲ. ಆತ ಸೂಕ್ಷ್ಮವಾಗಿ ದಿಟ್ಟಿಸಿದಾಗ 'ನಾನು' ಎಂಬ ಶಬ್ದ ಬಿಟ್ಟು ಬೇರೇನೂ ತಿಳಿಯಲಿಲ್ಲ. ಮೊದಲನೆ ದಿನ ಹೇಗೆ ಆತ ಗೋಡೆ ಬಡಿದು ಬಡಿದು ನಿರಾಶೆಗೊಂಡಿದ್ದನೋ ಅದೇ ರೀತಿ ಈಗಲೂ ಅನಿಸಿತು. ಮತ್ತು ಆತ ಆವೇಶದಿಂದ ಬಲವಾಗಿ ಕಲ್ಲನ್ನು ಗುದ್ದಲಾರಂಭಿಸಿದ. ಆದರೆ ಆ ಸಾಲುಗಳು ಮಾತ್ರ ಸ್ತಬ್ಧ ಮತ್ತು ರಹಸ್ಯವಾಗಿಯೇ ಉಳಿದವು. ಪುನಃ ಮತ್ತೊಮ್ಮೆ ಅಸ್ಥಿಪಂಜರಗಳ ಕೋಣೆಯ ನಗುವಿನ ಆರು ಸಾಲುಗಳು!

ಸುತ್ತಲೂ ಹತಾಶಗೊಂಡು ನೋಡುವಾಗ ಆತನಿಗೆ ಸಾಲುಗಳ ಮೇಲ್ಭಾಗಕ್ಕೆ ಬಾಣದ ಗುರುತು ಕಾಣಿಸಿತು. ಆತನು ಬಾಣದ ತುದಿ ಭಾಗವನ್ನು ಸ್ಪರ್ಶ ಮಾಡಿ ನೋಡಿದ. ಇಡೀ ಫರಶಿಯನ್ನೇ ಮುಟ್ಟಿ ಪರಿಶೀಲಿಸಿದ. ಆದರೂ ಏನೂ ಪ್ರಯೋಜನವಾಗಲಿಲ್ಲ. ಆತನ ದೇಹ ಒಮ್ಮೆಲೆ ಸಡಿಲಾಯಿತು ಮತ್ತು ಆತ ಅಲ್ಲೇ ಕುಸಿದ, ಏನೂ ಹೇಳಬಾರದೆಂದಿದ್ದರೆ ಆ ಸಾಲುಗಳಾದರೂ ಏಕೆ ಕಾಣಿಸಬೇಕಿತ್ತು? ನಿಜವಾಗಿ ಅದು ಬಾಣದ ಗುರುತೇ ಅಥವಾ ತಾನಾಗಿಯೇ ಮೂಡಿದ ಬರಿ ಆಕೃತಿಯೇ? ಆತನಿಗೆ ಏನೂ ಅರ್ಥವಾಗಲಿಲ್ಲ. ಆತ ಪುನಃ ಬೇಸತ್ತು ಮೇಲಕ್ಕೆದ್ದ. ಮತ್ತು ನಿರಾಶೆಯಿಂದ ಉಳಿದ ಗೋಡೆಯನ್ನು ಮುಟ್ಟಿ ನೋಡಿದ. ಅಷ್ಟರಲ್ಲಿ ಆತನಿಗೆ ಒಮ್ಮೆಲೆ ಏನೋ ಹೊಳೆಯಿತು. ಭಾವಣಿ ಹಾಗೂ ಎದುರಿನ ಗೋಡೆ ಒಂದು ಕಡೆ ಕೂಡಿದಲ್ಲಿ ಬಿರುಕು ಇರುವ ಸಾಧ್ಯತೆ ಇದೆ. ಆತ ಕೈಯೆತ್ತಿ ಎದುರಿನ ಗೋಡೆಯ ತುದಿ ಪರೀಕ್ಷಿಸಿ ನೋಡಿದ. ಎಲ್ಲ ಕಡೆ ಅದೇ ಮಸಕು ಬಣ್ಣ, ನಡುವೆ ಬಿರುಕು ಇರುವ ಯಾವ ಗುರುತೂ ಕಾಣಲಿಲ್ಲ. ಆತ ಗೋಡೆಯನ್ನು ಬೆರಳಿನಿಂದ ಒತ್ತುತ್ತ ಒಂದು ಮೂಲೆಯ ತನಕ ಬಂದ. ಮತ್ತು ಒಮ್ಮೆಲೆ ದಿಗ್ಮೂಢನಾದ. ಆ ಮೂಲೆ ಮೃದುವಾಗಿ ಹಸಿಯಾಗಿತ್ತು. ಆ ಮೃದು ಭಾಗವನ್ನು ಉಗುರಿನಿಂದ ಗೀರಿದ. ತಕ್ಷಣ ಒಂದು ತುಂಡು ಕಳಚಿತು. ಒಮ್ಮೆಲೇ ಎಂಥದೋ ಪರಿಚಿತ ವಾಸನೆ ಮೂಗಿಗೆ ಬಡಿಯಿತು. ಅದೊಂದು ಸಾಬೂನಿನ ತುಣುಕಾಗಿತ್ತು. ಅಲ್ಲಿಯ ಬಿರುಕನ್ನು ಸಾಬೂನಿನಿಂದ ಮುಚ್ಚಲಾಗಿತ್ತು. ಆತ ಒಳಗೆ ಬೆರಳು ತೂರಿ ತುಕ್ಕು ಹಿಡಿದ ಒಂದು ಡಬ್ಬಿಯನ್ನು ಹೊರಗೆ ತೆಗೆದು ಕಂಪಿಸುತ್ತ ಆಸನದ ಕಡೆಗೆ ಮರಳಿದ. ಬಹಳ ಹೊತ್ತಿನವರೆಗೆ ಡಬ್ಬಿ ತೆರೆಯುವ ಧೈರ್ಯವಾಗಲಿಲ್ಲ. ಬಿರುಕು ಬಿಟ್ಟ ಅಭೇದ್ಯ ಗೋಡೆಯನ್ನು ನೋಡಿ ಸಂತೋಷಪಡುತ್ತಿದ್ದರೂ, ತನ್ನ ಮನಸ್ಸಿಗೆ ಮಾತ್ರ ಎಚ್ಚರಿಕೆ ನೀಡುತ್ತಿದ್ದ - ಹಾಂ, ಆತುರ ಪಡಬೇಡ, ಇಲ್ಲದಿದ್ದರೆ ಮತ್ತೆ ನಿರಾಶೆಯಾದೀತು. ಬಹುಶಃ ತನ್ನ ಚಲನವಲನವನ್ನು ಯಾರೋ ಗೌಪ್ಯವಾಗಿ ನಿರೀಕ್ಷಿಸುತ್ತಿರಬಹುದೆಂಬ ಭೀತಿಯಿಂದ ಆತ ಡಬ್ಬಿಯನ್ನು ತಟ್ಟನೆ ಎತ್ತಿಕೊಂಡು ಭಯದಿಂದ ಸುತ್ತಲೂ ನೋಡಿದ. ಆತ ತೆವಳುತ್ತ ಸ್ನಾನಗೃಹದ ಕಡೆಗೆ ಹೊರಟ. ಆದರೆ ಹೋಗುವಾಗ ನಡುವೆ ನಿಂತು ಡಬ್ಬಿಯ ಮುಚ್ಚಳ ತೆರೆದ. ಅದರೊಳಗೆ ಇಣುಕಿದ. ಅದರಲ್ಲಿ ಒಂದು ಸವೆದ ಪುಟ್ಟ ಬೆಳ್ಳಿಯ ತ್ರಿಶೂಲ, ಸಾಕಷ್ಟು ಮಡಚಿದ ಕಾಗದ ಮತ್ತು ಒಣಗಿದ ಎಲೆಗೆ ಅಂಟಿಸಿದ ಒಂದು ಕಪ್ಪು ಬಣ್ಣದ ಅಫೀಮಿನ ಗುಳಿಗೆ ಇತ್ತು.

ಆತ ಕಾಳಜಿಯಿಂದ ಮಡಚಿದ ಕಾಗದವನ್ನು ಬಿಡಿಸಿದ. ಡಬ್ಬಿಯೊಳಗೆ ತುರುಕಿದ್ದರಿಂದ ಕಾಗದ ಸಾಕಷ್ಟು ಮುದ್ದೆಯಾಗಿತ್ತು. ಕಾಗದದ ಒಂದು ಬದಿಗೆ ಅಲ್ಲಲ್ಲಿ ಬರೆದ ಶಾಯಿಯ ಅಕ್ಷರ ಹಾಗೂ ಅಂಕೆಗಳು ಸ್ಪಷ್ಟವಾಗಿ ಕಾಣಿಸುತ್ತಿದ್ದವು. ಆದರೆ ಪೆನ್ಸಿಲಿನಿಂದ ಬರೆದ ಅಕ್ಷರಗಳು ಮಾತ್ರ ಕಾಗದದ ತುಂಬಾ ಪಸರಿಸಿತ್ತು. ಆತ ಕಾಗದವನ್ನು ಕಣ್ಣಿನ ಸಮೀಪ ಹಿಡಿದು ಓದಲು ಪ್ರಾರಂಭಿಸಿದ.

''ಸ್ನೇಹಿತನೆ,

ಇದನ್ನು ಓದುವ ನೀನು ಯಾರೋ ನನಗೆ ಗೊತ್ತಿಲ್ಲ. ಮತ್ತು ನಾನು ಯಾರೆನ್ನುವುದು ನಿನಗೆಂದೂ ತಿಳಿಯುವುದು ಸಾಧ್ಯವಿಲ್ಲ. ಬಹಳವೆಂದರೆ ನನ್ನ ಅಸ್ಥಿಪಂಜರ ನೋಡಿರಬಹುದು. ನನ್ನ ಹಾಗೂ ಉಳಿದ ಅಸ್ಥಿಪಂಜರದಲ್ಲಿ ಬಹಳ ವ್ಯತ್ಯಾ

ಸವೇನು ಇಲ್ಲ. ಹೀಗಾಗಿ ನಾನು ನಿನಗೆಂದೂ ಕಾಣಲಾರೆ. ನಾನು ಜೀವಂತವಾಗಿದ್ದಾಗ ನಿನ್ನ ಅಸ್ತಿತ್ವದ ಬಗ್ಗೆ ನನಗೇನೂ ಗೊತ್ತಿರಲಿಲ್ಲ. ಆದರೆ ನಾನು ನನ್ನ ಮರಣದ ನಂತರ ನಿನ್ನೊಂದಿಗೆ ಮಾತನಾಡಬೇಕೆನ್ನುವುದು ವಿಧಿ ಲಿಖಿತ. ನಾನು ವೃತ್ತಿಯಿಂದ ಒಬ್ಬ ಕೀರ್ತನಕಾರ. ನಾನು ಕೇಳುವ ಶಬ್ದಗಳೆಂದರೆ ಕೇವಲ ಕೀರ್ತನೆಗಳು! ಹೀಗೆ ಕೀರ್ತನೆ ಮಾಡುತ್ತ ಕಾಲ್ನಡಿಗೆಯಿಂದ ಸಂಚಾರಕ್ಕೆ ಹೊರಟಿದ್ದೆ. ಒಂದು ಸಾಯಂಕಾಲ ನಿಶ್ಚಿಂತೆ ನಾನೂ ಈ ಸ್ಥಳಕ್ಕೆ ಅತಿಥಿಯಾಗಿ ಬಂದೆ. ಅನಂತರದ್ದು ನಿನಗೆ ಹೇಳಬೇಕಾಗಿಲ್ಲ. ನಾನು ತ್ರಿಶೂಲ ಪಂಥಕ್ಕೆ ಸೇರಿದ ವ್ಯಕ್ತಿ. ಹೀಗಾಗಿ ತ್ರಿಶೂಲದ ಪೂಜೆ ಮತ್ತು ತ್ರಿಶೂಲ ಕೈಯಲ್ಲಿ ಧಾರಣ ಮಾಡುವದು ನನ್ನ ಜೀವನದ ಒಂದು ಭಾಗವಾಗಿತ್ತು. ಸ್ನಾನದ ಕಾಲಕ್ಕೆ ನನ್ನ ಬಟ್ಟೆ, ತ್ರಿಶೂಲ - ಇತ್ಯಾದಿಗಳನ್ನು ಹೊರಗಿಡಬೇಕಾಗುತ್ತಿತ್ತು. ಆದರೆ ನನ್ನ ಹಳೆಯ ಚಟವೊಂದು ನನ್ನ ಉಪಯೋಗಕ್ಕೆ ಬಂತು. ನನಗೆ ಗಾಂಜಾ ಸೇವಿಸುವ ಚಟವಿತ್ತು. ಅದಿಲ್ಲದಿದ್ದರೆ ನನ್ನ ಆಯುಷ್ಯವೇ ನಿರುಪಯೋಗಿ ಅನಿಸುತ್ತಿತ್ತು. ಅದೇ ಸದಾಕಾಲ ಕೀರ್ತನೆ ರಚಿಸಲು ನನ್ನ ಬಳಿ ಪೆನ್ಸಿಲು ಇರುತ್ತಿತ್ತು. ಹೀಗಾಗಿ ತ್ರಿಶೂಲ, ತುಣುಕು ಪೆನ್ಸಿಲು ಮತ್ತು ಗಾಂಜಾ ಇವು ನನ್ನ ಬದುಕಿನ ಮೂರು ರೇಖೆಗಳು. ಇದನ್ನು ಒಂದು ಡಬ್ಬಿಯೊಳಗಿಟ್ಟು, ಅದನ್ನು ಜಟೆಯೊಳಗಿಟ್ಟುಕೊಂಡಿರುತ್ತಿದ್ದೆ. ಸರ ಮನೆ ಹಾಗೂ ಮಾವನ ಮನೆಗೆ ಹೋಗುವಾಗ ಸದಾ ಕಾಲ ನಿಮ್ಮ ಬಳಿ ಒಂದು ಪೆನ್ಸಿಲ್ ಇರಲಿ. ಯಾವ ಕ್ಷಣ ಕಾಗದ ಕಳಿಸಬೇಕಾಗುವುದೋ ಹೇಳಲು ಬರುವುದಿಲ್ಲ! ಎಂಬ ನಾಣ್ಣುಡಿ ಗೊತ್ತಿದೆಯಲ್ಲ. ಇನ್ನು ಕಾಗದಕ್ಕೇನು ಬರಗಾಲವೇ! ರಸ್ತೆ ಪಕ್ಕದಲ್ಲೂ ಅದು ನಿಮಗೆ ಸಿಗಬಹುದು ಎಂದುಕೊಂಡಿದ್ದೆ. ಆದರೆ ಈ ನನ್ನ ಕಲ್ಪನೆ ತಪ್ಪು ಎಂದು ಅನಂತರ ತಿಳಿಯಿತು.

ಇಲ್ಲಿಯ ಬಾಗಿಲು ಮುಚ್ಚಿದ ಮೇಲೆ ನನ್ನ ಬಳಿ ಇದ್ದ ಈ ಡಬ್ಬಿಯ ಮಹತ್ವ ಅರಿವಾಯಿತು. ಮೊದಲು ನಾಲ್ಕು ದಿನ ಹತಾಶೆಗೊಂಡು ಅಲುಗಾಡಲೇ ಇಲ್ಲ. ನಾನು ಕೇವಲ ಗಾಂಜಾದ ಮೇಲೆ ಬದುಕಿದೆ. ಸರಸರನೆ ಏನಾದರೂ ಬರೆಯಬೇಕೆಂದರೆ ಪೆನ್ಸಿಲು ತುಂಬಾ ಚಿಕ್ಕದು. ಆದರೆ ನಾನು ನಿರಾಶೆಗೊಳ್ಳಲಿಲ್ಲ. ಇದೆಲ್ಲ ಅಸಹ್ಯವೆನಿಸಿತು. ಅದನ್ನು ತ್ಯಜಿಸುವ ಮಾರ್ಗ ನನ್ನ ಬಳಿಯಿತ್ತು. ಹೊರಗಿದ್ದಾಗ ಗಾಂಜಾ ಇಲ್ಲದೆ ವಾರಗಟ್ಟಲೆ ಕಳೆಯುತ್ತಿದ್ದೆ. ಈಗ ಅದು ಎದುರಿಗಿದ್ದರೂ, ಸಾಕಷ್ಟು ಬಳಲಿದ್ದರೂ ಕೊನೆಗಾಲಕ್ಕಾಗಿ ಅದನ್ನು ಮುಟ್ಟದೇ ಬದಿಗಿಟ್ಟೆ. ಮೊದಲು ಜೀವಂತವಾಗಿರಲು ಗಾಂಜಾ ಬೇಕಾಗುತ್ತಿತ್ತು, ಈಗ ಸಾಯಲು ಬೇಕಾಗಿದೆ. ಯಾರಿಗೂ ಕಾಣಿಸಬಾರದಂಥ ಸ್ಥಳದಲ್ಲಿ ಏನಾದರೂ ಬರೆಯಬೇಕೆಂದುಕೊಂಡು ನಾನು ಕಲ್ಲಿನ ಮೇಲೆ ಗೆರೆ ಎಳೆಯುತ್ತ ಕುಳಿತೆ. ತ್ರಿಶೂಲವೇ ನನ್ನ ಲೇಖನಿಯಾಯಿತು. ಮತ್ತು ಅರ್ಧ ಸವೆಯಿತು. ಆದರೆ ಆ ಕಲ್ಲಿನ ಹೃದಯ ಪಾಷಾಣದ್ದು! ಒಂದು ಗೆರೆ ಮೂಡಿಸಬೇಕಾದರೆ ಬೆರಳುಗಳಿಗೆ ತುಂಬಾ ನೋವಾಗಿ ತೇಕುತ್ತಿದ್ದೆ. ವರ್ತುಲ ತೆಗೆಯುವುದಂತೂ ಸಾಧ್ಯವಾಗಲೇ ಇಲ್ಲ. ಕೊನೆಗೆ ಅದನ್ನೂ ಬಿಟ್ಟೆ. ಕಾರಣ ಅದೆಲ್ಲ ಎಷ್ಟು ಅಸ್ಪಷ್ಟವಾಗಿತ್ತೆಂದರೆ ನನಗೇ ಕಾಣಿಸುತ್ತಿರಲಿಲ್ಲ. ಅಲ್ಲದೆ ನಾನು ಗತಿಸಿದ ಬಳಿಕ ಈ ಅಕ್ಷರಗಳು ಉಳಿಯಬಹುದೇ? ಒಂದು ಬಣ್ಣ ಕೊಟ್ಟರೂ ಸಾಕು ಎಲ್ಲವೂ ವ್ಯರ್ಥ. ನಾನು ಮನದಲ್ಲೇ ಅಂದುಕೊಂಡೆ, ನನ್ನ ಅಪರಿಚಿತ ಮಿತ್ರನೇ, ನಿನ್ನ ಹಣೆಬರಹದಲ್ಲಿದ್ದರೆ ಅಡಗಿಸಿದ ಡಬ್ಬಿ ನಿನಗೆ ಸಿಕ್ಕೀತು. ಇದು ಕತ್ತಲೆಯಲ್ಲಿ ಕೊರೆದ ಅಸ್ಪಷ್ಟ ಬಾಣದ ಗುರುತು. ಅದರೊಂದಿಗೆ ನಿನ್ನ ಸಂಬಂಧವಿದ್ದರೆ ಅದು ನಿನ್ನೊಡನೆ ಮಾತಾಡಬಹುದು, ಇಲ್ಲದಿದ್ದರೆ ಇಲ್ಲ. ಆಗ ಒಂದು ತುಣುಕು ಕಾಗದಕ್ಕಾಗಿ ನಾನು ತುಂಬಾ ಪ್ರಯತ್ನಪಟ್ಟೆ. ಕೈಲಿದ್ದ ಪೆನ್ಸಿಲಿನ ತುಂಡನ್ನು ನಾನು ಅನೇಕ ಸಲ ನಿರಾಸೆಯಿಂದ ಕೆಳಗೆ ಚೆಲ್ಲಿದೆ. ಅನಂತರ ಶಕ್ತಿ ಮುಗಿಯುತ್ತ ಬಂತು. ಬದುಕಿ ಉಳಿಯುವ ಇಚ್ಛೆಯು ಕಡಿಮೆಯಾಯಿತು. ಇನ್ನು ನನ್ನ ಪಾಲಿನ ಗಾಂಜಾ ಸೇವಿಸುವ ಕಾಲ ಬಂತು ಎಂದು ನನಗನಿಸಿತು. ಆದರೆ ಅದೇ

ಕಾಲಕ್ಕೆ ಒಂದು ಚಮತ್ಕಾರ ನಡೆಯಿತು. ಶ್ರೀಪಾದನ ಟೊಪ್ಪಿಗೆಯ ಖರ್ಚು ಹನ್ನೆರಡಾಣೆ''.

ಆತ ಓದುವುದನ್ನು ನಡುವೆಯೇ ನಿಲ್ಲಿಸಿ ಹುಚ್ಚನಂತೆ ದಿಟ್ಟಿಸಲಾರಂಭಿಸಿದ. ಶ್ರೀಪಾದನಿಗೆ ಹನ್ನೆರಡು ಆಣೆಯ ಟೊಪ್ಪಿಗೆ? ಈ ಶ್ರೀಪಾದ ಯಾರು? ಅನಂತರ ಆತ ಕಚಕುಳಿಯಿಟ್ಟವರಂತೆ ನಕ್ಕ. ಅದಷ್ಟೇ ''ಭಾಗ ಶಾಯಿಯಿಂದ ಬರೆಯಲ್ಪಟ್ಟ ಅಕ್ಷರಗಳಾಗಿದ್ದವು. ಹೀಗಾಗಿ ಆ ಅಕ್ಷರ ಈ ಪೆನ್ಸಿಲಿನ ಅಕ್ಷರಗಳೊಂದಿಗೆ ಸೇರಿತ್ತು''. ನಾನು ಆಸನದ ಮೇಲೆ ಕೂತಿದ್ದೆ. ಅಲ್ಲಿ ಗಾಳಿಯಾಡಲು ಜೋಡಿಸಿದ ಪೈಪು ಇರುವುದಂತೂ ನಿನಗೆ ಗೊತ್ತೇ ಇದೆ. ಆಗಾಗ ಅದರಿಂದ ಒಣಗಿದ ಎಲೆ, ಹುಲ್ಲುಕಡ್ಡಿ ಬರುತ್ತಿತ್ತು. ನಾನು ಅದನ್ನೆಲ್ಲ ತುಂಬಾ ಜೋಪಾನವಾಗಿಡುತ್ತಿದ್ದೆ. ಯಾಕೆಂದರೆ ಅವು ಸೂರ್ಯ ಪ್ರಕಾಶವನ್ನು ನೋಡಿ ನನ್ನ ಬಳಿಗೆ ಬಂದ ಚಿಹ್ನೆಗಳಾಗಿದ್ದವು. ನಾನು ಶೂನ್ಯ ದೃಷ್ಟಿಯಿಂದ ನೋಡುತ್ತಿರಬೇಕಾದರೆ, ಒಮ್ಮೆಲೆ ಸಿಡಿಲು ಬಿದ್ದಂತಾಯಿತು. ಇಂದು ಅದರೊಳಗಿಂದ ಬಂದು ಕಾಗದದ ಮುದ್ದೆ ಬಂದಿತ್ತು. ನಾನು ಅದರ ಮೇಲೆ ಎಷ್ಟು ವೇಗವಾಗಿ ಎರಗಿದೆನೆಂದರೆ ತಲೆ ಗೋಡೆಗಪ್ಪಳಿಸಿ ಬಿದ್ದು ಬಿಟ್ಟೆ. ತಲೆಗೆ ನೋವಾಗಿದ್ದು ನನಗಾಗ ತಿಳಿಯಲೇ ಇಲ್ಲ. ನಾನು ಸಾವಕಾಶವಾಗಿ ಆ ಕಾಗದ ಬಿಡಿಸಿದೆ. ಮತ್ತು ಅದನ್ನು ಸರಿಯಾಗಿಟ್ಟು ಬರೆಯಲು ಕುಳಿತೆ. ನನ್ನ ಕೈ ಎಷ್ಟು ಕಂಪಿಸುತ್ತಿತ್ತೆಂದರೆ ಒಂದೂ ಅಕ್ಷರ ಸರಿಯಾಗಿ ಬರೆಯಲಾಗಲಿಲ್ಲ. ಇಡೀ ಆಯುಷ್ಯವನ್ನೇ ಈ ಕಾಗದದ ಮೇಲೆ ಇಳಿಸಬೇಕಾದರೆ ನೀನು ಏನು ಬರೆಯುವೆ? ನನಗಂತೂ ಒಂದು ದೊಡ್ಡ ಮಹಾ ಪೂರದಲ್ಲಿ ಸಿಲುಕಿಕೊಂಡಂತಾಯಿತು. ಒಮ್ಮೆ ಅನಿಸಿತು; ನನಗೆ ಏಕಲವ್ಯನ ಅಥವಾ ಶಂಭೂಕನ ಆಖ್ಯಾನ ಬರೆಯಬೇಕೆಂಬ ಇಚ್ಛೆಯಿತ್ತು. ಊರ್ಮಿಳೆಯ ಬಗ್ಗೆಯೂ ಬರೆಯಬೇಕು. ಆದರೆ ಅದನ್ನು ಪ್ರಾರಂಭಿಸುವಷ್ಟು ಆಯುಷ್ಯವೂ ಈಗ ಉಳಿದಿರಲಿಲ್ಲ. ಹೆಂಡತಿಯ ಬಾಣಂತಿತನ, ಸೂಲಗಿತ್ತಿಯ ಇಪ್ಪತ್ತೊಂದು ರೂಪಾಯಿ. ಈಗ ನಿನಗೆ ವಿದಾಯ ಹೇಳುವಷ್ಟೇ ಪ್ರಾಣ ಉಳಿದಿತ್ತು. ನನಗೆ ಯಾವ ಸಂಬಂಧಿಕರೂ ಇಲ್ಲ. ನಾನು ಇಡೀ ಆಯುಷ್ಯ ಕೇವಲ ವ್ಯಾಖ್ಯಾನವನ್ನೇ ಬರೆದೆ. ಅದು ಸಹ ಮೂಲೆಗುಂಪಾಯಿತು. ಈಗ ನಿನಗೆ ಹೇಳುವ ವಿಷಯವಿಷ್ಟೆ. ನಾನು ಸೇವಿಸಿ, ಉಳಿದ ಗಾಂಜಾ ನಿನಗಾಗಿಟ್ಟಿದ್ದೇನೆ. ನೀನು ನನ್ನಂತೆ ಗಾಂಜಾ ವ್ಯಸನದವನಾಗಿದ್ದರೆ ನಿನಗೂ ಸಾಕಾಗಿ ಇನ್ನೂ ಉಳಿಯುತ್ತದೆ. ಈಗ ಕೊನೆಗೊಂದು ಮಾತು. ''ಸಾವುದರಿಂದ ಪಾರಾಗುವ ಮಾರ್ಗ ನಮ್ಮ ಬಳಿಯಿದೆಯೋ, ಆ ಬದುಕು ಎಷ್ಟೇ ನಿರ್ದಯವಾಗಿದ್ದರೂ ಅದು ನಮ್ಮನ್ನು ಹೊಸಕಿ ಹಾಕಲಾರದು. ನಮಸ್ಕಾರ!'' ಅನಂತರ ಮತ್ತೇ ಶಾಯಿಯಿಂದ ಬರೆದ ಅಕ್ಷರ - ಹೆಂಡತಿಯ ಅಂತ್ಯಕ್ರಿಯೆಯ ಖರ್ಚು ಹದಿನೇಳು ರೂಪಾಯಿ. ಕಾವೇರಿಯ ಮಗನ ನಾಮಕರಣ, ಬಾಣಂತಿಗೆ ನಾಲ್ಕು ರೂಪಾಯಿ, ಮಂಗಲನ ಮದುವೆಯ ಉಡಗೊರೆ ಐದು ರೂಪಾಯಿ. ಆಕಳ ಹುಲ್ಲಿಗೆ ಐದು ಆಣೆ.

ಮತ್ತು ಕೊನೆಯ ಶಬ್ದ ಬೀಡಿ ಒಂದಾಣೆ.

ಹೊರಗಿನ ಈ ಗೊಂದಲಮಯ ವ್ಯವಹಾರದಿಂದ, ಸುತ್ತಲಿನ ಅಬೇಧ್ಯ ಗೋಡೆ ಬೇಧಿಸಿ ಬಂದ ಈ ಶಬ್ದಗಳಿಂದ ಆತ ಹೊಸಕಿದಂತಾದ. ಕಾಗದವನ್ನು ಡಬ್ಬಿಯೊಳಗೆ ತುರುಕಿದ. ಅದನ್ನು ಉಟ್ಟ ಬಟ್ಟೆಯೊಳಗೆ ಅಡಗಿಸಿ ಹಾಸಿಗೆ ಮೇಲೆ ಉರುಳಿದ. ತನಗೆ ಸಾವಿನ ಹಾದಿ ತೋರಿಸಿ ಬದುಕು ಸರಳಗೊಳಿಸಿದ ಈ ಜಟಾಧಾರಿ ಯಾರು? ಅವನಾಗಲಿ ಅಥವಾ ನಾನಾಗಲಿ ಒಳಗೆ ಇಲ್ಲಿ ಸವೆಯುತ್ತಿರುವಾಗ, ಹೊರಗಿನ ಪ್ರಪಂಚ ಮಾತ್ರ ವಿವಿಧ ಚಿರಂತನ ಋತುಗಳಲ್ಲಿ ಪರಿಭ್ರಮಣ ಮಾಡುತ್ತಿದೆ. ಶ್ರೀಪಾದನಿಗೆ ಹನ್ನೆರಡಾಣೆಯ ಟೊಪ್ಪಿಗೆ ಸಿಕ್ಕಿತು. ಕಪ್ಪು ಬಣ್ಣದ್ದೋ ಅಥವಾ ಕೆಂಪೋ, ಟೊಪ್ಪಿಗೆ ಅವನಿಗೆ ಒಪ್ಪಿಸಿರಬಹುದೇ? ಬಾಣಂತಿತನ, ಸಾವು, ಹೆಂಡತಿಯ ಹೆರಿಗೆ - ಮೊದಲು ಸತ್ತಳೋ, ಅಥವಾ ಆಮೇಲೋ? ಮತ್ತು ಮಗುವಿನ ಗತಿ? ಅದು ಮೊದಲೇ ಸತ್ತಿತ್ತೋ ಅಥವಾ ಸತ್ತ ಮೇಲೆ

ಹುಟ್ಟಿತೋ? ಈ ಕಾವೇರಿ ಯಾರು? ಬಹುಶಃ ಮಗಳಿರಬೇಕು. ಹಾಗಾದರೆ ಮನೆಯಲ್ಲಿ ಸ್ವಂತ ಮಗಳು ಸತ್ತಿರುವಾಗ ಮಗುವಿನ ನಾಮಕರಣಕ್ಕಾಗಿ ಹಳೆ ಬಟ್ಟೆ ಸ್ವೀಕರಿಸುವಷ್ಟು ಮಾಯೆಯನ್ನು ಅವಳು ಹಚ್ಚಿರಬಹುದೇ? ಆ ಸ್ಥಳದಲ್ಲಿ ನಾಮಕರಣವಿದೆ; ಅನ್ನವಿದೆ, ಕೊಟ್ಟಿಗೆಯ ಅಂಧಃಕಾರದಲ್ಲಿ ಕೂತು ಮೆಲುಕಾಡುತ್ತಿರುವ ಆಕಳೂ ಇದೆ. ಐದಾಣೆಯ ಹುಲ್ಲು ಇದೆ. ಆ ಜಟಾಧಾರಿ ಸಾವನ್ನು ಸ್ವತಃ ಸ್ವೀಕರಿಸಿದ, ಅಲ್ಲದೆ ನನಗೂ ತೋರಿಸಿದ. ಅತ್ತ ಉತ್ಪತ್ತಿ, ವಿವಾಹ, ನಾಶ ಇದೆಲ್ಲ ಘಟಿಸಿತು! ಕೊನೆಗೆ ಉಳಿದದ್ದೇನು? ಒಂದಾಣೆಯ ಬೀಡಿ! ಯಾವುದೋ ಒಬ್ಬ ಇಂಥದೇ ಅಭೇದ್ಯ ಗೋಡೆಯಾಚೆಗೆ ಕ್ಷುದ್ರವಾಗಿ ಬದುಕಿರುವಾಗ ಆತನ ಕೈಯಲ್ಲಿ ಒಂದಾಣೆಯ ಬೀಡಿ; ಕೊನೆಗೆ ಉಳಿದದ್ದೇನು ಒಂದಾಣೆಯ ಬೀಡಿ ಮತ್ತು ಹಗಲು ರಾತ್ರಿ ಪಸರಿಸುವ ಆ ಮೂರು ಅಸ್ತಿಪಂಜರಗಳ ವಿಕಟ ಹಾಸ್ಯ ಇಷ್ಟೇ! ಶ್ರೀಪಾದ, ಕಾವೇರಿ, ಮಂಗಲ ಇವರೆಲ್ಲ ಯಾರು? ಲೆಕ್ಕಾಚಾರ ಇರುವ ವ್ಯಕ್ತಿ ಯಾರು?? ಈ ಜಟಾಧಾರಿ ಯಾರು? ಮತ್ತು ನಾನು ಯಾರು? ಈಗ ಬಹುಶಃ ಶ್ರೀಪಾದ ಬೆಳೆದು ದೊಡ್ಡವನಾಗಿ ಹುಟ್ಟು, ಬಾಣಂತಿತನ, ಸಾವು, ಮದುವೆ, ಉಡುಗೊರೆ ಇದೆಲ್ಲದರಿಂದ ಹೊರಬಿದ್ದು ಒಂದಾಣೆಯ ಬೀಡಿ ಸೇದುತ್ತಾ ಕೂತಿರಬಹುದು! ಆದರೆ ಇದೆಲ್ಲ ಅರ್ಥವಾದದ್ದು ಈ ತುಂಡು ಕಾಗದದಿಂದ. ಜಟಾಧಾರಿ ಬರೆದ ಆಖ್ಯಾನವೆಲ್ಲ ಯಾವುದೋ ಬಾವಿಯ ತಳದಲ್ಲಿ ಬಿದ್ದಿರಬೇಕು ಮತ್ತು ಸದಾ-ಕಾಲ ನಗುವ ಅಸ್ಥಿಪಂಜರದಂತೆ ನೀರಿನೊಳಗೆ ಸಂಚರಿಸುವ ಮೀನುಗಳ ನೆರಳು ಅದರ ಮೇಲೆ ಬೀಳುತ್ತಿರಬೇಕು. ನನ್ನ ಬಟ್ಟೆ ತುಂಡೊಂದನ್ನು ಕಾಗೆ ಎತ್ತರವಾದ ಮರದ ಮೇಲೆ ಗೂಡು ಕಟ್ಟಲು ಒಯ್ದಿರಬಹುದು. ನನ್ನ ಚಪ್ಪಲು ಬೆರಳು ಕಳಕೊಂಡ ತಿರಸ್ಕೃತ ಮಹಾರೋಗಿಯೊಬ್ಬನ ಕಾಲಿಗೆ ಸಿಕ್ಕು ರಸ್ತೆ ತುಳಿಯುತ್ತಿರಬಹುದು. ಅಂಗಿಯ ಬೆಳ್ಳಿ ಬಟನ್ನುಗಳು - ಯಾವುದೋ ಚಟದ ವ್ಯಕ್ತಿಯ ದೇಹದ ಮೇಲೆ ಶೋಭಿಸಿ, ನಾಲ್ಕು ದುಡ್ಡಿಗೆ ದೇಹ ಮಾರುವ ಬಾಜಾರ ಬಸವಿಯ ಎದೆಯನ್ನು ಚುಚ್ಚಿರಬಹುದು, ಸಾವಿರಾರು ಸಿಕ್ಕುಸಿಕ್ಕಾದ ರೇಖೆಗಳು ಎಲ್ಲೂ ತಪ್ಪದೆ ಸರಿಯಾಗಿ ಹೊಂದಿಕೊಳ್ಳುತ್ತವೆ. ಸಮುದ್ರದ ಚಿಪ್ಪಿನಲ್ಲಿ ಮಣ್ಣು ಸಂಗ್ರಹಿಸಲ್ಪಟ್ಟು ಅದರೊಳಗೆ ಕಾಡು ಬಳ್ಳಿಯ ಬೀಜ ಮೊಳೆಯಬಹುದು. ಮತ್ತು ಅಲ್ಲಿಯ ಪುಟ್ಟ ಹಣ್ಣನ್ನು ಮೋಡದ ಹಕ್ಕಿಗಳು ಒಯ್ಯಬಹುದು. ಇಂಥ ವಿಲಕ್ಷಣವಾದ ಗರುಡ ಪಕ್ಷಿ! ನಮ್ಮ ಒಂದು ಬೆಂಕಿಪೆಟ್ಟಿಗೆಯಿಂದ ದೇವಾಲಯದಲ್ಲಿ ನೀಲಾಂಜನವನ್ನು ಉರಿಸಲೂಬಹುದು ಅಥವಾ ಹೆಣದ ಬೆಂಕಿ ಭುಗಿಲೆಂದು ಹೊತ್ತಿಸಲೂಬಹುದು! ಅದೂ ಸಹ ಒಂದಾಣೆಯ ಬೀಡಿ ಹಚ್ಚಿದಾಕ್ಷಣ ಮುಗಿದಿರಬಹುದೇ? ಈ ಮಾನಸಿಕ ಗೊಂದಲವೆಲ್ಲ ಕಡಿಮೆಯಾದ ನಂತರ ಆತ ಹುರುಪುಗೊಂಡ. ಆದರೆ ಆತನಿಗೆ ಒಂದು ವಿಷಯದ ಬಗ್ಗೆ ಕುತೂಹಲ ಮೂಡಿತು - ಈ ಮೂರು ಅಸ್ಥಿಪಂಜರಗಳಲ್ಲಿ ನನಗೆ ಉಪಕಾರ ಮಾಡಿದವರು ಯಾರು? ಆತ ಮತ್ತೆ ಗೋಡೆಯೊಳಗಿನ ಚಿಲಕವನ್ನು ಮೇಲೆ ಸರಿಸಲು ಪ್ರಯತ್ನಿಸಿದ, ಆದರೆ ಅದು ಸ್ವಲ್ಪವೂ ಅಲುಗಾಡಲಿಲ್ಲ. ಮೇಲಿನವರು ಯಾರೋ ಚಿಲಕವನ್ನು ಶಾಶ್ವತವಾಗಿ ಭದ್ರಪಡಿಸಿದ್ದರು. ನಗುವ ಮೂರು ತಲೆಬುರುಡೆಗಳ ದೃಶ್ಯ! ಆಯುಷ್ಯದಲ್ಲಿ ಒಮ್ಮೆ ಮಾತ್ರ ನೋಡಲೆಂದು ನಿರ್ಣಯಿಸಿರಬೇಕು. ಆತ ಗೋಡೆಯನ್ನೇ ದಿಟ್ಟಿಸಲಾರಂಭಿಸಿದ. ಆ ಮೂವರಲ್ಲಿ ಜಟಾಧಾರಿ ಯಾರು? ಬಹುಶಃ ಕೊನೆಯ ಅಸ್ಥಿಪಂಜರವಿರಬೇಕು. ಇಲ್ಲದ್ದಿದ್ದರೆ ಗಾಂಜಾದ ಗುಳಿಗೆ ನನಗಿಂತ ಮೊದಲೇ ಬೇರೆ ಯಾರಾದರೂ ಸೇವಿಸುತ್ತಿದ್ದರು, ಯಾರಿಗೆ ಗೊತ್ತು? ಆ ಎರಡನೆಯ ಅಸ್ಥಿಪಂಜರವೇ ಜಟಾಧಾರಿಯದಾಗಿರಬಾರದೇಕೆ? ಅನಂತರದ ಸ್ವಾಮಿಗೆ ಸ್ಥಳ ಸಿಕ್ಕಿರಲಿಕ್ಕಿಲ್ಲ. ಅಥವಾ ಆದ್ಯ ಸ್ವಾಮಿಯನ್ನು ಇಲ್ಲಿ ಬಂಧಿಸಿ ಇಟ್ಟಿರಲಿಕ್ಕಿಲ್ಲ. ನಿಮ್ಮೊಳಗೆ ಆ ಜಟಾಧಾರಿ ಯಾರು? ಎಂದು ಆತ ಆರ್ತನಾಗಿ ಕೇಳಿದ. ಆತನಿಗೆ ಮೂರೂ ಅಸ್ಥಿಪಂಜರಗಳ ನೆನಪಾ

ಯಿತು. ಆದರೆ ಆ ಮೂರೂ ಅಸ್ಥಿಪಂಜರಗಳ ಮುಖದ ಮೇಲೆ ಒಂದೇ ರೀತಿ ನಿಗೂಢ ರಹಸ್ಯ ಇದೆ. ಇದರ ಉತ್ತರ ನಮಗೆ ಗೊತ್ತಿದೆ, ಆದರೆ ಏನನ್ನೂ ಹುಡುಕು.

ಆದರೆ ಬೇರೊಂದು ವಿಚಾರದಿಂದ ಆತ ದಿಗಿಲುಗೊಂಡ. ಈ ಮೂವರಲ್ಲಿ ಯಾವುದೋ ಒಂದು ಅಸ್ಥಿಪಂಜರ ಜಟಾಧಾರಿಯದು. ಕೊನೆಗೆ ಎಲ್ಲ ಮುಗಿದ ಬಳಿಕ ಒಮ್ಮೆಯಾದರೂ ಮುಖ ತೋರಿಸಿದನಲ್ಲ. ಆತನಿಗೆ ಗೋಡೆಯಾಚೆಗಿದ್ದ ಈ ನನ್ನ ಕೃತಜ್ಞತೆ ಅರ್ಥವಾಗಿರಬಹುದು. ಆದರೂ ಇನ್ನೊಂದು ಸ್ಥಳ ಬರಿದಾಗಿದೆಯಲ್ಲ. ಯಾಕೆಂದರೆ ಇನ್ನೊಬ್ಬ ಸ್ವಾಮಿ ವೃಂದಾವನದ ಒಳಗಿದ್ದಾನೆ. ಅವನೇ ನಿಜವಾದ ಜಟಾಧಾರಿಯಾಗಿದ್ದರೆ? ಈ ಕಲ್ಪನೆ ನಿರ್ದಯವೆನಿಸಿತು. ಯಾರು ನನಗೆ ಮೃತ್ಯುವಿನ ಹಾದಿ ತೋರಿಸಿ ಬದುಕಿಸಿದನೋ, ಆತನನ್ನು ಭೆಟ್ಟಿಯಾಗುವ ದೈವ ಹಣೆಬರಹದಲ್ಲಿಲ್ಲ. ಅಷ್ಟೇ ಅಲ್ಲ, ಆತ ಇಲ್ಲಿಗೆ ಮರಳುವುದು ಯಾವಾಗೆಂದರೆ, ತಾನು ವೃಂದಾವನದ ಒಳಗೆ ಹೋದ ಬಳಿಕ! ಭೂತಕಾಲವಾಗಿ ಬಂದ ಈ ಶಬ್ದ ಅಸ್ಥಿಪಂಜರದ ರೂಪದಲ್ಲಿಯೂ ನನ್ನನ್ನು ಭೆಟ್ಟಿಯಾಗಲಾರದು. ಸಿಕ್ಕುಸಿಕ್ಕಾದ ಅನಂತರೇಖೆಗಳು ಆಕಸ್ಮಿಕವಾಗಿ ಭೇಟಿಯಾಗುತ್ತವೆ. ಅಥವಾ ಯಾವ ರೇಖೆಗಳು ಭೆಟ್ಟಿಯಾಗಿದ್ದವೋ, ಅವು ಭೆಟ್ಟಿಯಾಗದೆ ಸನಿಹದಿಂದಲೇ ಹಾದು ಮಾಯವಾಗುತ್ತವೆಯೋ?

ಹಾಗಾದರೆ, ಈ ಗೋಲಕದ ಅರ್ಥವಾದರೂ ಏನು? ಕ್ಷಣಕ್ಷಣಕ್ಕೆ ಭಯಂಕರವಾಗಿ ಸ್ಫೋಟಗೊಂಡು ಸಾವಿರಾರು ಕಿಡಿಗಳನ್ನು ಆಗಸದತ್ತ ಚೆಲ್ಲುತ್ತ ಆದರೆ ನಕ್ಷತ್ರಗಳನ್ನು ಉಧ್ವಸ್ಥ ಮಾಡುವ; ಒಂದೆಡೆ ಸಹಸ್ರ ಕಣ್ಣುಗಳಿದ್ದ, ಇನ್ನೊಂದೆಡೆ ಕುರುಡುಗಣ್ಣಿನ ದೈವಿ ಸಂಕೇತ ಪಸರಿಸುವ, ಒಂದೆಡೆ ಕಲ್ಲು ಕರಗಿಸುವಂಥ ಧಗೆ ಉರಿಯುತ್ತಿದ್ದರೆ ಇನ್ನೊಂದೆಡೆ ರಕ್ತ ಹೆಪ್ಪುಗಟ್ಟಿಸುವ ಶೀತಲ -

ಈ ಗೋಲಕ ಅಂದರೇನು? ಅಥವಾ ಅದು ಹೇಗಿದೆಯೆಂದು ಹೇಳಲು ಬರುವುದಿಲ್ಲವೋ



ಭಾಸ್ಕರರಾವ್— ಉಪ್ಪಿನಕುದ್ರು

''ಸಾರ್ ....! ಮಾತು ಮಾತಿಗೂ 'ಕತ್ತೆ' ಅಂತ ಕೂಗ್ತಿದ್ರಲ್ಲ, ಇಲ್ಲಿ ನೋಡಿ ನಿಮಗೋಸ್ಕರ ಕಷ್ಟಪಟ್ಟು ಒಂದು ಕತ್ತೆಯನ್ನು ಹುಡುಕಿ ತಂದಿದ್ದೇನೆ .....!''

ಅದೇ ನಿಜವಾದ ಉತ್ತರವಿರಬಹುದೇ? ಬಹಳವೆಂದರೆ ಅದನ್ನು ದಿಟ್ಟಿಸುತ್ತ ಎಲುಬು ಮಡಚುತ್ತಾ ಸದಾಕಾಲ ನಗುತ್ತ ಕುಳಿತುಕೊಳ್ಳಬಹುದು. ಅಥವಾ ಅದನ್ನು ದಿಟ್ಟಿಸುತ್ತಾ ಅಲಿಪ್ತವಾಗಿ ಬೀಡಿ ಸೇದಬಹುದು. ಕಣ್ಣು ಉರಿಯುವ ಆ ಗೋಲಕದಿಂದ ಪಾರಾಗಲು ಈ ಕಪ್ಪು ಗುಳಿಗೆಗೆ ಶರಣಾಗತರಾಗಬಹುದು. ಆದರೆ ಇದೆಲ್ಲ ಆ ಪ್ರಶ್ನೆಯ ಉತ್ತರವಲ್ಲ. ನಿಜವಾಗಿ ಹೇಳಬೇಕೆಂದರೆ ಆ ಪ್ರಶ್ನೆ ಮೂಡಿಸಿದ ಗೋಲಾಕಾರವಾದ ಚಿತ್ರವಿದು. ಹಾಗಾದರೆ ಕೊನೆಗುಳಿಯುವುದು ಏನು? ಎಲ್ಲ ನೋಡಿಯೂ ಆದರೆ ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೇ ಬದುಕುವ ನಿರ್ಲಿಪ್ತತೆ, ನಿರ್ವಿಕಾರವೇ ನಿಜವಾದ ವರ್ತುಲ.

ಪೂರ್ಣಾತ್ ಪೂರ್ಣಂ ಉದಚ್ಯತೇ!

ಆದರೆ ಡಬ್ಬಿ ಸಿಕ್ಕ ಬಳಿಕ ಸ್ವಲ್ಪ ಹೊತ್ತು ಉತ್ಸಾಹದಲ್ಲಿ ಕಳೆಯಿತು. ಈಗ ಆತ ಗೊರಕೆ ಹೊಡೆಯಲಾರಂಭಿಸಿದ. ತಾಟಿನಲ್ಲಿ ಇನ್ನೊಂದಿಷ್ಟು ಅನ್ನವಿದ್ದರೂ ಆತ ಮುಗಿಸುತ್ತಿದ್ದ. ಮನುಷ್ಯನಿಗೆ ಯಾವ ಕ್ಷಣಕ್ಕೂ ತ್ಯಾಗದ ಭಾವನೆ ಬಂತೆಂದರೆ ಯಾವ ಕಷ್ಟವೂ ಭಾರವೆನಿಸುವು

ದಿಲ್ಲ. ಇದನ್ನೆಲ್ಲ ಆತ ಈಗ ಅರ್ಥ ಮಾಡಿಕೊಂಡಿದ್ದ. ಮತ್ತು ಆತನ ಚಲನವಲನದಲ್ಲಿ ಹೊಸ ಕಳೆ ಮೂಡಿತ್ತು. ಹತ್ತು, ಹನ್ನೆರಡು - ಊಟ ಮುಗಿಯಿತು. ತಾಟು ಬರುತ್ತಲೇ ಇತ್ತು. ಆತ ಕಾಳಜಿಯಿಂದ ಉಗುರು ಕತ್ತರಿಸಿಕೊಂಡ, ಬಹಳ ಹೊತ್ತು ಜಿಸಿ ನೀರಿನಲ್ಲಿ ಸ್ನಾನ ಮಾಡಿದ. ಬೆಳೆದ ಗಡ್ಡ ಮತ್ತು ಕೂದಲಿನ ಮೇಲೆ ಕೈಯಾಡಿಸಿದ. ಕಾವಿ ಬಟ್ಟೆಯ ಮೇಲೆ ಎಂತಹದೋ ಕಲೆ ಬಿದ್ದಿತ್ತು. ಅದನ್ನಾತ ನೀರಿನಿಂದ ತೊಳೆದ. ಹರಿದ ಜರಿಯ ಎಳೆಯನ್ನು ಕಿತ್ತೊಗೆದ. ಇನ್ನು ಕೊನೆಯ ನಿದ್ದೆ ಮಾಡೋಣ ಎಂದು ಹಾಸಿಗೆಯ ಮೇಲೆ ಉರುಳಿದ. ತಾನಿನ್ನು ಹತಾಶಗೊಳ್ಳಬಾರದು, ಬದಲಿಗೆ ಆ ಮಠಾಧೀಶನೇ ಮೋಸ ಹೋದನೆಂದು ಭಾವಿಸಬೇಕು. ಈ ವ್ಯಕ್ತಿ ಎಷ್ಟು ಹಟದಿಂದ ಇಲ್ಲಿ ಬದುಕಿದ ಮತ್ತು ತಾನಾಗಿಯೇ ಸತ್ತನು ಎಂದು ಆತನಿಗೆ ಅನಿಸಬೇಕು. ಈತ ಸತ್ತ ಆದರೆ ನಾಶವಾಗಲಿಲ್ಲ - ಆತ ಕೆಲ ಕ್ಷಣ ನಿಂತ. ಇಂಥ ದಿಟ್ಟತನ ತನ್ನಲ್ಲಿ ಕಾಣಬೇಕು:

ಆ ದಿನ ಆತ ಸ್ನಾನಕ್ಕೆ ಹೊರಟಾಗ ತನ್ನಲ್ಲೆ ಅಂದುಕೊಂಡ. ಇಂದು ನೀನು ಸುಗಂಧ ದ್ರವ್ಯ ಹಚ್ಚಿಕೊಂಡು ಸ್ನಾನ ಮಾಡು. ಯಾಕೆಂದರೆ, ಇಂದು ನಿನ್ನ ಹುಟ್ಟುಹಬ್ಬ! ಆದರೆ ಇದು ಹಗಲೋ ರಾತ್ರಿಯೋ ತಿಳಿಯುವುದೇ ಅಸಾಧ್ಯವಾಗಿದ್ದಾಗ, ಇಂದು ಹುಟ್ಟುಹಬ್ಬವೆಂದು ಹೇಗೆ ನಿರ್ಧರಿಸುವುದು? ಎಲ್ಲಿ ಹಗಲಿನ ಎಣಿಕೆ ಸಾಧ್ಯವಿಲ್ಲವೋ ಅಲ್ಲಿ ಹುಟ್ಟುಹಬ್ಬವು ಇಲ್ಲವೆಂದು ಏಕೆ ತಿಳಿಯಬೇಕು? ನೀನು ನಿರ್ಧರಿಸಿದ ದಿನವೇ ನಿನ್ನ ಹುಟ್ಟು ಹಬ್ಬ; ಈ ಮಾತಿಗೆ ಆತ ಒಂದು ಕ್ಷಣ ನಕ್ಕ. ಅನಂತರ ಆತ ತುಂಬಾ ಉತ್ಸಾಹದಿಂದ ಸ್ನಾನ ಮಾಡಿದ. ಮೈ ಒಣಗಿದ ಬಳಿಕ ಹೊರಗೆ ಬಂದ. ಇಕ್ಕಟ್ಟಾದ ಸ್ಥಳದಲ್ಲಿ ಕಾಲು ಒಣಗಿಸಲು ಆತ ಕೆಳಗೆ ಬಗ್ಗಿದ. ಆ ಕ್ಷಣಕ್ಕೆ ಕಾಲ ಕೆಳಗೆ ಸ್ಫೋಟವಾದವನಂತೆ ಮತ್ತೊಮ್ಮೆ ಕಂಪಿಸಿದ. ಒಂದು ಕ್ಷಣ ಆತನಿಗೆ ನಂಬಿಕೆಯೇ ಆಗಲಿಲ್ಲ. ಮೆಲ್ಲಗೆ ಮೊಣಕಾಲೂರಿ ಪುನಃ ದಿಟ್ಟಿಸಿದ. ಸ್ನಾನದ ಕೋಣೆಯ ಹೊರಭಾಗದ ಮೂಲೆಯಲ್ಲಿ ಒಂದು ಬಿರುಕು ಬಿಟ್ಟಿತ್ತು. ಆ ಬಿರುಕಿನೊಳಗಿಂದ ನಾಲ್ಕೈದು ಇಂಚಿನಷ್ಟು ಉದ್ದವಾದ ರೆಂಬೆಯೊಂದು ಹೊರಗೆ ಚಾಚಿಕೊಂಡಿತ್ತು. ಅದಕ್ಕೆ ಗೋಲಾಕಾರದ ಐದು ಎಲೆಗಳಿದ್ದವು.

ಆತ ಚಕಿತನಾಗಿ ಅದನ್ನು ನೋಡುತ್ತಾ ನಿಂತ. ಈ ಸ್ಥಳ ಸಾಕಷ್ಟು ನೆಲದ ಆಳದಲ್ಲಿದೆ. ಸುತ್ತಲೂ ಅಖಂಡವಾದ ಫರ್ಶಿಗಳಿಂದ ಅಭೇದ್ಯವಾಗಿ ಕಟ್ಟಲಾಗಿದೆ. ಇಷ್ಟಾದರೂ ಈ ಬೀಜ ನೆಲದಾಳಕ್ಕೆ ಇಳಿದು ಬಂತು. ಎಲ್ಲವನ್ನೂ ನಿರ್ಲಕ್ಷಿಸಿ, ಹಸಿರು ಚಿಗುರಿನೊಂದಿಗೆ ಧೀಮಾಕಿನಿಂದ ತಲೆಯೆತ್ತಿ ನಿಂತಿತು. ಆತನ ಹೃದಯ ತುಂಬಿ ಬಂತು. ಮತ್ತು ಮಂಡೆಯೂರಿ ಅದಕ್ಕೆ ಗೌರವದಿಂದ ಅಭಿನಂದನೆ ಮಾಡುತ್ತಿರುವಂತೆ ಭಾಸವಾಯಿತು. ಅವನಲ್ಲಿ ಮತ್ತೊಮ್ಮೆ ಹೊಸ ಬದುಕಿನ ಆಸೆ ಚಿಗುರಿತ್ತು. ಮತ್ತು ಆತ ಸಂತೋಷದಿಂದ ನಕ್ಕ. ಪುನಃ ಒಳಗೆ ಹೋಗಿ ಪೂಜೆಯ ತ್ರಿಶೂಲ ತಂದ. ರೆಂಬೆಯ ಸುತ್ತಲಿನ ಸ್ಥಳವನ್ನು ಕೆದಕಲು ಪ್ರಾರಂಭಿಸಿದ. ಬಿರುಕಿನೊಳಗೆ ಗೇಣುದ್ದ ಬೆಳೆದ ಒಂದು ಬೇರು ಇತ್ತು. ಕಲ್ಲಿನ ಒಂದು ಭಾಗ ಸ್ವಲ್ಪ ಸವೆದದ್ದರಿಂದ ಅಲ್ಲಿ ಆತ ಬೊಗಸೆಯಷ್ಟು ನೀರು ಚಿಮುಕಿಸಿದ. ಮತ್ತು ತನ್ನ ವಿಜಯೋತ್ಸಾಹದ ಧ್ವಜಗಳೆಂಬಂತೆ ಆ ಐದೂ ಎಲೆಗಳನ್ನು ಅಭಿಮಾನದಿಂದ ನೋಡಿದ.

ಕೆಂಪು ಪ್ರಕಾಶದೊಳಗೆ ಬಳ್ಳಿ ಕ್ರಮೇಣ ಬೆಳೆಯಲಾರಂಭಿಸಿತು. ಎಲೆಗಳು ಹತ್ತಾದವು. ಬೇರಿಗೆ ಇನ್ನೊಂದು ರಂಬೆ ಹುಟ್ಟಿತು. ಆದರೆ ಬಳ್ಳಿ ಮುಂದೆ ಸರಿದಂತೆ ಹಿಂದಿನ ಒಂದೆರಡು ಎಲೆಗಳು ಉದುರಲಾರಂಭಿಸಿದವು. ಮತ್ತು ಎಳೆ ಬೇರು ಕಂದು ಬಣ್ಣಕ್ಕೆ ತಿರುಗಿ ಬಿರುಸಾಯಿತು. ಆತ ಮೂಲೆಯನ್ನು ಕೆತ್ತಿ ಅಗಲ ಮಾಡಿದ. ಈಗ ಆ ಬಳ್ಳಿ ಕಬ್ಬಿನಷ್ಟು ಬೆಳೆದರೂ ಯಾವ ತೊಂದರೆಯಿರಲಿಲ್ಲ. ಬಳ್ಳಿ ಬೆಳೆದಂತೆ ಆತನ ಉತ್ಸಾಹ ಇಮ್ಮಡಿಸಿತು. ಆ ಬಳ್ಳಿಯೊಳಗೆ ಹರಿಯುವ ಜೀವರಸ ಏಕಾಗ್ರತೆಯಿಂದ ಆಲಿಸುವಂತೆ ಆತ ಮೊಣಕಾಲೂರಿ ಅಲ್ಲಿ ಬಹಳ ಹೊತ್ತು ಕೂಡಲಾರಂಭಿಸಿದ. ಕೆಳಗುರುಳಿದ ಎಲೆಯನ್ನು ಮುದ್ದೆ ಮಾಡಿ ಅದರ

ವಾಸನೆ ತೆಗೆದುಕೊಂಡ. ಮಳೆಯಲ್ಲಿ ತೊಯ್ದ ಆಕಳು ಕೊಟ್ಟಿಗೆಗೆ ಹಿಂದಿರುಗಿದಾಗ, ಅದರ ಮುಂದೆ ಅದೇ ತಾನೆ ಕೊಯ್ದು ಹಸಿರಾದ ಹಸಿರು ಹುಲ್ಲು ತಂದು ಹಾಕಿದಾಗ ಎಂಥ ಸಮ್ಮಿಶ್ರ ವಾಸನೆ ಬರುತ್ತದೋ ಅಂಥದೇ ವಾಸನೆ ಅದಕ್ಕಿತ್ತು. ಇದೆಂಥ ಬಳ್ಳಿ? ಇದಕ್ಕೆ ಹೂವು ಬರಬಹುದೇ? ಎಂಥ ಬಣ್ಣ?

ಆದರೆ ಕೇವಲ ಉತ್ಸಾಹದಿಂದ ಈ ಪ್ರಶ್ನೆ ಹುಟ್ಟಿಕೊಂಡಿತ್ತು. ಎಂಥ ಜದ್ದಿನಿಂದ ಈ ಬಳ್ಳಿ ಬೆಳೆಯುತ್ತಿದೆಯಲ್ಲ ಎಂದು ಅಭಿಮಾನಪಟ್ಟ. ಈಗ ಬಳ್ಳಿಗೆ ಮೊಳಕೆಯೊಡೆದು, ಅದರ ತುಂಬ ಚಿಗುರೆಲೆಗಳು ಕಾಣಿಸಿದವು. ಗಾಳಿಯಾಡಲು ಜೋಡಿಸಿದ ಪೈಪಿನಬಾಯಿ ಕೇವಲ ಒಂದು ಮಾರಿನಷ್ಟು ಎತ್ತರದಲ್ಲಿತ್ತು. ಈ ಅಂತರವನ್ನು ಬಳ್ಳಿ ಅದೆಷ್ಟೊ ಬೇಗ ಕ್ರಮಿಸಬೇಕೆಂಬ ಉತ್ಕಟ ಇಚ್ಛೆ ಅವನಲ್ಲಿ ಉಂಟಾಯಿತು. ಮಲಗಿ ಎದ್ದಾಕ್ಷಣ ಆತನ ದೃಷ್ಟಿ ಮೊದಲು ಆ ಬಳ್ಳಿಯ ಕಡೆಗೆ ಹೋಗಲಾರಂಭಿಸಿತು. ಬೆಳವಣಿಗೆಯಲ್ಲಿ ಏನೂ ಪ್ರಗತಿ ಕಾಣಿಸದಿದ್ದರೆ ಆತ ನಿರಾಶೆಗೊಳ್ಳುತ್ತಿದ್ದ. ಎಂದಿನಂತೆ ಹಾಲಿನ ಬಟ್ಟಲು, ದಿನಕ್ಕೆರಡು ಸಲ ಊಟದ ತಟ್ಟೆ ಬರುತ್ತಿತ್ತು. ಎರಡು ನಿದ್ದೆಗಳ ನಡುವಿನ ಅಂತರವಾದ ರಾತ್ರಿಯೂ ಕಳೆಯುತ್ತಿತ್ತು. ಕೊನೆಗೆ ಆ ಬಳ್ಳಿ ಪೈಪಿನ ಬಾಯಿಯ ಹತ್ತಿರ ಬಂತು. ಆ ದಿನ ಆತ ಎಷ್ಟು ಆನಂದಗೊಂಡಿದ್ದನೆಂದರೆ ಒಂದೇ ಕಡೆ ನಿಲ್ಲುವುದು ಆತನಿಗೆ ಸಾಧ್ಯವಾಗಲಿಲ್ಲ. ಊಟವನ್ನು ಅರ್ಧಕ್ಕೆ ಬಿಟ್ಟ. ಮತ್ತು ತ್ರಿಶೂಲದ ಆಧಾರ ಕೊಟ್ಟು ಎಲೆಯನ್ನು ಪೈಪಿನೊಳಗೆ ತೂರಿದ. ಇದು ಪೂಜೆಯ ತ್ರಿಶೂಲ. ಆತ ಇದರಿಂದ ಅಕ್ಷರ ಬರೆಯಲು ಪ್ರಯತ್ನಿಸಿದ್ದ. ಇಂದು ಅದೇ ತ್ರಿಶೂಲ ಬಳ್ಳಿಯ ಜೀವನಕ್ಕೆ ಆಧಾರವಾಗಿತ್ತು. ಬಳ್ಳಿ ಚಿಗುರಬಹುದು, ಹೂವು ಹಣ್ಣು ಬಿಡಬಹುದು. ಒಂದು ದಿನ ಭಾರದಿಂದ ಕುಸಿದು ತ್ರಿಶೂಲ ನೆಲಕ್ಕೆ ಬೀಳಬಹುದು ತನ್ನ ಹಾಗೇ. ಆದರೆ ತಾನು ಹೂ ಹಣ್ಣು ಬಿಡದೆ ನೆಲಕ್ಕೆ ಬಿದ್ದೆ!

ಬಳ್ಳಿಯ ಬದುಕಿನ ಈ ಕ್ಷಣದ ಬಗ್ಗೆ ಆತನ ಮನಸ್ಸು ತುಂಬಿ ಬಂತು. ಈ ಬಳ್ಳಿ ಬೆಳೆಯುತ್ತದೆ. ಆದರೆ ಎಂತಹ ಹೂವು - ಹಣ್ಣು ಬಿಡುತ್ತದೆ - ಎಂಬುದು ಮಾತ್ರ ನನಗೆ ಕಾಣುವ ಹಾಗಿಲ್ಲ. ಅದಕ್ಕೆ ಭವಿಷ್ಯವಿದೆ. ಆದರೆ ನನಗೆ ಕ್ಷುಲ್ಲಕ ವರ್ತಮಾನವೂ ಇಲ್ಲ. ಆತ ಕಾಳಜಿಯಿಂದ ಎಲೆಯನ್ನೇನೋ ಒಳಗೆ ತೂರಿದ; ಆದರೆ ಆತನ ಕೈ ಕ್ಷಣ ಕಾಲ ತಡವರಿಸಿತು. ಈ ಎಲೆ ಒಳಗೆ ಹೋಗಿ ಬೆಳೆಯುತ್ತಾ ಹೊರಟರೆ ತನಗೆ ಮಾತ್ರ ಹಸಿರು ಕಾಣಿಸುವ ಹಾಗಿಲ್ಲ. ಇದು ಅರ್ಥವಾಗುತ್ತಲೇ ಆತನ ಮನಸ್ಸು ಖಿನ್ನವಾಯಿತು. ಏನೋ ಮುಗಿದ ಹಾಗೇ ಅವನಿಗೆ ಅನಿಸಿತು. ಕಾಲದ ಒಂದು ತುಣುಕು ಒಮ್ಮೆಲೆ ನಿರ್ಜೀವಗೊಂಡಿತು.

ಭಾರವಾದ ಹೃದಯದೊಂದಿಗೆ ಆತ ಮರಳಿದ. ಮತ್ತು ಆಸನದ ಮೇಲೆ ಕುಳಿತ. ಆತನಿಗೆ ಅನಿಸಿತು, ಇನ್ನು ಮುಂದೆ ತಾನಲ್ಲಿಗೆ ಹೋಗದಿದ್ದರೂ ನಡೆದೀತು. ತನ್ನ ಕಣ್ಮರೆಯಲ್ಲೂ ಸಹ ಈ ಬಳ್ಳಿ ಬೆಳೆಯುತ್ತದೆ; ಮೊಳಕೆ ಒಡೆಯುತ್ತದೆ. ಮತ್ತು ಒಂದು ದಿನ ಇಡೀ ಪೈಪ್ ತುಂಬಿ ಹರಿಯುವ ಪ್ರವಾಹದಂತೆ ಈ ಬಳ್ಳಿ ವೇಗವಾಗಿ ಹೊರ ನುಗ್ಗಿ ಪ್ರಕಾಶದ ಕಡೆಗೆ ಹೋಗುತ್ತದೆ.

ಇಡೀ ಪೈಪ್ ತುಂಬಿ, ಅಂದ ಕೂಡಲೇ ಆತನ ಅಮಲು ಜರ್ರನೇ ಇಳಿಯಿತು. ಹಿಂಬಾಲಿಸಿ ಬಂದ ಅಸ್ಥಿಪಂಜರ ಹೆಗಲ ಮೇಲೆ ಕೈ ಇಟ್ಟಂತೇ ಆತನ ಕಣ್ಣುಗಳು ಭಯದಿಂದ ಅರಳಿದವು. ಆತ ಸ್ತಂಭೀಭೂತನಾದ. ಆಗಷ್ಟೇ ಊಟ ಬಂದಿತ್ತು. ಅದನ್ನಾತ ದಿಟ್ಟಿಸಿದ. ಬಳ್ಳಿಯು ಬೆಳೆಯುತ್ತಾ ಮೇಲೆ ಹೋಗುವುದಂತೂ ನಿಜ. ತನ್ನ ಶ್ವಾಸವನ್ನು ಹೀರಿ ಅದು ಬೆಳೆಯುತ್ತದೆ ಎನ್ನುವುದು ಮೊದಲೇ ತಿಳಿಯಲಿಲ್ಲವಲ್ಲ? ಬಳ್ಳಿ ಮೇಲೆ ಸೂರ್ಯಕಿರಣ ಸಂಪಡಿಸಲ್ಪಡುತ್ತದೆ. ಆದರೆ ಅದೃಶ್ಯ ಪ್ರವಾಹದಂತೆ ಕೆಳಗಿಳಿದು ಬರುತ್ತಿದ್ದ ಈಗ ಕೊನೆಗೊಂದು ದಿನ ಸ್ಥಗಿತಗೊಳ್ಳುತ್ತದೆ!

ಹಾಗಾದರೆ ಈಗ ಉಳಿದಿರೋದು ಒಂದೇ ಮಾರ್ಗ. ನೀನು ಬದುಕುತ್ತೀಯೋ ಅಥವಾ ಬಳ್ಳಿ ಬೆಳೆಯುತ್ತದೋ? ಬಿಳಿ, ಹಳದಿ, ನೀಲಿ, ಹಸಿರು ಬಣ್ಣದಲ್ಲಿ ಒದ್ದಾಡುತ್ತಾ ತಟದಲ್ಲಿರುವ

ಕೆಂಪು ಬಣ್ಣಕ್ಕೆ ನೂಕಲ್ಪಟ್ಟ ನೀನು ಬದುಕುವಿಯೋ ಅಥವಾ ಕಗ್ಗತ್ತಲೆಯಲ್ಲಿ ಜಿದ್ದಿನಿಂದ ಪ್ರಕಾಶದ ಕಡೆಗೆ ಹೊರಟಿರುವ ಈ ಬಳ್ಳಿ ಬದುಕುತ್ತದೆಯೋ? ಕೆಂಪು ದೀಪ, ಆ ಬೆಳಕಿನಲ್ಲಿ ಭೀಷಣವಾಗಿ ಕಾಣುವ ಊಟದ ತಾಟು ಮತ್ತು ಫಳಫಳ ಹೊಳೆಯುವ ಅದರ ಗೋಲಾಕಾರದ ಅಂಚು, ಇವೆಲ್ಲ ತನ್ನನ್ನು ಉತ್ಸಾಹದಿಂದ ದಿಟ್ಟಿಸುತ್ತವೆ ಎಂದೇ ಆತನಿಗೆ ಭ್ರಮೆಯಾಯಿತು. ಅಷ್ಟೇ ಅಲ್ಲ ಕೆಲವೇ ಅಂತರದಲ್ಲಿದ್ದ ಆ ಅಸ್ಥಿಪಂಜರಗಳೂ ಸಹ ನನ್ನ ಉತ್ತರದ ಹಾದಿ ಕಾಯುತ್ತಿವೆ ಎಂದೆನಿಸಿತು. ಆತ ತಾಟಿನಲ್ಲಿದ್ದ ಅನ್ನ ಕಲಿಸಿದಂತೆ ಮಾಡಿದ, ಆದರೆ ಆತನ ಹಸಿವು ಮಾತ್ರ ಸತ್ತು ಹೋಗಿತ್ತು.

ಕೊನೆಗಾತ ಒಂದು ನಿರ್ಧಾರಕ್ಕೆ ಬಂದ. ಈಗ ಆತನಲ್ಲಿ ಮೊದಲನೇ ದಿನದ ನಿರಾಶೆಯಿರಲಿಲ್ಲ. ಅಥವಾ ಉತ್ಸಾಹದ ಹೊಸ ಬುಗ್ಗೆಯೂ ಇರಲಿಲ್ಲ. ಎಲ್ಲ ಬಣ್ಣ ಬದಿಗೊತ್ತಿ ಸ್ಥಿರವಾದ ಸಂಧಿ ಪ್ರಕಾಶದಂತಾದ ಮನಸ್ಸು ತಾಟನ್ನು ಪಕ್ಕಕ್ಕೆ ಸರಿಸಿತು. ಕಾವೀ ಬಟ್ಟೆಯ ಮೇಲಿದ್ದ ಕುಸುರಿಯಿಂದ ಉದ್ಭವಾದ ನೂಲಿನ ಎಳೆಯೊಂದನ್ನು ಹೊರಗೆಳೆದ. ಅದನ್ನು ಪೈಪಿನ ಬಾಯಿಗೆ ಕಟ್ಟಿದ. ಪೈಪಿನ ಬಾಯಿಂದ ಬಂದ ಗಾಳಿಗೆ ಎಳೆ ಸಮಾಂತರವಾಗಿ ಕಂಪಿಸಲಾರಂಭಿಸಿತು. ಇದೊಂದು ಘಟಿಕಾಪಾತ್ರೆ. ಮುಹೂರ್ತ ಸಮೀಪಿಸಿದ ತಕ್ಷಣ ತಾನೂ ಸಿದ್ಧವಾದರಾಯಿತು.

ಅನಂತರ ಆತ ಮೊದಲಿನಂತೇ ಸಾವಕಾಶವಾಗಿ ಸ್ನಾನ ಮಾಡಲಾರಂಭಿಸಿದ. ಆತನ ಊಟವು ನಿರಾತಂಕವಾಗಿ ಸಾಗಿತ್ತು. ಹಾಸಿಗೆಯ ಮೇಲೆ ಉರುಳಿದಾಕ್ಷಣ ಗಾಢವಾದ ನಿದ್ದೆ ಬೀಳುತ್ತಿತ್ತು. ಆದರೆ ಇದನ್ನೆಲ್ಲ ಯಾರೋ ಬೇರೆಯವರೇ ಮಾಡುತ್ತಿದ್ದಾರೆ, ತಾನು ಮಾತ್ರ ನೆರಳಿನಲ್ಲಿ ವೀಕ್ಷಿಸುತ್ತಿದ್ದೇನೆ ಎಂಬ ಒಂದು ಪ್ರಕಾರದ ಅಲಿಪ್ತ ಭಾವನೆ ಆತನಲ್ಲಿ ಹುಟ್ಟಿಕೊಂಡಿತು. ಈ ಮೊದಲು ಯಾವ ರೀತಿಯಲ್ಲಿ ಬಳ್ಳಿಯನ್ನು ತಪ್ಪದೇ ನೋಡುತ್ತಿದ್ದನೋ ಅದೇ ರೀತಿ ಈಗಾತ ಐದಾರು ಸಲ ಕಂಪಿಸುವ ಆ ಎಳೆಯನ್ನು ನೋಡುತ್ತಿದ್ದ; ಆದರೆ ಆತನ ನೋಟದಲ್ಲಿ ಈಗ ನಿರ್ವಿಕಾರ ತುಂಬಿತ್ತು. ಕೆಂಪು ಪ್ರಕಾಶದಿಂದ ಹೊಳೆಯುವ ನೂಲಿನ ಎಳೆ ಒಂದು ನಾಡಿಯಿದ್ದಂತೆ. ಅದು ಕ್ರಮೇಣ ದುರ್ಬಲಗೊಳ್ಳುತ್ತಿದೆ ಎನ್ನುವುದು ನೀರಿನಲ್ಲಿ ಬಿದ್ದ ನಾಣ್ಯದಷ್ಟು ಸ್ಪಷ್ಟವಾಗಿತ್ತು. ನೂಲಿನ ಎಳೆ ಈಗ ನೆಲದ ಕಡೆಗೆ ವಾಲುತ್ತಿತ್ತು. ಹಾಸಿಗೆಯ ಮೇಲೆ ಮಲಗಿದಲ್ಲೇ ಆತನಿಗೆ ಅನಿಸಿತು. ಈಗ ಬಳ್ಳಿ ಎಷ್ಟು ಬೆಳೆದಿರಬಹುದು? ಈಗಲಾದರೂ ಅದು ಹೂ ಬಿಟ್ಟಿರಬಹುದೇ? ಅಥವಾ ಸೂರ್ಯಪ್ರಕಾಶ ಸ್ಪರ್ಶಕೊಂಡ ಬಳಿಕವೇ ಈ ಚಮತ್ಕಾರ ನಡೆಯಬಹುದೇ? ಅದರ ಬಗ್ಗೆ ಚಿಂತಿಸುವಾಗ ಕದಡಿದ ನೀರಿನೊಳಗಿನ ಚಿತ್ರದಂತೇ ಭಾಸವಾಗುತ್ತಿತ್ತು ಆತ ಗಾಬರಿಗೊಂಡು ತಕ್ಷಣ ಎದ್ದು ಕೂಡ್ರುತ್ತಿದ್ದ. ಡಬ್ಬಿ ತೆರೆದು ಗಾಂಜಾವನ್ನು ನೋಡಿ ಸಮಾಧಾನ ತಂದುಕೊಳ್ಳುತ್ತಿದ್ದ. ಅನಂತರ ಮತ್ತೆ ಶಾಂತವಾಗಿ ನೂಲಿನ ಎಳೆಯನ್ನು ದಿಟ್ಟಿಸುತ್ತಿದ್ದ.

ಕೊನೆಗೊಂದು ದಿನ ಆತನಿಗೆ ಒಳಗಿನ ಗಾಳಿ ಮಂದ ಹಾಗೂ ಕ್ಷೀಣವಾಗಿದ್ದು ಗಮನಕ್ಕೆ ಬಂತು. ಸ್ನಾನಗೃಹದವರೆಗೆ ಹೋಗಿ ಬಂದರೂ ತೇಕಲಾರಂಭಿಸಿದ. ಆಸನದ ಕಡೆಗೆ ಮರಳಿದ. ಈಗ ಕಾಣುವ ದೃಶ್ಯದ ಬಗ್ಗೆ, ಆತನಿಗೆ ಕಲ್ಪನೆ ಇದ್ದರೂ ಆತ ಒಂದು ಕ್ಷಣ ದಿಗ್ಮೂಢನಾದ. ನೂಲಿನ ಎಳೆ ಈಗ ಪೈಪಿನ ಬಾಯಿಯ ಮೇಲೆ ನಿರ್ಜೀವಗೊಂಡು ಬಿದ್ದಿತ್ತು. ಆಗಾಗ ಆ ಎಳೆ ಕ್ಷಣ ಕಾಲ ಕಂಪಿಸುತ್ತಿತ್ತು. ಈಗ ಆತನ ಮನಸ್ಸು ಸಂಪೂರ್ಣ ಮುದುಡಿ ಹೋಯಿತು. ಆತ ಸ್ನಾನಗೃಹದ ಕಡೆಗೆ ಹೊರಟ. ವ್ಯವಸ್ಥಿತವಾಗಿ ಉಗುರು ಕತ್ತರಿಸಿಕೊಂಡ. ಬೆರಳಿನಿಂದ ಕೂದಲು ಬಾಚಿಕೊಂಡ. ನಲ್ಲಿ ಪ್ರಾರಂಭಿಸಿ ತಾಟು ನೀರಿನ ಕೆಳಗಿಟ್ಟ. ಅದು ತುಂಬಿ ಬಳ್ಳಿಯ ಬೇರಿನ ಕಡೆಗೆ ನೀರು ಹರಿಯಿತು. ಈಗ ಬೇರು ಸಾಕಷ್ಟು ಬಲಿಷ್ಠವಾಗಿ ತಲೆ ಎತ್ತಿ ನಿಂತಿತ್ತು. ಅದನ್ನಾತ ಸ್ಪರ್ಶ ಮಾಡಿದ, ಬೆರಳಿನಿಂದ ಮುಟ್ಟಿ ಮುಟ್ಟಿ ನೋಡಿದ. ಅನಂತರ ಮತ್ತೆ ಹಾಸಿಗೆಗೆ ಹಿಂದಿರು

ಗಿದ. ಮಡಚಿದ ಹೊದಿಕೆಯನ್ನು ಸರಿಪಡಿಸಿದ. ''ನಿಮ್ಮೊಳಗಿನ ಯಾರೇ ಜಟಾಧಾರಿಯಾಗಿರಲಿ, ನಿಮ್ಮ ಉಪಕಾರ ಮಾತ್ರ ಅನಂತವಾದುದು. ದೀಪ ಪೂರ್ಣ ಆರುವ ಮೊದಲೇ ಅದನ್ನು ನಾವು ನಂದಿಸಬಹುದೆನ್ನುವುದನ್ನು ನೀವು ನನಗೆ ತಿಳಿಸಿದಿರಿ ಹಾಗೂ ಮಾರ್ಗವನ್ನು ತೋರಿಸಿದಿರಿ.'' ಆತ ತನ್ನಷ್ಟಕ್ಕೆ ಮಾತನಾಡಿದ. ಎದುರಿನ ಗೋಡೆಗೆ ನಮಸ್ಕರಿಸಿದ.

ಆತ ಕಾಲು ಮಡಚಿ ಹಾಸಿಗೆಯ ಮೇಲೆ ಕುಳಿತ. ಅಲ್ಲಂತೂ ಗಾಳಿ ತುಂಬಾ ಕ್ಷೀಣವಾಗಿತ್ತು. ಉಸಿರಾಡುವಾಗ ಬಟ್ಟೆಯ ಅಂಚು ಒಳ-ಹೊರಗೆ ಚಲಿಸುತ್ತಿದೆಯೇನೊ ಎಂದು ಅನಿಸಿತು. ಆದರೆ ಈಗ ಮಾತ್ರ ಆತನ ಕಣ್ಣೆದುರಿಗೆ ಒಂದೇ ದೃಶ್ಯ ಕಾಣಿಸುತ್ತಿತ್ತು. ಹಸಿರು ಜೀವರಸ ಪಡೆದು ಅರಳಿದ ನೂರಾರು ಹಸಿರಾದ ಎಲೆಗಳನ್ನು ಉತ್ಸಾಹದಿಂದ ಹೊತ್ತು ಮೇಲಕ್ಕೇರುವ ಆ ಬಳ್ಳಿ! ಆತನಿಗೆ ಅನಿಸಿತು, ನೀನು ಇದೇ ರೀತಿ ಮೇಲೆ ಏರು.

ಕಗ್ಗತ್ತಲೆಯ ಮೂಲೆಯಲ್ಲಿ ಕೊಳೆಯುತ್ತಿರುವ ನಿನ್ನ ಬದುಕು ಹೊಸಕಿಹೋಗದಂತೆ ಇನ್ನೂ ಮೇಲಕ್ಕೇರಿ ಒಂದು ಕ್ಷಣ ಸೂರ್ಯನ ಕಿರಣವನ್ನು ಸ್ಪರ್ಶ ಮಾಡಿ ತೃಪ್ತಿ ಪಡಲಿ. ನಿನ್ನಲ್ಲೂ ಹೂವು ಅರಳಬಹುದು -

ನಿನಗೆ ಬಂಗಾರದ ತಟ್ಟೆಯಾಕಾರದ ಹೂವು ಅರಳಲಿ ಮತ್ತು ಅದರ ಸ್ಪರ್ಶದಿಂದ ಪರಾಗ ಹರಡಿ ಬೆರಳಿನ ತುದಿ ಹಳದಿ ವಾಸನೆಯನ್ನು ಸುತ್ತಲೂ ಬೀರಲಿ.

ನಿನ್ನಲ್ಲಿ ಹೂವು ಅರಳಿದರೆ, ಇಂಥ ಸಾವಿರಾರು ಹೂಗಳೊಂದಿಗೆ ನಿನ್ನ ಮೇಲೆ ಎರಗಿದ ಆಗಸವನ್ನು ಎದುರಿಸು. ಅದರ ನೀಲಿ ಸಾಕ್ಷಿಯ ಎದುರಿನಲ್ಲಿ ಆ ಹೂಗಳಲ್ಲಿ ಸೂರ್ಯ ಪ್ರಕಾಶವನ್ನು ಸಂಗ್ರಹಿಸು.

ನಿನಗೂ ಒಂದು ವೇಳೆ ಹೂವು ಬಿಟ್ಟರೆ -

ನಿನಗೆ ಪ್ರತಿ ಎಲೆಯ ಮರೆಯಲ್ಲಿ ಪುಟ್ಟ ಹಾಗೂ ಕೆಂಪು ಹಣ್ಣು ಬಿಡಲಿ. ಅದೆಷ್ಟು ರಸಭರಿತವಾಗಿರಬೇಕೆಂದರೆ, ಅದರ ಪ್ರತಿಯೊಂದು ಕೆಂಪು ಬಣ್ಣದೊಳಗೆ ಸೂರ್ಯನ ಒಂದೊಂದು ಕಣ ಸುಖದಿಂದ ರಮಿಸುತ್ತಿರಲಿ.

ನಿನಗೆ ಒಂದು ವೇಳೆ ಹಣ್ಣು ಬಿಟ್ಟರೆ, ನೀನು ಕ್ಷಿತಿಜವನ್ನು ದಿಟ್ಟಿಸು. ಯಾಕೆಂದರೆ ನೀನು ಇಂಥ ಕತ್ತಲೆಯಿಂದ ಅದನ್ನು ಹುಡುಕುತ್ತಲೇ ಬಂದಿರುವಿ.

ಅನಂತರ ನಿನ್ನ ಬೀಜದ ಹಣ್ಣುಗಳು ಎಲ್ಲ ಕಡೆ ಪಸರಿಸಿ ನಿನ್ನ ವಿಜಯದ ಗುರುತು ಎಲ್ಲೆಡೆ ಮೊಳೆಯಲಿ. ಒಂದು ವೇಳೆ ಅಣುವಿನಷ್ಟು ಚುಕ್ಕೆ ನಿನ್ನ ಕಣ್ಣಿಗೆ ಬಿದ್ದರೂ ಅದನ್ನು ಸ್ವಾಗತಿಸು.

ಆ ಅಣುವಿನ ಅಭಿಮಾನದಲ್ಲಿ ಅದು ರಾತ್ರಿಯ ಅನಂತ ಕತ್ತಲೆಯನ್ನೂ ಆಹ್ವಾನಿಸಿ ಅದರ ಒಂದು ಕಣವನ್ನು ಗೆದ್ದು ಬೆಳಕನ್ನು ಮೂಡಿಸಿದೆ. ಆಗಸದಲ್ಲಿ ಪುಟ್ಟ ಹಕ್ಕಿ ಹಾರಾಡುವುದನ್ನು ಕಂಡರೂ ಅದಕ್ಕೆ ಆತಿಥ್ಯ ನೀಡು. ಯಾಕೆಂದರೆ ಎರಡು ಎಳೇ ರೆಕ್ಕೆಗಳು ಆತ್ಮ ವಿಶ್ವಾಸದಿಂದ ಮೋಡಗಳನ್ನು ಹಿಂದಕ್ಕೆ ದೂಡುತ್ತಿವೆ. ಒಂದು ವೇಳೆ ಯಾವುದೇ ಒಬ್ಬ ಹುಡುಗ ನಿನ್ನ ರಸಭರಿತ ಎಲೆ ಮುರಿದು, ಮಡಚಿ ಅದನ್ನು ಪುನಃ ತೆರೆದರೆ ಮತ್ತು ಎಲೆಯ ಕನ್ನಡಿ ಮಾಡಿದರೆ, ಅಥವಾ ನಿನ್ನ ಹಳದಿ ಹೂವು ಹರಿದು ಬೆರಳನ್ನು ಹಳದಿ ಪುಡಿಯಿಂದ ಲೇಪಿಸಿಕೊಂಡರೆ ಅಥವಾ ನಿನ್ನ ಕೆಂಪು ಹಣ್ಣು ಕಿತ್ತು ಹಿಚುಕಿ ರಸ ಹಿಂಡಿದರೆ, ನೀನು ಆತನ ಮೇಲೆ ಕೋಪಗೊಳ್ಳಬೇಡ.

ಏಕೆಂದರೆ ಲಕ್ಷಾಂತರಕ್ಕೊಬ್ಬನಾದ ಅವನೂ ಸಹ ಸುತ್ತಲಿನ ಅಭೇದ್ಯವಾದ ಕಗ್ಗತ್ತಲೆಯ ಗೋಡೆಯನ್ನು ಭೇದಿಸಿ ಸೂರ್ಯನ ಕಡೆ ಬರುವ ಪ್ರಯತ್ನವನ್ನು ಮಾಡುತ್ತಿರಬಹುದು. ಒಂದು ವೇಳೆ ಹಾಗಿದ್ದರೆ, ಅವನು ನಿನ್ನ ರಕ್ತಸಂಬಂಧಿಕನೇ ಇರಬೇಕು.

ಆದ್ದರಿಂದ ನೀನು ಅವನ ಮೇಲೆ ಕೆರಳಬೇಡ.

ಒಂದು ಎಲೆ ನೀನು ಕಳೆದುಕೊಂಡರೆ ಬಡವನಾಗುವುದಿಲ್ಲ.

ಒಂದು ಹೂವು ಉರುಳಿದರೆ ನಿನ್ನ ಸೌಂದರ್ಯ ಮಾಸುವುದಿಲ್ಲ,

ಒಂದು ಹಣ್ಣು ಇಲ್ಲವಾದರೆ ನಿನ್ನ ಬದುಕಿನಲ್ಲಿ ನಿರಾಶೆ ಮೂಡುವುದಿಲ್ಲ. ಇಷ್ಟೆಲ್ಲ ವೈಭವ ನಿನ್ನಲ್ಲಿ ಇದೆ. ಇಂಥ ವೈಭವ ನಿನಗೆ ದೊರಕಲಿ! ಇದರಲ್ಲೆ ನನಗೆ ಸುಖವಿದೆ. ಯಾಕೆಂದರೆ ನಿನ್ನ ಒಂದು ಎಲೆ ಅಂದರೆ ನನ್ನ ಒಂದೊಂದು ಶ್ವಾಸ, ಆದ್ದರಿಂದಲೇ ನೀನೆಂದರೆ ಸ್ವತಃ ನಾನೇ. ನಾನು ನಾಶಗೊಂಡಿಲ್ಲ, ಕೇವಲ ರೂಪಾಂತರಗೊಂಡಿದ್ದೇನೆ.

ನೀನು ನಿನ್ನ ಸಾಮರ್ಥ್ಯದಿಂದಲೇ ಸೂರ್ಯ ಪ್ರಕಾಶದ ಕಡೆಗೆ ಬಂದ ವಿಷಯ ಉಳಿದವರಿಗೂ ಅರ್ಥವಾಗಲಿ.

ನೀನು ಕತ್ತಲೆಯಲ್ಲಿ ಕೆಂಪು ಪ್ರಕಾಶದೊಳಗೆ ಹೊಸಕಿ ಹೋಗಲಿಲ್ಲ. ಆದರೆ ನಾನೇ ಹಸಿರು ಕಾರಂಜಿಯಂತೆ ಹೊರಗೆ ಚಿಮ್ಮಿದ್ದೇನೆ. ಇದು ಸಹ ಅರ್ಥವಾಗಲಿ; ಅಂತೆಯೇ ನೀನು ಇದೇ ರೀತಿ ಮೇಲಕ್ಕೆ ಏರು.

ಅನಂತರ ಆತ ಡಬ್ಬಿಯನ್ನು ತೆರೆದ ಮತ್ತು ಗಾಂಜಾದ ಗುಳಿಗೆಯನ್ನು ಬಾಯೊಳಗೆ ತುರುಕಿದ. ಆಗ ಆತನ ನಿಶ್ಚಿತವಾದ ಶಾಂತ ಮನಸ್ಸಿನಲ್ಲಿ ಮುಳುಗುವ ಸೂರ್ಯಬಿಂಬದ ಹಕ್ಕಿಯಂತೇ ಒಂದು ನೆರಳು ಹಾದು ಹೋಯಿತು. ಆತನಿಗೆ ಅನಿಸಿತು. ನನಗಿಂತ ಮೊದಲಿನ ಸ್ವಾಮಿ ನನಗಾಗಿ ಈ ಉಪಕಾರವನ್ನು ಮಾಡಿದ. ಆದರೆ ನಾನು ಮಾತ್ರ ಯಾರಿಗೂ ಏನೂ ಉಳಿಸಲಿಲ್ಲ. ನಾನು ಬೇರೆಯವರ ಉಪಕಾರದಿಂದ ಬದುಕಿದೆ. ಈಗ ನನ್ನ ಶ್ವಾಸ ಬಳ್ಳಿಯ ಮುಖಾಂತರ ಹೊರಗೆ ಹೊರಟಿದೆ. ಅದರರ್ಥ ನಾನೇ ಮೇಲೆ ಹೊರಟಿದ್ದೇನೆ. ಆಗಲಾದರೂ ನನ್ನ ಋಣವನ್ನು ತೀರಿಸಬಹುದೇ?

ಆತ ಹಾಗೆಯೇ ಬಿದ್ದುಕೊಂಡ. ಈಗ ಮೇಲಿನ ಗೋಡೆ ಕೆಳಗಿಳಿದು ಎದೆಯನ್ನು ಅಮುಕಿದಂತಾಯಿತು. ಇಷ್ಟು ದಿನ ಯಾವ ಅವಸರವೂ ಇಲ್ಲದೇ ಹಾದಿ ಕಾಯುತ್ತಿದ್ದ ಕಲ್ಲಿನ ಗೋಡೆ, ಸ್ನಾಯುವುಳ್ಳ ಕೈಯಾಯಿತು. ಮತ್ತು ಆ ಕೈ ಅವನ: ಹಿಚುಕಲಾರಂಭಿಸಿತು. ಪ್ರತಿಸಲ ಆತನ ಸಹಾಯಕ್ಕೆ ಬಂದ ಆತನ ಧ್ವನಿ ಈಗ ಸತ್ತು ಹೋಗಿತ್ತು. ಇಷ್ಟು ದಿನಗಳ ಬಳಿಕ ಮೊದಲನೇ ಸಲ ಹೊರಗಿನ ಧ್ವನಿ ಕೇಳಿಸಲಾರಂಭಿಸಿತು. ಎಲ್ಲೋ ನಗಾರಿ ಬಾರಿಸಿದ ಸದ್ದು. ಅದರ ಧ್ವನಿ ಕೇಳಿದಾಕ್ಷಣ ಆತ ಹೇಳಲಾರಂಭಿಸಿದ. ನೀನು ಇದೇ ರೀತಿ ಮೇಲೆ ಏರು. ನಿನ್ನ ಹಳದಿ ಹೂವಿನಿಂದ ಸೂರ್ಯ ಪ್ರಕಾಶವನ್ನು ಹೀರು, ಮತ್ತು ಆಕಾಶವನ್ನು ಎದುರಿಸು.

ಈ ನಗಾರಿಯ ಸದ್ದು ತುಂಬಾ ಸಮೀಪಕ್ಕೆ ಬಂತು ಮತ್ತು ಧ್ವನಿಯ ವೇಗ ಮತ್ತಷ್ಟು ಹೆಚ್ಚಿತು. ಅದರೊಂದಿಗೆ ಕೆಂಪು ಪ್ರಕಾಶದ ಅಲೆ ಕಂಪಿಸಲಾರಂಭಿಸಿತು. ಈಗ ಆತನ ಧ್ವನಿ ಕೇಳಿಸದೇ ಬರೇ ತುಟಿಗಳು ಮಾತ್ರ ಅಲುಗಾಡಲಾರಂಭಿಸಿದವು.

ಮತ್ತು ದಟ್ಟ ರೆಕ್ಕೆಯಂಥ; ನೆರಳಿನ ನಿದ್ದೆಯಲ್ಲಿ ಮುಳುಗಿ ಕೊನೆಗಾತ ಶಾಂತವಾಗಿ ಅಂತಿಮ ಲಾಸ್ಯದ ನಗುವನ್ನು ಮರೆ ಮಾಡಿ ನಿಶ್ಚಲಗೊಂಡ. ●

---

Printed and Published by B.S.SAVANOOR on behalf of Loka Shikshana Trust a[t]
'Samyukta Karnataka Press', Koppikar Road, Hubli - 580 020. (Phone: 64303)
No. 2, Residency Road, Bangalore - 560 025 (Phone: 213265).
**Managing Editor: K.SHAMARAO**
Representatives: Bombay: V.Satyamurthy (Phone: 5510592)
Madras: S.K.Murthi (Phone: 414870)
New Delhi: V.K.Chopra (Phone: 7114785)
Registered with the Registrar of Newspapers for India
under No. 3633/57.

